



# ರೇಣುಕ ಕೆಸರುಮಡು

ತುಮಕೂರು ನಗರದ ಹೊರವಲಯದಲ್ಲಿರುವ ಕೆಸರುಮಡುವಿನ ಈ ಕಲಾವಿದೆ ತನ್ನ ಊರಿಗೆ ಕರ್ನಾಟಕದ ಕಲೆಯ ಭೂಪಟದಲ್ಲಿ ಶಾಶ್ವತ ಸ್ಥಾನವನ್ನು ಸಂಪಾದಿಸುವುದರಲ್ಲಿ ನಿರತರಾಗಿದ್ದಾರೆ.

ಬೆಂಗಳೂರು ವಿ. ವಿ. ನಿಲಯದ ಬಿ. ಎಸ್ಸಿ ನಂತರ ಬೆಂಗಳೂರಿನ ಕೆನ್ ಕಲಾಶಾಲೆಗೆ ಸೇರಿ ಐದು ವರ್ಷ ಚಿತ್ರಕಲೆಯ ಅಭ್ಯಾಸ. ಪ್ರತಿವರ್ಷವೂ ಮೊದಲ ಸ್ಥಾನದ ಗಳಿಕೆ. ನಂತರ ಕೆಲಸಮಾಡುತ್ತಲೇ ಅಣ್ಣಾಮಲೈ ವಿ. ವಿ. ನಿಲಯದ ಎಂ. ಎ. ಪದವಿ ಮತ್ತು ಎಮ್. ಎಫ್. ಎ. ಪದವಿಯ ಗಳಿಕೆ. ಕರ್ನಾಟಕದ ಲಲಿತಕಲಾ ಅಕಾಡೆಮಿಯ ಮಾಜಿ ಸದಸ್ಯೆ ಮತ್ತು ಚಿತ್ರಕಲಾ ಪರಿಷತ್ತಿನ ಕಲಾ ವಿಮರ್ಶಕಿಯ ಗೌರವ.

ರಾಜ್ಯದ ವಿವಿಧ ಸ್ಥಳಗಳಲ್ಲಿ ನಡೆದ ಕಲಾಶಿಬಿರಗಳಲ್ಲಿ ಭಾಗವಹಿಸಿದ್ದಾರೆ.

ರೇಣುಕ ಅವರ ಕೃತಿಗಳು ಬಹುಮಟ್ಟಿಗೆ ಅಮೂರ್ತ ಕಲಾಸಂಪ್ರದಾಯಕ್ಕೆ ಸೇರಿದವುಗಳಾಗಿದ್ದರೂ ಮಾನವ ಮನಸ್ಸಿನ ನೈಸರ್ಗಿಕ ಸ್ಥಾಯೀಭಾವಗಳಿಗೆ ವರ್ಣ ಮತ್ತು ರೇಖೆಗಳ ಮೂಲಕ ಅಭಿವ್ಯಕ್ತಿ ಕೊಡುವ ಪ್ರಯತ್ನಗಳಾಗಿವೆ. ಅವುಗಳಲ್ಲೂ "ನೇತ್ರ ಸರಣಿ"ಗೆ ಸೇರಿದ ಚಿತ್ರಗಳು ಚಿತ್ತಾಪಹಾರಿಯಾಗಿವೆ.

ಎಚ್. ಜಿ. ಎಸ್.









# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...




ಚಿತ್ರಗಳು : ಸೃಜನ್, ಹರಿಣಿ, ಎನ್. ಆರ್. ಬೊಮ್ನಳ್ಳಿ
ರವಿ ಪೂಜಾರಿ, ಅಲಕ ತೀರ್ಥಹಳ್ಳಿ

ಮುಖಚಿತ್ರ : ಫ್ಲೆಮಿಂಗೋ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ಜನವರಿ ೨೧ರಂದು ತಿಂಗಳ ವಿದ್ಯಮಾನಗಳ ಬಗ್ಗೆ ಯೋಚಿಸುವಾಗ್ಗೆ ಡಾ|| ಎಚ್. ನರಸಿಂಹಯ್ಯನವರು ಜೀವನ್ಮರಣ ಸಂಘರ್ಷದಲ್ಲಿ ತೊಡಗಿರುವುದು ಬಾಧಿಸುತ್ತದೆ. ಒಂದು ತಿಂಗಳಿಗೂ ಹೆಚ್ಚು ಕಾಲದಿಂದ ಆಸ್ಪತ್ರೆಯಲ್ಲಿರುವ ಡಾ|| ಎಚ್ಚೆನ್ ಜನವರಿ ೧೫ರಿಂದೀಚೆಗೆ ಪ್ರಜ್ಞಾವಸ್ಥೆಯನ್ನು ದಾಟಿಹೋಗಿ ಕೃತಕ ಶ್ವಾಸದ ಅಳವಡಿಕೆಯಲ್ಲಿದ್ದಾರೆ. ಅವರು ನಂಬದ ಪವಾಡ ಸದೃಶವಾದ್ದೇನಾದರೂ ಸಾಧ್ಯವಾದರೆ ಮತ್ತೆ ಅವರು ತಮ್ಮ ಐವತ್ತು ವರ್ಷದ ನಿವಾಸ ಸ್ಥಾನವಾದ ನ್ಯಾಷನಲ್ ಕಾಲೇಜು ಹಾಸ್ಟೆಲ್‌ಗೆ ಮರಳಬಹುದು. ಹಾಗಾಗಲೆಂಬುದೇ ನಮ್ಮ ಹಾರೈಕೆ. ಅವರಿಗೆ ಪುನರ್ಜನ್ಮದಲ್ಲಿ ನಂಬಿಕೆ ಇರುವುದಾಗಿ ಹೇಳುವ ಎಚ್ಚೆನ್ ಅವರನ್ನು ಕಂಡು ಮಾತನಾಡಿದ್ದು ಜನವರಿ ೮ರಂದೋ ಏನೋ ಇರಬೇಕು. ಕ್ಷೀಣವಾದ ದನಿಯಲ್ಲಿ ಮಾತನಾಡುತ್ತಾ ಕಂಚಿ ಸ್ವಾಮಿಗಳ ದಸ್ತಗಿರಿಯನ್ನು ಪ್ರಸ್ತಾಪಿಸಿದರು. ಜಾರ್ಜ್ ಬುಷ್ ಎಷ್ಟು ದಡ್ಡ ಎಂಬುದರ ಬಗ್ಗೆ ಒಂದು ಜೋಕ್ ಹೇಳಿದರು.

ಬುಷ್ ಸತ್ತು ಸ್ವರ್ಗಕ್ಕೆ ಹೋದನಂತೆ. ದ್ವಾರಪಾಲಕನಿಗೆ ಇವನೇ ಅವನೆಂದು ಖಾತ್ರಿ ಇರಲಿಲ್ಲ. ಪತ್ತೆ ಹಚ್ಚಲು ಹೇಳಿದ : ''ನಿನಗಿಂತ ಮೊದಲು ಐನ್‌ಸ್ಟೈನ್, ಪಿಕಾಸೊ ಎಲ್ಲಾ ಬಂದಿದ್ದಾರೆ. ಗುರುತು ಕೇಳಿದಾಗ $E=mc^2$, ಗೆರ್ನಿಕಾ ಎಲ್ಲಾ ಹೇಳಿದ್ದಾರೆ. ಹಾಗೇನಾದರೂ ಇದ್ದರೆ ನಿನ್ನ ಗುರುತು ಹೇಳು ? ಬುಷ್ ಕೇಳಿದ : ''ಹೇಳುತ್ತೇನೆ, ಆದರೆ ಮೊದಲು ಐನ್‌ಸ್ಟೈನ್, ಪಿಕಾಸೊ ಯಾರು ಹೇಳು ?'' ''ಓ, ಹಾಗಾದರೆ ನೀನೇ ಬುಷ್, ಬಾ ಒಳಗೆ'' ಎಂದ. ಅದೆಷ್ಟು ಬಾರಿ ಹೇಳಿದ್ದಾರೆ ಇದನ್ನು ಎಚ್ಚೆನ್ ! ನಿಜಕ್ಕೂ ಅದು ಜೋಕ್ ಅಲ್ಲದಿರಬಹುದು. ಬುಷ್ ಅಂಥವನೇ ಎನಿಸುತ್ತದೆ. ''ಪುನರ್ಜನ್ಮದಲ್ಲಿ ನಂಬಿಕೆ ಬೇಕಾದರೆ ಇಟ್ಟುಕೊಳ್ಳಿ, ಆದರೆ ಪುನರ್ಜನ್ಮ ತಾಳಲು ಅವಸರಿಸಬೇಡಿ; ಹೇಗಿದ್ದರೂ ಅದು ಆಗುತ್ತದಾದ್ದರಿಂದ ನಿಧಾನವಾಗಿ ಆಗಲಿ'' ಎಂದಾಗ ನಗುಮುಖದಿಂದ ಬೀಳ್ಕೊಟ್ಟರು. ತಿಂಗಳು ಕಳೆಯುವಾಗ್ಗೆ ಮತ್ತು ಆ ನಂತರವೂ ಅವರು ನಮ್ಮೊಡನಿರಲಿ ಎಂದಷ್ಟೇ ಆಶಿಸಬಹುದಾಗಿದೆ. ''ಬನ್ನಿ, ಒಂದು ಆಗಾಗ್ಗೆ ರ್‍ಯಾಗ್ ಮಾಡುತ್ತಿರಿ'' ಎನ್ನುವ ಎಚ್ಚೆನ್ ಪದೇಪದೇ ಹಾಗನ್ನುವಂತಿರಲಿ ಎಂಬುದು ಮನದಾಳದಲ್ಲಿದೆ.

ಸುನಾಮಿ ಹಾವಳಿಗೆ ಗುರಿಯಾದ ಭಾರತವು ವಿದೇಶಿ ನೆರವನ್ನು ವಿನಯದಿಂದ ತಿರಸ್ಕರಿಸಿದ್ದು ಶ್ಲಾಘನೆಗೆ ವಸ್ತುವಾಗುವ ಬದಲು ಟೀಕೆಗೆ ಗುರಿಯಾಗಿರುವುದು ಆಶ್ಚರ್ಯದ ಸಂಗತಿ. ನಮ್ಮ ಅನೇಕ ಪತ್ರಿಕೆಗಳು ಅದನ್ನು ಘೋರಪಾಪವೆಂಬಂತೆ ಚಿತ್ರಿಸಿವೆ. ವಿದೇಶದಿಂದ ಬರುವ ನೆರವನ್ನು ಸರ್ಕಾರ ತಿರಸ್ಕರಿಸಿಲ್ಲವೆಂಬುದು ಎಲ್ಲ ಪತ್ರಿಕೆಗಳಿಗೂ ತಿಳಿದಿದೆ. ತಿರಸ್ಕರಿಸಿರುವುದು ವಿದೇಶಿ ಸರ್ಕಾರಗಳ ಪಾಲ್ಗೊಳ್ಳುವಿಕೆಯನ್ನು ಮಾತ್ರ; ಅಂದರೆ, ವಿದೇಶಿ ಸೈನ್ಯ ಬೆಂಬಲ, ಇತ್ಯಾದಿಗಳನ್ನು. ಇಂಡೋನೇಷ್ಯದಲ್ಲಿ ಅಮೆರಿಕಾದ ಸೈನ್ಯ ಅಗಾಧ ಪ್ರಮಾಣದಲ್ಲಿ ಬೀಡುಬಿಟ್ಟು ಸಂತ್ರಸ್ತರಿಗೆ ಸಹಾಯಹಸ್ತ ನೀಡುತ್ತಿದೆ. ಸೈನ್ಯವು ಮಾರ್ಚ್ ಅಂತ್ಯದೊಳಗಾಗಿ ಅಲ್ಲಿಂದ ಕಾಲ್ತೆಗೆಯಬೇಕೆಂಬ ಇಂಡೋನೇಷ್ಯ ಸರ್ಕಾರದ ಸೂಚನೆಗೆ ಅಮೆರಿಕಾ ಸರ್ಕಾರವಿನ್ನೂ ಒಪ್ಪಿಗೆ ನೀಡಿಲ್ಲ. ಭಾರತವು ಇಂತಹ ಪೇಚಿಗೆ ಸಿಲುಕಿಕೊಳ್ಳಬೇಕಿತ್ತೆ? ಅಷ್ಟೇನೂ ಸೂಕ್ಷ್ಮವಲ್ಲದ ಇಂತಹ ವಿಷಯಗಳ ತಿಳುವಳಿಕೆಯೂ ನಮ್ಮಲ್ಲಿಲ್ಲವೇಕೆಂದು ವಿಮರ್ಶೆ ಮಾಡಿಕೊಳ್ಳಬೇಕು.

ನಮ್ಮ ದೇಶದಲ್ಲಿ ಎಂತೆಂತಹ ವಿವಾದಗಳು ಚರ್ಚೆಗೆ ಬರುತ್ತಿರುತ್ತವೆಂದರೆ ಅವೇ ನಮ್ಮ ಜೀವಾಳವೋ ಎಂಬ ಭಾವನೆ ಬಂದುಬಿಡಬಹುದು : ಇಪ್ಪತ್ತು ವರ್ಷಗಳಿಂದ ಅಯೋಧ್ಯೆ, ಹತ್ತು ವರ್ಷಗಳಿಂದ ಬಾಬಾಬುಡನ್‌ಗಿರಿ, ಆರು ತಿಂಗಳಿಂದ ಕನಕ ಗೋಪುರ, ಎರಡು ತಿಂಗಳಿಂದ ಕಂಚಿ ಸ್ವಾಮಿ ಮತ್ತು ಹದಿನೈದು ದಿನಗಳಿಂದ ಅಮೆರಿಕಾದ ಯಾವನೋ ತಲೆ ಮಾಸಿದ ಇವಾಂಜೆಲಿಸ್ಟ್! ಹೀಗೆ ಒಂದಾದಮೇಲೊಂದು ಬರುತ್ತಿದ್ದು ನಿಜಕ್ಕೂ ದೇಶಕ್ಕೆ ಹಾನಿ ಮಾಡುತ್ತಿರುವ ಪ್ರಶ್ನೆಗಳು ಚರ್ಚೆಗೇ ಬರುತ್ತಿಲ್ಲದಿರುವುದು ಒಂದು ಪ್ರಮಾದ. ಬಾಬಾಬುಡನ್‌ಗಿರಿಯದು ಆ ಹೆಸರಲ್ಲವೆಂದು ಹೇಳುವಂತೆ ಕನಕ ಗೋಪುರದ ಬಗೆಗೂ ಅದೇ ಮಾತನ್ನಾಡುವ ಚಾಳಿ ಕಂಡುಬಂದಿದೆ. ಅದಕ್ಕೆ ಸಂಶೋಧನೆಯ ಸೋಗು ಬೇರೆ! ಹಾಗಿದ್ದರೆ ಎಷ್ಟೋ ವರ್ಷಗಳ ಹಿಂದೆಯೇ ಆ ಹೆಸರಿನಿಂದ ವ್ಯವಹರಿಸುವುದನ್ನು ನಿಲ್ಲಿಸಲಿಲ್ಲವೇಕೆ ? ಬೇರೆ ಸಂದರ್ಭಗಳಲ್ಲಿ ''ಇದು ಇತಿಹಾಸದ ಪ್ರಶ್ನೆಯಲ್ಲ, ನಂಬಿಕೆಯ ಪ್ರಶ್ನೆ'' ಎಂದು ಬುದ್ಧಿವಂತಿಕೆಯ ತರ್ಕ ಬೆಳೆಸುವ ಘಾತುಕ ಮೇಧಾವಿಗಳು ಈ ಎರಡು ವಿಷಯಗಳಲ್ಲಿ ಅದನ್ನೇಕೆ ಮಾನ್ಯ ಮಾಡುವುದಿಲ್ಲ? ಕನಕನ ಕಿಂಡಿಯು ಐತಿಹ್ಯವೆಂಬುದರಲ್ಲಿ ಸಂಶಯವಿಲ್ಲ, ಆದರೆ ಅದಕ್ಕೆ ಆ ಹೆಸರನ್ನು ಕಿತ್ತುಹಾಕಿ ಮೂರ್ಖತನದಿಂದ ನವಗ್ರಹಗಳ ಆವಾಹನೆ ಮಾಡಿಕೊಂಡು ನವಗ್ರಹ ಕಿಂಡಿಯೆಂದೇಕೆ ಕರೆಯಬೇಕು ? ಇತರರ ಬಗೆಗಿನ ತಾತ್ಸಾರ, ಮತ್ಸರ, ದ್ವೇಷ ಎಲ್ಲಾ

೭ನೇ ಪುಟಕ್ಕೆ...




ಸಂಪುಟ-೬ ಸಂಚಿಕೆ-೭ ಫೆಬ್ರವರಿ ೨೦೦೫

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೨೦೩೫೮೦ / ೮೧ / ೮೨
**e-mail : nkp@bgl.vsnl.net.in**
**website : www.navakarnatakabooks.com**



# ಮತ್ತೆ ಅದೇ ರಾಗ

**ಲಾ**ರೆನ್ಸ್ ಸಮರ್ಸ್ ಎಂಬ ಅರ್ಥಶಾಸ್ತ್ರಜ್ಞ 'ಹೊಸತು' ಓದುಗರಿಗೆ ಹೊಸಬನಲ್ಲ. ಹಿಂದೆ ಅವನು ಹಾರ್ವರ್ಡ್ ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕನಾಗಿದ್ದ. ನಂತರ ವಿಶ್ವಬ್ಯಾಂಕಿನ ಪ್ರಧಾನ ಅರ್ಥಶಾಸ್ತ್ರ ಸಲಹೆಗಾರನಾಗಿದ್ದ. ಆಗೊಮ್ಮೆ ಈತ ತನ್ನ ಸಹೋದ್ಯೋಗಿಯೊಬ್ಬನಿಗೆ ಒಂದು ಟಿಪ್ಪಣಿ ಕಳಿಸಿದ್ದ. ಅದರಲ್ಲಿ ಇವನು ಹೇಳಿದ್ದಿದು: ನಮ್ಮ ನಮ್ಮಲ್ಲೇ ಮಾತನಾಡಿಕೊಳ್ಳುವ ಸಂದರ್ಭದಲ್ಲಿ ನನ್ನದೊಂದು ಸೂಚನೆ ಇದೆ. ಇನ್ನು ಮೇಲಾದರೂ ನಾವು ಒಪ್ಪಬೇಕಾದ ವಿಷಯವೊಂದಿದೆ; ಅದೇನೆಂದರೆ, ಈ ಕೊಳಕು ಉದ್ದಿಮೆಗಳಿವೆಯಲ್ಲಾ, ಅವನ್ನು ಹೆಚ್ಚುಹೆಚ್ಚಾಗಿ ಅನಭಿವೃದ್ಧ ದೇಶಗಳಿಗೆ ರವಾನಿಸಬೇಕು, ಎಂಬುದು. ಟಿಪ್ಪಣಿಗೆ ಏನು ಮಾರುತ್ತರ ಬಂದಿತೋ ಅದು ದಾಖಲಾಗಿಲ್ಲ.

ಇದರರ್ಥ ಸ್ಪಷ್ಟವಿದೆ. ಯಾವುದು ಪರಿಸರವನ್ನು ಹಾಳುಮಾಡುತ್ತದೋ ಅದು 'ಕೊಳಕು ಉದ್ದಿಮೆ'. ಅದು ಬೇಕು, ಆದರೆ ಅಮೆರಿಕಾ ದೇಶದಲ್ಲಿ ಅದಿರಬಾರದು. ಏಕೆಂದರೆ ಆ ದೇಶದ ಪುಣ್ಯಾತ್ಮರಿಗೆ ಯಾವ ಹಾನಿಯೂ ಆಗಬಾರದು. ಆಗುವುದೇನಿದ್ದರೂ ಏಷ್ಯಾ-ಆಫ್ರಿಕಾಗಳ ಬಡರಾಷ್ಟ್ರಗಳಿಗಿರಲಿ. ಭೂಪಾಲ್ ಅನಿಲ ದುರಂತದಲ್ಲಿ ಯೂನಿಯನ್ ಕಾರ್ಬೈಡ್‌ನಂತಹ ಪಾತಕ ಉದ್ಯಮದಿಂದ ಸಾವಿರಾರು ಜನ ಸತ್ತರೆ ಅಡ್ಡಿಯಿಲ್ಲ. ಏಕೆಂದರೆ ಅವರು ಬಡ ಭಾರತೀಯರು, ಅಷ್ಟೆ. ಜೊತೆಗೆ ಈ 'ಕೊಳಕು ಉದ್ಯಮ'ಗಳಲ್ಲಿ ದುಡಿಯಲು ಕಡಿಮೆ ಕೂಲಿಗೆ ಜನ ಸಿಕ್ಕುವುದು ಅನಭಿವೃದ್ಧ ದೇಶಗಳಲ್ಲಿ. ಲಾಭಾಂಶದ ಹೆಚ್ಚಳದಿಂದ ಭಾರಿ ಹೊಟ್ಟೆಯ ಅಮೆರಿಕಾದ ಉದ್ಯಮಿ ನಿರಾಳದಿಂದಿರಬಹುದು. ವಿಶ್ವಬ್ಯಾಂಕಿನ ಪ್ರಮುಖ ಉದ್ದೇಶ ಹೇಗೂ ಅದೇ ಅಲ್ಲವೆ !

ಅವನ ಟಿಪ್ಪಣಿ ಬಹಿರಂಗಗೊಳ್ಳಬಹುದೆಂದು ಸಮರ್ಸ್ ನಿರೀಕ್ಷಿಸಿರಲಿಲ್ಲ. ಆದರೆ ಅಮೆರಿಕಾದ ಒಬ್ಬ ಮಹಿಳೆ ಹೇಗೋ ಅದನ್ನು ಪತ್ತೆ ಹಚ್ಚಿ ಪ್ರಕಟಿಸಿದಳು, ಅವನಿಗೆ ಛೀಮಾರಿ ಹಾಕಿದಳು. ಆಗ ಅವನೆಂದ, ''ನನ್ನ ವ್ಯಾಜ ಹಾಸ್ಯಪ್ರವೃತ್ತಿಗೆ ಅಭಿವ್ಯಕ್ತಿ ಕೊಡುತ್ತಿದ್ದೆನಷ್ಟೆ'' ಎಂದು. ಇವನ ಹಾಸ್ಯಪ್ರವೃತ್ತಿಗೆ ಅನಭಿವೃದ್ಧ ದೇಶಗಳ ಜೀವಗಳು ಬಲಿಯಾದರೆ ಅವನಿಗೇನೂ ಮಾನಸಿಕ ಕ್ಷೋಭೆ ಉಂಟಾಗುವುದಿಲ್ಲ. ಒಬ್ಬ ಮಹಿಳೆ ಈತನ ಧೂರ್ತತನವನ್ನು ಬಯಲಿಗೆಳೆದದ್ದು ಅವನಿಗೆ ಎಲ್ಲೋ ಚುಚ್ಚುತ್ತಿದ್ದಿರಬೇಕು. ಅವಳೆಂದಳು, ''ಈತನ ಭಾಷೆ ಮತ್ತು ಚಮತ್ಕಾರ ನೋಡಿದರೆ ಮುಂದೆ ಇವನು ದೊಡ್ಡ ಅಧಿಕಾರಕ್ಕೇರುತ್ತಾನೆ ಎನಿಸುತ್ತದೆ'' ಎಂದು. ಹಾಗೇ ಏರಿದ. ಕ್ಲಿಂಟನ್ ಅಧ್ಯಕ್ಷನಾಗಿದ್ದಾಗ ಈತ ಅರ್ಥಸಚಿವನಾಗಿದ್ದ. ಆಮೇಲೆ ಈಗ ಹಾರ್ವರ್ಡ್ ವಿಶ್ವವಿದ್ಯಾನಿಲಯದ ಅಧ್ಯಕ್ಷ ಪದವಿಗೇರಿದ್ದಾನೆ.

ಹೊಸ ಸಂಶೋಧನೆಯೇನೂ ಅಲ್ಲದ ಒಂದು ಹಳೆಯ ರಾಗವನ್ನೀತ ಇತ್ತೀಚೆಗೆ ಮತ್ತೆ ಗಾರ್ದಭಗಾನ ಮಾಡಿದ್ದಾನೆ. ಆರ್ಥಿಕ ಸಂಶೋಧನೆಯ ರಾಷ್ಟ್ರೀಯ ಸಂಸ್ಥೆಯ ಒಂದು ವಿಚಾರಗೋಷ್ಠಿಯಲ್ಲಿ ಈ ಗಾನಲಹರಿ ಹರಿಯಿತು. ''ವಿಜ್ಞಾನ ಮತ್ತು ತಂತ್ರಜ್ಞಾನದಲ್ಲಿ ಮಹಿಳೆ ಮತ್ತು ಅಲ್ಪಸಂಖ್ಯಾತರು'' ಎಂಬುದು ಗೋಷ್ಠಿಯ ವಿಷಯ. ತಾನು ಧೀಮಂತ ಮಾತ್ರವಲ್ಲದೆ ಬಿಚ್ಚುನುಡಿಯ ಖ್ಯಾತಿಯವನೆಂದು ಬಗೆಯುವ ಲಾರೆನ್ಸ್ ಸಮರ್ಸ್ ಹೇಳಿದುದರ ಸಾರಾಂಶವಿಷ್ಟೆ: ಗಣಿತಶಾಸ್ತ್ರ ಮತ್ತು ವಿಜ್ಞಾನದ ಶಾಖೆಗಳಲ್ಲಿ ಗಂಡಸರು ಹೆಂಗಸರಿಗಿಂತ ಹೆಚ್ಚು ಪ್ರೌಢಿಮೆ ಪ್ರದರ್ಶಿಸುತ್ತಾರೆ. ಅದಕ್ಕೆ ಕಾರಣ, ಜೀವಶಾಸ್ತ್ರ. ಮಹಿಳೆಯರು ಈ ಕ್ಷೇತ್ರಗಳಲ್ಲಿ ನೈಪುಣ್ಯ ಸಾಧಿಸಲು ಹುಟ್ಟಿನಿಂದಲೇ ಅಸಮರ್ಥರು. ಜೆನೆಟಿಕ್ ವ್ಯತ್ಯಾಸದಿಂದಾಗಿ ಪ್ರೌಢ ಶಿಕ್ಷಣದ ಸಂದರ್ಭದಲ್ಲಿ ಸಹ ಹುಡುಗರು ಹುಡುಗಿಯರಿಗಿಂತ ವಿಜ್ಞಾನ ಮತ್ತು ಗಣಿತಶಾಸ್ತ್ರದಲ್ಲಿ ಹೆಚ್ಚಿನ ಪರಿಣತಿ ಸಾಧಿಸುತ್ತಾರೆ.

ಮಹಿಳೆಯೊಬ್ಬಳಿಂದ ಮಂಗಳಾರತಿ ಮಾಡಿಸಿಕೊಂಡಿದ್ದ ಸಮರ್ಸ್ ಇಡೀ ಮಹಿಳಾವರ್ಗದ ವಿರುದ್ಧ ತನ್ನ ರೊಚ್ಚು ತೀರಿಸಿಕೊಂಡಂತಿದೆ. ಅವನ ವಾದಕ್ಕೆ ವಿಜ್ಞಾನದ ಇತಿಹಾಸದಲ್ಲಿ ಪುಷ್ಟಿ ದೊರೆಯುವುದಿಲ್ಲ, ಏಕೆಂದರೆ ಸಹಸ್ರಾರು ಮಹಿಳೆಯರು ವಿಜ್ಞಾನಿಗಳಾಗಿ ಅಪಾರ ಕೊಡುಗೆ ನೀಡಿದ್ದಾರೆ. ಮಹಿಳೆಯ ಜೀವಕೋಶಗಳ ಅಧ್ಯಯನದಿಂದ ಆಕೆ ಜನ್ಮತಃ ಕನಿಷ್ಠಳು ಎಂದೇನೂ ಸಾಬೀತಾಗಿಲ್ಲ ಮತ್ತು ಮಹಿಳೆಯ ಮಿದುಳು ಪುರುಷನ ಮಿದುಳಿಗಿಂತಲೂ ಜೈವಿಕವಾಗಿ ಕಡಿಮೆ ಮಟ್ಟದ್ದೆಂದು ಯಾವ ಸಂಶೋಧನೆಯಿಂದಲೂ ಸಾಧಿಸಲಾಗಿಲ್ಲ. ಸಮರ್ಸ್‌ನ ಮಿದುಳಿನ ರಚನೆಯಲ್ಲಿ ಏನು ನ್ಯೂನತೆ ಇದೆಯೋ ಅದರ ಸಂಶೋಧನೆಯಾಗಬೇಕಾಗಿದೆ, ಅಷ್ಟೆ. ಅವನು ಹೇಳಿದ್ದನ್ನು ನಮ್ಮ ಹಾವುಗಳೂ ಫೂತ್ಕರಿಸುತ್ತಾ ಬಂದಿವೆ, ಈಗ ಇನ್ನೂ ಕಠೋರವಾಗಿ ಫೂತ್ಕರಿಸಬಹುದು. 'ಮಹಿಳೆಗೆ ಮಹಿಳೆಯೇ ಶತ್ರು' ಎಂಬ ಅರ್ಥರಹಿತ ಸೂತ್ರವನ್ನು ಪಠಿಸುವ 'ಪ್ರಗತಿಗಾಮಿ'ಗಳಿಗೆ ನಮ್ಮಲ್ಲಿ ಕೊರತೆ ಇಲ್ಲದಿರುವಂತೆ, ಮಹಿಳೆ ಹುಟ್ಟಿನಿಂದ ಮಂದಬುದ್ಧಿಯವಳೆಂದು ಒದರುವ ಮೇಧಾವಿಗಳಿಗೂ ಕೊರತೆಯಿಲ್ಲ. ಸಾಮಾಜಿಕ ಸಂದರ್ಭ, ಅವಕಾಶ, ಸಾಧ್ಯತೆ, ಅಡಚಣೆ ಮುಂತಾದ ಅಂಶಗಳತ್ತ ಗಮನ ಹರಿಸದೆ ಸರಳ ತೀರ್ಮಾನಗಳನ್ನು ಕೈಗೊಳ್ಳುವ ಕುಹಕಿಗಳ ಮಾತಿಗೆ ಬೆಲೆಯೂ ಇಲ್ಲ, ಗೌರವವೂ ಇಲ್ಲ. ಲಾರೆನ್ಸ್ ಸಮರ್ಸ್‌ನಂತೆ ಅವರೂ ಘಾತುಕರು, ಫ್ಯಾಸಿಸ್ಟರು.

# ಕನ್ನಡ ಮನಸ್ಸು

**ದೇ**ಹದ ವಯಸ್ಸು ಬೇರೆ; ಮನಸ್ಸಿನ ವಯಸ್ಸು ಬೇರೆ. ದೇಹಕ್ಕೆ ಐವತ್ತು ವರ್ಷ ವಯಸ್ಸಾಗಿದ್ದರೆ ಮನಸ್ಸಿಗೆ ಐದು ಸಾವಿರ ವರ್ಷ ವಯಸ್ಸಾಗಿರಲು ಸಾಧ್ಯ. ದೇಹದ ಸಮಕಾಲೀನತೆ ಮತ್ತು ಮನಸ್ಸಿನ ಪ್ರಾಚೀನತೆಗಳನ್ನು ಒಟ್ಟಿಗೆ ತರುವ ಆಂತರಿಕ ಹೋರಾಟವು ಬದುಕಿನ ಬಹುಮುಖ್ಯ ಕ್ರಿಯೆಯಾಗಿದೆ. ಸಮಕಾಲೀನತೆಯನ್ನು ಪ್ರಾಚೀನತೆಗೆ ಕೊಂಡೊಯ್ಯುವುದು ಮತ್ತು ಪ್ರಾಚೀನತೆಯನ್ನು ಸಮಕಾಲೀನತೆಗೆ ತರುವುದು – ಈ ಎರಡೂ ಕ್ರಿಯೆಗಳು ನಮ್ಮೆದುರು ಕಾಣಿಸುತ್ತಿವೆ. ಸಮಕಾಲೀನ ದೇಹವನ್ನು ಪ್ರಾಚೀನ ಮನಸ್ಸಿನಲ್ಲಿ ಪ್ರತಿಷ್ಠಾಪಿಸುವ ಪ್ರಯತ್ನಗಳು ಹಳೆಯದರ ವೈಭವೀಕರಣದಲ್ಲಿ ದೊರೆಯುವ ಅಪಾಯದಿಂದ ಅಪ್ರಸ್ತುತವಾಗುತ್ತವೆ. ಹೊರಮೈ ಸಮಕಾಲೀನವಾಗಿ ಕಂಡರೂ ಒಳಮನಸ್ಸು ಪ್ರಾಚೀನತೆಯಲ್ಲಿ ಸ್ಥಗಿತಗೊಳ್ಳುವುದರಿಂದ ಸಾಮಾಜಿಕ-ಸಾಂಸ್ಕೃತಿಕ ಚಲನಶೀಲತೆಗೆ ಒತ್ತಾಸೆ ಒದಗುವುದಿಲ್ಲ. ಹುಸಿ ಆಧುನಿಕತೆಯ ವೈಯ್ಯಾರದಲ್ಲಿ ಪಾಚಿಗಟ್ಟಿದ ಪ್ರಾಚೀನ ಮನಸ್ಸು ಅಮಾನವೀಯವಾಗುವ ಅಪಾಯ ಹೆಚ್ಚು.

ಪ್ರಾಚೀನವಾದದ್ದೆಲ್ಲ ಅಪಾಯಕಾರಿ, ಅಮಾನವೀಯ ಎಂದು ಇದರ ಸೂಚನೆಯಲ್ಲ. ಪ್ರಾಚೀನತೆಯನ್ನು ಸಮಕಾಲೀನತೆಯ ಒಳಗಣ್ಣಿಂದ ನೋಡುವವರಿಗೆ ಶತಶತಮಾನದ ಹಿಂದಿನಿಂದ ಬಂದ ಮಾನವೀಯ ಚರಿತ್ರೆ ಕಾಣಿಸುತ್ತದೆ ಮತ್ತು ಅದು ಮುಖ್ಯವಾಗುತ್ತದೆ. ಆದರೆ ಸಮಕಾಲೀನತೆಯನ್ನು ಪಾಚಿಗಟ್ಟಿದ ಪ್ರಾಚೀನ ನೆಲೆಯಿಂದ ನೋಡುವವರಿಗೆ ಜಡಮೌಲ್ಯಗಳೇ ಆದರ್ಶಪ್ರಾಯವಾಗುವ ಅಪಾಯವಿರುತ್ತದೆ. ಆದ್ದರಿಂದ, ಪ್ರಾಚೀನತೆಯಿಂದ ಸಮಕಾಲೀನತೆಯವರೆಗಿನ ಚಲನಶೀಲ ಚಾರಿತ್ರಿಕ ನೋಟ ಮತ್ತು ನಿಲುವುಗಳು ನಿಜವಾದ ಮನುಷ್ಯ ಮನಸ್ಸನ್ನು ನಿರ್ದೇಶಿಸುತ್ತವೆ.

ಕನ್ನಡ ಮನಸ್ಸು - ಪ್ರಾಚೀನತೆಯಿಂದ ಸಮಕಾಲೀನತೆಯವರೆಗೆ ಪಯಣಿಸಿದ ಚಲನಶೀಲ ಚಾರಿತ್ರಿಕ ಪ್ರಕ್ರಿಯೆ. ಈ ಮನಸ್ಸಿನಲ್ಲಿ ಮೌಖಿಕ ಹಾಗೂ ಲಿಖಿತ ರೂಪದ ಸಾಮಾಜಿಕ-ಸಾಂಸ್ಕೃತಿಕ ಇತಿಹಾಸವೊಂದು ಹರಿದುಬಂದಿದೆ. ತಿಕ್ಕಾಟ, ತಾಕಲಾಟ, ತಳಮಳ, ತಲ್ಲಣ ಎಲ್ಲವನ್ನೂ ಒಳಗೊಂಡ ಕನ್ನಡ ಮನಸ್ಸು ಏಕರೂಪವಾಗಿ ಹರಿಯಲಿಲ್ಲ. ಇದು ಒಂದೇ ಮಾದರಿಯ ಮನಸ್ಸಲ್ಲ. ಈ ಮನಸ್ಸಿನಲ್ಲಿ ಜಡ ಸಾಂಪ್ರದಾಯಿಕ ನೆಲೆಗಳು ನಿರ್ಮಾಣವಾದಂತೆ ಜಡವಿರೋಧಿ ಚೈತನ್ಯ ನಿಲುವುಗಳು ನಿರಂತರವಾಗಿ ಹರಿಯುತ್ತ ಬಂದಿವೆ. ವಿವಿಧ ಕಾಲಘಟ್ಟಗಳಲ್ಲಿ ವರ್ಗೀಕೃತಗೊಂಡ ಸಾಮಾಜಿಕ ಒಲವು ನಿಲುವುಗಳ ವಿಷಾದ, ವಿದ್ವೇಷ ಹೊತ್ತ ಧರ್ಮಗಳ ವಿವಾದ, ಪ್ರಗತಿಪರ ಚಿಂತನೆಗಳ ವಾಗ್ವಾದ – ಎಲ್ಲವೂ ಕನ್ನಡ ಮನಸ್ಸಿನಲ್ಲಿ ಜಾಗ ಹುಡುಕುತ್ತ, ಜಗಳ ಮಾಡಿಕೊಳ್ಳುತ್ತ, ಮೇಲುಗೈ ಪಡೆಯಲು ಸೆಣಸುತ್ತ, ಘಾಸಿಗೊಳಿಸುತ್ತ ಬಂದಿವೆ. ನೀರಿಗೆ ಬಿದ್ದ ಸುಣ್ಣದ ಕಲ್ಲಿನಂತೆ ಕುದಿದ ಕನ್ನಡ ಮನಸ್ಸು ಹೂವಿನಂತೆ ಅರಳಿ ನಿಚ್ಚಳವಾದದ್ದು ಮಹತ್ವದ ಬೆಳವಣಿಗೆಯಾಗಿದೆ. ಮೀರುವ ಕ್ರಿಯೆ – ಕನ್ನಡ ಮನಸ್ಸಿನ ಬಹುಮುಖ್ಯ ಗುಣಲಕ್ಷಣವಾಗಿದೆ. ಮಲಿನತೆಯನ್ನು ಮೀರಿ ಮಾನವೀಯವಾಗುತ್ತ ಬಂದದ್ದು ಕನ್ನಡ ಮನಸ್ಸು. ಒಳಗಿರುವ ವಿವಿಧ ಶಕ್ತಿ ಸಂಘರ್ಷಗಳ ನಡುವೆ, ವಿವೇಕ ಮತ್ತು ಔಚಿತ್ಯದ ಅಂಶಗಳನ್ನು ತನ್ನದಾಗಿಸಿಕೊಳ್ಳುತ್ತ, ಜೀವವಿರೋಧಿ ನಿಲುವುಗಳನ್ನು ನಿರಾಕರಿಸುತ್ತ, ಜೀವಪರ ಧಾರೆಯನ್ನು ಸ್ವೀಕರಿಸುತ್ತ ವಿಕಾಸಗೊಂಡದ್ದು ಕನ್ನಡ ಮನಸ್ಸು. ಮನುಷ್ಯ ಮನಸ್ಸಿನ ಒಂದು ಕಡೆ ಜೀವವಿರೋಧಿ ಜಡತೆ ಗಟ್ಟಿಗೊಳ್ಳುತ್ತಿರುವಾಗ ಇನ್ನೊಂದು ಕಡೆ ಅದಕ್ಕೆ ವಿರುದ್ಧವಾದ ಚೈತನ್ಯ ಚಿಮ್ಮುತ್ತದೆ. ಕನ್ನಡದ ಮನಸ್ಸು ಏಕಮುಖೀ ಜಡಚಿಂತನೆಯನ್ನು ಹೆಚ್ಚು ಕಾಲ ಸಹಿಸಿಕೊಂಡಿಲ್ಲ. ವೈಪರೀತ್ಯದ ಹಂತ ಮುಟ್ಟಿದ ಯಾವುದೇ ವಲಯಕ್ಕೆ ತಕ್ಕ ಪ್ರತಿಕ್ರಿಯೆಯನ್ನು ನೀಡುತ್ತ, ಪರ್ಯಾಯವನ್ನು ಹುಡುಕುತ್ತ, ಸಮತೋಲನವನ್ನು ಕಾಯ್ದುಕೊಳ್ಳುವುದಕ್ಕೆ ಕಾರಣವಾದ ಇತಿಹಾಸವನ್ನು ಕನ್ನಡ ಮನಸ್ಸಿನಲ್ಲಿ ಕಾಣಬಹುದು.

ಹನ್ನೆರಡನೆಯ ಶತಮಾನದ ಅಬ್ಬಲೂರು ಶಾಸನದ ಪ್ರಕಾರ ಜೈನರು ವೀರಶೈವರ ದೇವಾಲಯದೊಳಕ್ಕೆ ಚಪ್ಪಲಿ ಹಾಕಿ ಅಪವಿತ್ರಗೊಳಿಸುತ್ತಾರೆ. ಇದಕ್ಕೆ ಪ್ರತಿಯಾಗಿ ವೀರಶೈವರು ಜಿನಾಲಯವನ್ನು ಶಿವಾಲಯವನ್ನಾಗಿ ಪರಿವರ್ತಿಸುತ್ತಾರೆ. 'ಹರಿಶ್ಚಂದ್ರ ಕಾವ್ಯ'ದಂತಹ ಅಪೂರ್ವ ಕೃತಿಯನ್ನು ಬರೆದ ರಾಘವಾಂಕ ಕವಿಯ 'ಸೋಮನಾಥ ಚಾರಿತ್ರ'ದ ನಾಯಕ ಆದಯ್ಯ ಶಿವಭಕ್ತಿಯನ್ನು ಜಡನೆಲೆಗೆ ಕೊಂಡೊಯ್ಯುತ್ತಾನೆ. ಪದ್ಮಾವತಿಯೆಂಬ ಹೆಣ್ಣಿನ ಜೊತೆ ಕೆಲತಿಂಗಳು ಜೀವಿಸಿದ್ದು ಜೈನಳೆಂದು ಗೊತ್ತಾದ ಮೇಲೆ ತಿರಸ್ಕರಿಸುತ್ತಾನೆ. ಜಿನಾಲಯದ ವಿಗ್ರಹಭಂಜನೆ ಮಾಡಿ ಶಿವಲಿಂಗ ಸ್ಥಾಪನೆ ಮಾಡುತ್ತಾನೆ. ಅಬ್ಬಲೂರು ಶಾಸನ ಮತ್ತು ಸೋಮನಾಥ ಚಾರಿತ್ರಗಳು ಒಂದು ಮಾದರಿಯ ಮನಸ್ಸಿಗೆ ಸಂಕೇತವಾದರೆ ಕ್ರಿ. ಶ. ೧೩೬೮ರ ಬುಕ್ಕನ ಶಾಸನವು ಇನ್ನೊಂದು ಮಾನಸಿಕ ಮಾದರಿಗೆ ಸಂಕೇತವಾಗುತ್ತದೆ. ಜೈನರಿಗೂ ವೈಷ್ಣವರಿಗೂ ಮತೀಯ ಕಲಹ ನಡೆದದ್ದನ್ನು ಪ್ರಸ್ತಾಪಿಸುವ ಈ ಶಾಸನವು ರಾಜನು ವೈಷಮ್ಯವನ್ನು ಬಗೆಹರಿಸಿದ ವಿಧಾನವನ್ನು ವಿವರಿಸುತ್ತದೆ. ಜೈನರು ವೈಷ್ಣವ ದೇವಾಲಯಕ್ಕೆ ಸುಣ್ಣ ಬಳಿಯಬೇಕೆಂದೂ ವೈಷ್ಣವರು ಜಿನಮಂದಿರಕ್ಕೆ ಹೋಗಿ ಪಂಚವಾದ್ಯಗಳನ್ನು ಬಾರಿಸಬೇಕೆಂದೂ ರಾಜನು ಆದೇಶಿಸಿ ಸಾಮರಸ್ಯಕ್ಕೆ ಕಾರಣನಾದ ಸಂಗತಿಯು ಈ ಶಾಸನದಲ್ಲಿದೆ. ಅಬ್ಬಲೂರು ಶಾಸನ ಮತ್ತು ಬುಕ್ಕನ ಶಾಸನಗಳನ್ನು ಒಟ್ಟಿಗೆ ನೋಡಿದಾಗ ಒಂದರಲ್ಲಿರುವ ವೈಪರೀತ್ಯವನ್ನು ಇನ್ನೊಂದರಲ್ಲಿ ಮೀರಿರುವುದು ಸ್ಪಷ್ಟವಾಗುತ್ತದೆ.

ಕನ್ನಡ ಸಾಹಿತ್ಯದ ಪ್ರಮುಖ ಕವಿಗಳು ಧರ್ಮವನ್ನು ವಸ್ತುವಾಗಿ ಸ್ವೀಕರಿಸಿ ನಿರ್ವಹಿಸಿದ ರೀತಿ ಆಸಕ್ತಿದಾಯಕವಾಗಿದೆ. ಧರ್ಮವನ್ನು ಒಂದು ಸಂಸ್ಥೆಯಾಗಿ, ಶಾಸ್ತ್ರವಾಗಿ ಸ್ವೀಕರಿಸುವ ಕ್ರಮಕ್ಕೂ ಧಾರ್ಮಿಕವಾಗಿಸುವ ಸೃಜನಶೀಲ ಕ್ರಿಯೆಗೂ ವ್ಯತ್ಯಾಸವಿದೆ. ಧರ್ಮವೊಂದರ ಶಾಸ್ತ್ರ ಸಂಬಂಧಿ ಸಂಗತಿಗಳು ತಿಳಿಯದೆ ಇರುವ ಮನುಷ್ಯನೂ ಧಾರ್ಮಿಕವಾಗಿರಬಹುದು. ಆತನಿಗೆ ಅಥವಾ ಆಕೆಗೆ ಧರ್ಮಶಾಸ್ತ್ರ ಗೊತ್ತಿಲ್ಲದೆ ಇರಬಹುದು. ಆದರೆ ಧಾರ್ಮಿಕವಾಗಿರಲು ಅದು ಅಡ್ಡಿಯಾಗುವುದಿಲ್ಲ. ಹಾಗೆ ನೋಡಿದರೆ ಧರ್ಮವನ್ನು ಸಂಸ್ಥೆಯಾಗಿ, ಶಾಸ್ತ್ರವಾಗಿ ಸ್ವೀಕರಿಸಿದವರಿಗಿಂತ ಕೇವಲ ಧಾರ್ಮಿಕವಾಗಿರುವವರಲ್ಲಿ 'ಮನಸ್ಸು' ಮುಖ್ಯವಾಗುತ್ತದೆ. ಶಾಸ್ತ್ರ ಸಂಬಂಧಿ ನಿಮಯಗಳ ಮೆದುಳನ್ನು ಮೀರಿದ ಈ ಮನಸ್ಸಿಗೆ ಧರ್ಮದ ತಾಂತ್ರಿಕ ಅಂಶಗಳು ಮುಖ್ಯವಾಗುವುದಿಲ್ಲ. ತಾಂತ್ರಿಕ ಅರಿವಿನ ಅಗತ್ಯವೂ ಇಂಥವರಿಗೆ ಕಂಡುಬರುವುದಿಲ್ಲ. ಸ್ಪಷ್ಟಪಡಿಸುವ ದೃಷ್ಟಿಯಿಂದ ಹೇಳುವುದಾದರೆ – ದೇವಾಲಯದಲ್ಲಿರುವ ಮಂತ್ರಘೋಷ ನಿರತ ಪೂಜಾರಿ ಮತ್ತು ಸಿಕ್ಕಿದ ಕಲ್ಲನ್ನೇ ದೈವವೆಂದು ಭಾವಿಸಿ ಕೈಮುಗಿವ ರೈತ – ಇವರ ವ್ಯತ್ಯಾಸವನ್ನು ಗಮನಿಸಬಹುದು. ಈ ರೈತ ನೇಗಿಲನ್ನು ಊಡುವ ಮೊದಲನೇ ದಿನ ತನ್ನ ಹೊಲದ ಬದುವಿನ ಮೇಲೆ ಬಿದ್ದ ಕಲ್ಲೊಂದನ್ನು ತೆಗೆದುಕೊಂಡು ನೀರಲ್ಲಿ ತೊಳೆದು, ಅಲ್ಲೇ ಮರದ ಬುಡದಲ್ಲಿ ನಿಲ್ಲಿಸಿ, ಕುಂಕುಮವಿಟ್ಟು ಊದುಬತ್ತಿ ಬೆಳಗಿ ಕೈಮುಗಿಯುತ್ತಾನೆ. ಮುಂದೆ ಆ ಕಲ್ಲು ಏನಾಯಿತೆಂದು ಯೋಚಿಸುವುದಿಲ್ಲ. ಈತನಿಗೆ ಮಂತ್ರಗಳು ಗೊತ್ತಿಲ್ಲ. ಆದರೂ ಧಾರ್ಮಿಕನಾಗಿದ್ದಾನೆ. ದೇವಾಲಯದ ಪೂಜಾರಿಗೆ ಅಥವಾ ಮಠಮಾನ್ಯಗಳ ಮಠಾಧಿಪತಿಗಳಿಗೆ ಧರ್ಮಶಾಸ್ತ್ರ ಗೊತ್ತು; ಮಂತ್ರಗಳು ಗೊತ್ತು. ಅವರು ಶಾಸ್ತ್ರಗಳನ್ನು ಮೀರುವುದಿಲ್ಲ. ಈಗ ಕುವೆಂಪು ಅವರ ''ಯಾವ ಕಾಲದ ಶಾಸ್ತ್ರ ಏನು ಹೇಳಿದರೇನು ? ಎದೆಯ ದನಿಗೂ ಮಿಗಿಲು ಶಾಸ್ತ್ರವಿಹುದೆ ?'' ಎಂಬ ಸಾಲುಗಳನ್ನು ನೆನಪಿಸಿಕೊಳ್ಳಬಹುದು. ಎದೆಯ ದನಿಯೇ ಶಾಸ್ತ್ರವಾಗುವುದು ಮೇಲೆ ಪ್ರಸ್ತಾಪಿಸಲಾದ ರೈತನಲ್ಲಿ. ಶಾಸ್ತ್ರವೇ ಎದೆಯ ದನಿಯನ್ನು ಕಟ್ಟಿ ಹಾಕುವುದು ಮಠಾಧೀಶರಲ್ಲಿ, ಪೂಜಾರಿಯಲ್ಲಿ. ಇದೇ ಧಾರ್ಮಿಕತೆ ಮತ್ತು ಧರ್ಮದ ನಡುವಿನ ಅಂತರ. ಮಂತ್ರಶಾಸ್ತ್ರಗಳ ಅರಿವಿಲ್ಲದೆಯೂ ಮನುಷ್ಯನಲ್ಲಿ 'ಧಾರ್ಮಿಕತೆ' ಇರಬಹುದು. ಆದರೆ ಧರ್ಮವೆಂಬ ಸಂಸ್ಥೆಗೆ ಶಾಸ್ತ್ರಾದಿಗಳು ಬೇಕು. ಸಾಂಸ್ಥಿಕ ಧರ್ಮ ಮತ್ತು ಧಾರ್ಮಿಕತೆಗಳಲ್ಲಿ ನಮ್ಮ ಕವಿಗಳ ಆಯ್ಕೆ ಧಾರ್ಮಿಕತೆಯೇ ಆಗಿತ್ತು. ಆದ್ದರಿಂದಲೇ ಕನ್ನಡದ ಪ್ರಮುಖ ಜೈನ ಕವಿಗಳು (ಪಂಪ, ರನ್ನ, ರತ್ನಾಕರವರ್ಣಿ ಇತ್ಯಾದಿ) ಜೈನ ಧರ್ಮವನ್ನು ಶಾಸ್ತ್ರವಾಗಿ ಸ್ವೀಕರಿಸದೆ ಧಾರ್ಮಿಕವಾದರು. ಕುಮಾರವ್ಯಾಸ ವೈದಿಕ ಧರ್ಮ ಪ್ರಸಾರದ ಕವಿಯಾಗದೆ ಮಹಾಭಾರತದ ವಸ್ತು ವ್ಯಾಪ್ತಿಯಲ್ಲಿ ಧರ್ಮ ಸೂಕ್ಷ್ಮಗಳ ಜಿಜ್ಞಾಸೆಗೆ ಕಾರಣನಾದ. ವಚನಕಾರರು, ದಾಸರು, ಜಡ

೭ನೇ ಪುಟಕ್ಕೆ...

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




"ರೌದ್ರಾವತಾರ"ದ ವರ್ಣರಂಜಿತ ಹಾಗೂ ಆಕರ್ಷಕ ಮುಖಪುಟವನ್ನೊಳಗೊಂಡ 'ಹೊಸತು' ಜನವರಿ ೨೦೦೫ ವಿಶೇಷ ಸಂಚಿಕೆ ಕೈ ಸೇರಿದೆ. ವೈಚಾರಿಕ ಲೇಖನಗಳು, ಕಥೆಗಳು, ಕವನಗಳು ಹಾಗೂ ಹಾಸ್ಯಲೇಖನಗಳೊಂದಿಗೆ ಈ ವಿಶೇಷ ಸಂಚಿಕೆ ಸರ್ವಾಂಗ ಸುಂದರವಾಗಿ ಕಂಗೊಳಿಸಿದೆ. ಚಂದಾದಾರರಿಂದ ಈ ವಿಶೇಷ ಸಂಚಿಕೆಗಾಗಿ ಹೆಚ್ಚಿನ ಹಣ ಸಂಗ್ರಹಿಸದೇ ಕಳುಹಿಸಿದುದಕ್ಕಾಗಿ ಧನ್ಯವಾದಗಳು.

ಶಿವಮೊಗ್ಗ — ***ಎನ್. ಶೇಷಗಿರಿ ರಾವ್***

'ಹೊಸತು' ೨೦೦೫ ಜನವರಿ ನಿನ್ನೆ ಸಂಜೆ ಕೈ ಸೇರಿತು. ವೈವಿಧ್ಯಪೂರಿತ ಸಮೃದ್ಧಿಯನ್ನೇ ಅದರಲ್ಲಿ ಧಾರೆ ಎರೆದಿದ್ದೀರಿ. ಈ ವೈಚಾರಿಕ ಗುಣಮಟ್ಟದ, ಜೊತೆಯಲ್ಲೇ, ಗಾತ್ರದ ವಿಶೇಷ ಸಂಚಿಕೆ ಹೊರತರಲು ಕಾರಣರಾದ ನಿಮ್ಮೆಲ್ಲ ಚೇತನಗಳಿಗೂ ಹಾರ್ದಿಕ ಅಭಿನಂದನೆಗಳು, ಕೃತಜ್ಞತೆಗಳು. ನಿಧಾನವಾಗಿ ಓದಿ ರಸಾಸ್ವಾದನೆ ಮಾಡಿ ಆ ಮೌಲ್ಯಗಳನ್ನು ಅನುಷ್ಠಾನಿಸಲು ಪ್ರಯತ್ನಶೀಲರಾಗುವತ್ತ ವಾಚಕರಿಗೆ ಪ್ರೇರಣೆ ನೀಡಿದ್ದೀರಿ ಎಂದಿನಂತೆ.

ಮೈಸೂರು — ***ಜಿ. ಟಿ. ನಾರಾಯಣ ರಾವ್***

ನಮಸ್ಕಾರ. 'ಹೊಸತು' ಪತ್ರಿಕೆಯ ಜನವರಿ ವಿಶೇಷ ಸಂಚಿಕೆ ಹಿಂದಿನ ವರ್ಷಗಳ ಸಂಚಿಕೆಗಳಂತೆ ವಿಶೇಷ ಸೆಳೆತ, ಮೋಹಕತೆಗಳೊಂದಿಗೆ ಹೊರಬಂದಿದೆ. ಎಲ್ಲ ಲೇಖನಗಳೂ ವಿಶಿಷ್ಟವಾಗಿದ್ದು, ಕೆಲವಂತೂ ಗಂಭೀರ ಓದನ್ನೂ, ಚಿಂತನೆಯನ್ನೂ ಅಪೇಕ್ಷಿಸುವಂತಿವೆ. ಎಚ್. ಜಿ. ಸಣ್ಣಗುಡ್ಡಯ್ಯ ಇವರ ಬರಹ "ಕರ್ನಾಟಕ ರಾಜ್ಯದಲ್ಲಿ ಶಿಕ್ಷಣ ಮಾಧ್ಯಮ ಭಾಷೆ ಮುಂತಾಗಿ..." ನಮ್ಮ ರಾಜ್ಯದ ಶಿಕ್ಷಣ ವ್ಯವಸ್ಥೆಯ ಸುಡು ವಾಸ್ತವಗಳನ್ನು ಓದುಗರ ಮುಂದೆ ತೆರೆದಿಡುವುದರೊಂದಿಗೆ, ಪೋಷಕರನ್ನೂ ಇಂಗ್ಲಿಷ್ ಮಾಧ್ಯಮ ಶಾಲೆಗಳ ಭ್ರಮೆಯನ್ನೂ ಸರಕಾರದ ಇಚ್ಛಾಶಕ್ತಿಯ ಕೊರತೆಯನ್ನೂ ತಾರ್ಕಿಕ ಮತ್ತು ತಾತ್ವಿಕವಾಗಿ ವಿಶ್ಲೇಷಿಸಿದೆ. ಈ ಬಾರಿಯ ವಿಶೇಷಾಂಕ ತುಂಬ ಮೌಲಿಕವಾಗಿದೆ; ಅಭ್ಯಾಸಕ್ಕೆ ಆಕರವಾಗಿದೆ. ವಿಷಯಗಳ ಹರಹು, ವೈವಿಧ್ಯ ಬಹು ಖುಷಿ ಕೊಟ್ಟಿತು. ಅಭಿನಂದನೆಗಳು.

ಮೂಡಂಬೈಲು — ***ಸಿ. ಎಚ್. ಕೃಷ್ಣಶಾಸ್ತ್ರಿ***

ಹೊಸ ವರ್ಷದ ಶುಭಾಶಯಗಳೊಂದಿಗೆ ಆಕರ್ಷಕ ಮುಖಪುಟದೊಂದಿಗೆ ನಮ್ಮ ಮನೆ-ಮನ ತಲುಪಿದ ನೂತನ ವರ್ಷದ ಮೊದಲ ಸಂಚಿಕೆ (ಜನವರಿ ೨೦೦೫) ವಿಶೇಷ ಸಂಚಿಕೆಯಾಗಿ ನಮಗೆಲ್ಲಾ ಮಾಹಿತಿಗಳ ಮಹಾಪೂರವನ್ನೇ ಹರಿಸಿದೆ. ಹಿರಿಯ ಅನುಭವಿ ಲೇಖಕರುಗಳು, ಚಿಂತಕರುಗಳಿಂದ "ಕರ್ನಾಟಕದ ಸಂದರ್ಭದಲ್ಲಿ ಸಂಸ್ಕೃತಿ ಚಿಂತನೆ" ಈ ವಿಷಯದ ಬಗ್ಗೆ ನಿಜಕ್ಕೂ ೫ ಪ್ರಶ್ನೆಗಳನ್ನು ಕೇಳಿ ಅವರಿಂದ ಸಮರ್ಪಕ, ಚಿಂತನೀಯ ಲೇಖನ ಮೂಡಿ ಬಂದಿದೆ. ಜೊತೆಗೆ ಕರ್ನಾಟಕ ಏಕೀಕರಣಕ್ಕೆ ಸಂಬಂಧಿಸಿದಂತೆ ವಿವಿಧ ಲೇಖಕರ ಅಭಿಪ್ರಾಯಗಳು, ಕುವೆಂಪು ಚಿಂತನೆ, ಮೆಲಕು ಹಾಕುವಂತಿದ್ದರೆ, ಕನ್ನಡಕ್ಕಿದೆಯೇ ಭವಿಷ್ಯ! ಲೇಖನ (ವ್ಯಾಸರಾಯ ಬಲ್ಲಾಳ) ಗಂಭೀರವಾಗಿ ಚಿಂತಿಸುವಂತೆ ಮಾಡಿತು. ಡಾ|| ಪ್ರಭುಶಂಕರರವರ ವಿವೇಕಾನಂದರ ಜನಪರ ಕಾಳಜಿಯ ಬಗ್ಗೆ ಓದಿ ಸ್ಫೂರ್ತಿಗೊಂಡೆನು. ಅಡಿಯಿಂದ ಮುಡಿಯವರೆಗೂ ಚಿಂತನೀಯ ಮೌಲಿಕ ಬರಹಗಳಿಂದ ಇದ್ದ ಬೃಹತ್ ಸಂಚಿಕೆ ಬಹಳ ಕಾಲ ನೆನಪಿನಲ್ಲುಳಿಯುವಂಥಾದ್ದಾಗಿದೆ.

ಮೈಸೂರು — ***ಕಾಳೀಹುಂಡಿ ಶಿವಕುಮಾರ್***




ವೈಚಾರಿಕ ಲೇಖನಗಳ ಹಬ್ಬದಿಂದಾಗಿ ಸಾಹಿತ್ಯ ಸಂಭ್ರಮವಾಗಿ ಮೂಡಿಬಂದಿರುವ 'ಹೊಸತು' ಮಕರ ಸಂಕ್ರಾಂತಿಯ ಪರ್ವ ಸಮಯದಲ್ಲಿ ಓದುಗರಲ್ಲಿ ನವ ಚೇತನವನ್ನು ಮೂಡಿಸುವಲ್ಲಿ ಸಂಪೂರ್ಣ ಯಶಸ್ವಿಯಾಗಿದೆ. ಭಾವನೆಗಳು, ಮೂರ್ತ ಸ್ವರೂಪಗಳಾಗಿ ವಸ್ತುನಿಷ್ಠ ಲೇಖನಗಳಾಗಿ ಮೂಡಿಬಂದಾಗ ಅಸ್ಪಷ್ಟ ಬದುಕಿಗೆ ನಿರ್ದಿಷ್ಟ ಗುರಿಯನ್ನು ತೋರ್ಪಡಿಸುವ ದಾರಿದೀಪಗಳು ಎಂಬುದು ಸತ್ಯ. ಹತ್ತು ಹಲವು ವಿಭಿನ್ನ ವಿಕಾರಗಳ ಈ ಸಮಾಜದಲ್ಲಿ ಅನಿರ್ದಿಷ್ಟತೆ ಎಂಬುದು ಅನಿವಾರ್ಯವಾಗಿರುವಾಗ ಸಾಹಿತ್ಯದ ವಿವಿಧ ಪ್ರಕಾರಗಳನ್ನು ಒಟ್ಟಾರೆ ಬದುಕಿನ ಅವಿಭಾಜ್ಯ ಭಾಗ ಎಂಬುದನ್ನು ಮನವರಿಕೆ ಮಾಡುವ ಕಷ್ಟಸಾಧ್ಯವಾದ ಪ್ರಕ್ರಿಯೆಯಲ್ಲಿ 'ಹೊಸತು' ತನ್ನನ್ನು ತೊಡಗಿಸಿಕೊಂಡು ಯಶಸ್ವಿಯಾಗುತ್ತಿರುವ ರೀತಿ ಅನನ್ಯವಾದುದು.

ಬೆಂಗಳೂರು — ***ನರೇಂದ್ರ ಸಿರಕಜೆ***

ಹೊಸ ವರ್ಷದ ಶುಭಾಶಯಗಳನ್ನು ಹೊತ್ತು ತಂದ ಜನವರಿ ೨೦೦೫ರ 'ಹೊಸತು' ವಿಶೇಷ ಸಂಚಿಕೆಯ ಹೂರಣ ಸಾಕಷ್ಟು ಹಿಡಿಸಿತು. ಸಂಕ್ರಾಂತಿಯ ಸವಿಯೂ ಸವಿದೆವು. ಉತ್ತಮ ಬರಹಗಳ ಮೂಲಕ ಆಕರ್ಷಿಸಿತು. ಆದರೆ ಚಿಣ್ಣರಿಗಾಗಿ ಯಾವುದೇ ರೀತಿಯ ಲೇಖನಗಳಾಗಲೀ, ಬರಹಗಳಾಗಲೀ ಇರದಿರುವುದು ಎದ್ದು ಕಂಡುಬಂದಿತು. ಸಂಚಿಕೆಯಲ್ಲಿನ ಪ್ರಭುಶಂಕರ ಅವರ ಸ್ವಾಮಿ ವಿವೇಕಾನಂದರ ಜನಪರ ಕಾಳಜಿ ವಿಶೇಷವಾಗಿ ಆಕರ್ಷಿಸಿತು.

ಸೇಡಂ — ***ಅಣ್ಣಾಸಾಗರ್ ಬಿ. ಆರ್.***

'ಹೊಸತು' ಜನವರಿ ೨೦೦೫ರ ವಿಶೇಷಾಂಕ ಆಕರ್ಷಣೀಯವಾಗಿತ್ತು. ಡಾ. ರಹಮತ್ ತರೀಕೆರೆಯವರ 'ಕುವೆಂಪು ಚಿಂತನೆ: ಆಕರ್ಷಣೆ ಹಾಗೂ ವಿಕರ್ಷಣೆಗಳ ನಡುವೆ' ಲೇಖನ, ಕುವೆಂಪು ಅವರ ಜನ್ಮಶತಮಾನೋತ್ಸವದ ಅಂಗವಾಗಿ ಡಿಸೆಂಬರ್ ೨೦೦೪ರ ಹೊಸತುನಲ್ಲಿ ಏನೂ ಬರಲಿಲ್ಲ ಎಂಬ ನನ್ನ ಕೊರಗನ್ನು ನೀಗಿಸಿತು. ಲೇಖಕರು ಸರಿಯಾಗಿಯೇ ಗುರುತಿಸಿದಂತೆ ಕುವೆಂಪು ಆಧುನಿಕ ಕನ್ನಡದ ಸಾಂಸ್ಕೃತಿಕ ನಾಯಕರು. ನಮ್ಮ ಸಮಾಜದ ಪ್ರಜಾಪ್ರಭುತ್ವೀಕರಣದ ಅಗತ್ಯದ ಹಿನ್ನೆಲೆಯಲ್ಲಿ ನೋಡಿದಾಗ ಅವರ ಮಹತ್ವ ಅರಿವಾಗುತ್ತದೆ. ಅವರ ಪ್ರಸ್ತುತತೆ ಇಡೀ ಕನ್ನಡ ಸಂಸ್ಕೃತಿಗೆ ವ್ಯಾಪಿಸುತ್ತದೆ ಹೇಗೆ ಎನ್ನುವುದನ್ನು ಕುವೆಂಪು ಅವರ ಹುಟ್ಟು ಜಾತಿ ಹಾಗೂ ಅದರ ಪ್ರಭಾವದ ಮೂಲಕ ಕುವೆಂಪು ಪ್ರಸ್ತುತರಾಗಿದ್ದಾರೆ ಎಂಬ ಪ್ರಮೇಯವನ್ನು ಸತ್ಯವೆಂದು ಸ್ವೀಕರಿಸಿ, ತಪ್ಪೆಂದು ತೋರಿಸಿಕೊಡುವ ಪರಿ ಚೆನ್ನಾಗಿದೆ. ಕುವೆಂಪು ಅವರ ವಾಕ್ಯಗಳನ್ನು ಸಂದೇಶ ವಾಕ್ಯಗಳನ್ನಾಗಿ ಏಕೆ ಸ್ವೀಕರಿಸಬಾರದೋ ನಾನರಿಯೆ. ವಾಸ್ತವದಲ್ಲಿ ಇದು ಲೇಖಕರ ಸೈದ್ಧಾಂತಿಕ ನಿಲುವಾಗಿರಲು ಸಾಧ್ಯ. ತಮ್ಮ 'ಮರದೊಳಗಿನ ಕಿಚ್ಚ'ನಲ್ಲಿ ಪಂಪನ 'ಮಾನವಜಾತಿ ತಾನೊಂದೆ ವಲಂ' ಹಾಗೂ ಅವನ 'ಜಾತಿಯೊಳೆಲ್ಲ ಮುತ್ತಮಾದ ಜಾತಿ ವಿಪ್ರಕುಲಂ' ಎಂಬ ಹೇಳಿಕೆಗಳನ್ನು ಉಲ್ಲೇಖಿಸುವಲ್ಲಿ ಇಂತಹುದೇ ನಿಲುವು ಅವರು ತಾಳಿದ್ದಾರೆ.

ವಾಸ್ತವದಲ್ಲಿ ಡಾ. ತರೀಕೆರೆಯವರು 'ಆಯ್ದು ಕಟ್ಟುವ ಸಮಸ್ಯೆ' ಎಂದು ಇದನ್ನು 'ತಮ್ಮ ಮರದೊಳಗಿನ ಕಿಚ್ಚು'ನಲ್ಲಿ ಚರ್ಚಿಸುತ್ತಾರೆ (ಪು. ೨೨ರಿಂದ ೩೦). 'ಆಯ್ದು ಕಟ್ಟುವ ವಿಧಾನದಲ್ಲಿ ವ್ಯಾಖ್ಯಾನಗಳು ಯಾವಾಗಲೂ ಅರೆಸತ್ಯಗಳಾಗಿರುತ್ತವೆ, ಪಾರ್ಶ್ವಿಕವಾಗಿರುತ್ತವೆ' ಎಂಬ ನಿಲುವು ಸರಿಯಾಗಿಯೇ ಇದೆ (ಪು. ೨೭). ಆದರೆ, ಸಮಾಜ ವಿಜ್ಞಾನ ಹಾಗೂ ಸಂಸ್ಕೃತಿ ಕಟ್ಟುವಿಕೆ ಮಧ್ಯದ ('ಶುದ್ಧ' ಪ್ರಾಕೃತಿಕ ವಿಜ್ಞಾನ ಹಾಗೂ ಇಂಜಿನಿಯರಿಂಗ್ ಮಧ್ಯದಲ್ಲಿನ ವ್ಯತ್ಯಾಸದಂತೆ) ವ್ಯತ್ಯಾಸವಿರುವುದು ಇಲ್ಲಿಯೇ ಎಂದು ನಾನು ಭಾವಿಸುತ್ತೇನೆ ಹಾಗೂ ಯಾವುದನ್ನು 'ಅನುಸಂಧಾನ' ಎಂದು ಕರೆಯುತ್ತಾರೋ ಅದೇ 'ಆಯ್ದು ಕಟ್ಟುವಿಕೆ' ಎಂದು ನನ್ನ ಗ್ರಹಿಕೆ. ಪರಂಪರೆಯನ್ನು ಕರಗಿಸಿ ಕಟ್ಟಲು ಹೀಗಲ್ಲದೆ ಅನ್ಯ ಮಾರ್ಗಗಳು ನನಗೆ ಹೊಳೆಯುತ್ತಿಲ್ಲ. ಉಳಿದಂತೆ ಈ ಲೇಖನ ಅರ್ಥಪೂರ್ಣ ಜನ್ಮಶತಮಾನೋತ್ಸವದ ಉತ್ತಮ ಲೇಖನ. ಲೇಖನ ಪ್ರಕಟಿಸಿದ 'ಹೊಸತು'ಗೆ ಧನ್ಯವಾದಗಳು.

ಗಂಗಾವತಿ — ***ಪ್ರದೀಪಕುಮಾರ್ ಬೆಳಗಲ್***

## ಮಾರುತಿ ಗೀತೆ

ಬ್ರಹ್ಮಚಾರಿ ಮಾರುತಿ ಯಾಕೆ ಹೀಗೆ ಆಡುವೆ
ಹಾರುತಿ ಚೀರುತಿ ನಿನಗೇಕೆ ಬಂತು ಈಗತಿ

ಸಿಂಧು ಹಿಂದು ನಂದು ಎಂದು ಹಿಂದು ಮುಂದು ನಡೆಯುವೆ
ಮಾಡು ಕೆಡವಿ ಗೋಡೆಕಟ್ಟಿ ರಾಮಭಜನೆ ಮಾಡುವೆ

ದೇವರುಗಳ ಪಟವ ಹರಿದು ಮತವ ಮಾಡಿ ಮಾರುತಿ
ದಂಡ ಬೀಸಿ ಶೂಲವಿಕ್ಕಿ ಕೈಗೆ ಸಿಗದೆ ಜಾರುತಿ

ಗಲ್ಲಿಗಲ್ಲಿಯಲ್ಲು ಗಣಪ ಮಾರಿಗೊಬ್ಬ ಮಾರುತಿ
ಅಲ್ಲ ಎನಲು ಹಲ್ಲೆ ಮಾಡಿ ಗಲ್ಲಿ ಬಿದ್ದು ಓಡುತಿ

ಕ್ರಿಸ್ತ ಬುದ್ಧ ಗಾಂಧಿ ಬಸವ ಭೀಮರಣ್ಣನೆನ್ನುತಿ
ಕನಸುಗಣ್ಣ ಮಗುವ ಕೊಂದು ಧೀರನೆಂದು ಮೆರೆಯುತಿ

ಕಾಡು ಕಡಿದು ರೋಡು ಮಾಡಿ ಸಾಲ ಶೂಲಕಿಕ್ಕುತಿ
ಗಂಗೆ ತುಂಗೆ ಕೊಳಿಸಿ ಜನಕೆ ಪೆಪ್ಸಿಕೋಲ ಕುಡಿಸುತಿ

ಉದ್ಯಮಗಳ ಮಾರುತಿ ಕಾರುಖಾನೆ ಮಾರುತಿ
ಗದ್ದೆ ಮಾರಿ ಬತ್ತಕೊಂಡು ಬುದ್ಧಿವಂತನೆನುತಿ

ಭೂಪಟಕ್ಕೆ ಬಾವುಟಕ್ಕೆ ಮುತ್ತಿನಾರುತಿ ಎತ್ತುತಿ
ಹಸಿದ ಜನರ ಕರುಳ ಸುಟ್ಟು ದೇಶಬೆಳಗಿತೆನ್ನುತಿ

ಬಂಧು-ಭಗಿನಿ ಅಣ್ಣ-ತಮ್ಮ ಪ್ರಾಣ ಜ್ಯೋತಿ ಎನ್ನುತಿ
ತಾಯಿ ತಾಯಿ ತಾಯಿ ಎಂದು ಸೀರೆ ಎಸೆದು ಕೊಲ್ಲುತಿ

ತಾಯಿ ನಾಡು ಸ್ವರ್ಗಕ್ಕಿಂತ ಮಿಗಿಲು ಎಂದು ಕೂಗುತಿ
ನಾಯಿಯಂತೆ ದೇಶದೇಶವಲೆದು ತಿರುಪೆ ಎತ್ತುತಿ

ನಮ್ಮ ದೇಶ ನಮ್ಮ ತಾಯಿ ಭರತ ಭೂಮಿ ಎನ್ನುತಿ
ಬುಷನೊಮ್ಮೆ ಹುರ್ ಎನಲು ಬಾಯಿ ಮುದುರಿ ಕೂರುತಿ

ಮಾರುತಿ ಮಾರುತಿ ಎಲ್ಲವನ್ನೂ ಮಾರುತಿ
ತಾಯಿಮಯ್ಯ ಮಾರಿ ಕವನ ಬರೆದು ಮೋಜು ಮಾಡುತಿ

ಮಾರುತಿ ಮಾರುತಿ ಯಾಕೆ ಹೀಗೆ ಉರಿಯುತಿ
ಸುಳ್ಳು ದೈವ ಕೊಳ್ಳಿ ದೆವ್ವ ನಿಲ್ಲು! ಎಲ್ಲಿಗೋಡುತಿ

ವಿ. ಎನ್. ಲಕ್ಷ್ಮೀನಾರಾಯಣ
ಎಚ್. ಐ. ಜಿ. ೩೨, ಇ ಬ್ಲಾಕ್, ೨೨ನೇ ಕ್ರಾಸ್, ೮ನೇ ಮೈನ್ ವಿಜಯನಗರ ೩ನೇ ಹಂತ, ಮೈಸೂರು - ೫೭೦ ೦೧೭

*೩ನೇ ಪುಟದಿಂದ... ಈ ತಿಂಗಳು*

ಇದರ ಮೂಲದಲ್ಲಿ ಎಲ್ಲೋ ಅಡಗಿದೆಯೆಂಬುದೇ ಅಪಾಯದ ಸಂಕೇತ.

ಆ ಅಮೆರಿಕಾದ ಎಂಜಲಿಷ್ಟನೋ (ಅಂದರೆ, ಸಿ.ಐ.ಎ.ಯಂತಹವರ ಎಂಜಲು ತಿನ್ನುವವನು; ಇದರಲ್ಲಿ ಕೆಲವು ಎನ್‌ಜಿಯೋಗಳೂ ಸೇರುತ್ತವೆಂಬ ಗುಮಾನಿ ಇದೆ) ಇವಾಂಜಲಿಷ್ಟನೋ ಅವನಿಗೆ ಜಕ್ಕೂರು ವಿಮಾನ ನಿಲ್ದಾಣವನ್ನು ಬಾಡಿಗೆಗೆ ಕೊಡುವುದರಲ್ಲಿ ಏನು ಅರ್ಥವಿದೆ ? ನಾಳೆ ದೇವನಹಳ್ಳಿ ನಿಲ್ದಾಣವನ್ನೂ ಕೊಟ್ಟಾರೇನೊ! ಖಾಸಗಿ ಜಾಗದಲ್ಲಿ ಎಲ್ಲಾದರೂ ಅದೇನು ಮಾಂತ್ರಿಕತೆ ತೋರುತ್ತಾನೋ ತೋರಿಸಿಕೊಳ್ಳಲೆಂದು ಹೇಳುವ ಬದಲು ಮಂತ್ರಿಗಳು, ಮಾಜಿ ಪೊಲೀಸ್ ಅಧಿಕಾರಿಗಳು, ಅಲ್ಲಿ ಸಾಲುಗಟ್ಟಿ ನಿಲ್ಲುವುದು ಅಸಹ್ಯಕರ. ಇದೇ ಜನ ಇಸ್ಕಾನ್ ರಥಯಾತ್ರೆಯಲ್ಲಿ ಪಾಲ್ಗೊಂಡು ಬೀದಿಯಲ್ಲಿ ಕಸ ಗುಡಿಸಲು ನಿಂತಾಗ ನಮ್ಮ ಜಾಗರಣ ವೇದಿಕೆಗಳಿಗೆ ಎಲ್ಲಿಲ್ಲದ ಖುಷಿ! ಈ ಇವಾಂಜಲಿಷ್ಟನಂತೆ ಆ ಇಸ್ಕಾನ್ ಸಹ ಸಿ.ಐ.ಎ. ಪೋಷಿತವೆಂದು ಇವರು ತಿಳಿಯಲೊಲ್ಲರು. ಸಿಸ್ಟರ್ ನಿವೇದಿತಾ ಬಗ್ಗೆ ಹೆಮ್ಮೆ ಪಡುವ ರಾಮಕೃಷ್ಣಾಶ್ರಮದ ಸ್ವಾಮಿಗಳೂ ಬೇರೆ ಸ್ವಾಮಿಗಳ ಜೊತೆ ಟ್ರೇಡ್ ಯೂನಿಯನ್ ಸೇರಿ ವಿಧಾನಸೌಧದ ಬಳಿ ಮೆರವಣಿಗೆ ಹೊರಟದ್ದು ಅಪೂರ್ವವಾದ ಘಟನೆಯೇ ಸರಿ. ವಿಶ್ವೇಶ್ವರ ಸ್ವಾಮಿಗಳ ನೇತೃತ್ವದಲ್ಲಿ ಸ್ವಾಮಿಗಳೆಲ್ಲಾ ಟ್ರೇಡ್ ಯೂನಿಯನ್ ಮಾಡಿಕೊಂಡು ಆ ಸಂಘಟನೆಗಳಿಗೆ ಖ್ಯಾತಿ ತರುತ್ತಾರೋ ಅಪಖ್ಯಾತಿಗೆ ಗುರಿಮಾಡುತ್ತಾರೋ ಕಾದು ನೋಡಬೇಕು. ''ಮತಾಂತರ ಹೊಂದಿದವರ ರಕ್ತ ಬೇರೆಯಾಗುತ್ತದೆಯೆ'' ಎಂಬ ಘನವಾದ ಪ್ರಶ್ನೆಯನ್ನು ಕೆಲವು ವಿದ್ವನ್ಮಣಿಗಳು ಪತ್ರಕರ್ತರ ಮುಂದೆ ಇಟ್ಟರೆಂದು ವರದಿಯಾಗಿದೆ. ಎಲ್ಲ ಮತದವರ ರಕ್ತದ ಲಕ್ಷಣ ಒಂದೇ ಎಂಬುದರ ಅರಿವು ಅವರನ್ನು ತಟ್ಟಬೇಕಾಗಿತ್ತು, ಆದರೆ ತಟ್ಟಿಲ್ಲ. ಹಾಗೆ ನೋಡಿದರೆ, ಮತಾಂತರ ವಿರೋಧಿಸಿದಾಗ ಬೇರೊಂದು ಪ್ರಶ್ನೆ ಎದುರಾಗುತ್ತದೆ: ''ಮತಾಂತರ ಹೊಂದಿದವರು ಮನುಷ್ಯರಾಗಿ ಉಳಿಯುವುದಿಲ್ಲವೆ ?'' ಉಳಿಯುವುದಾದರೆ, ಮತಾಂತರದಿಂದ ಅಷ್ಟೊಂದು ಘಾಸಿಗೊಳ್ಳಬೇಕೇಕೆ ? ಇನ್ನೂ ಸೂಕ್ಷ್ಮವಾಗಿ ವಿವೇಚಿಸಿದರೆ, ಒಂದು ಮತಧರ್ಮಕ್ಕೆ ''ಸೇರಿರುವುದು'' ಸ್ವಯಂ ಆಯ್ಕೆಯಿಂದಲ್ಲ; ಮತಾಂತರವು ಅಂತಹ ಪ್ರಜ್ಞಾಪೂರ್ವಕ ಸ್ವಯಂ ಆಯ್ಕೆ ಆಗಲು ಸಾಧ್ಯವಿದೆ. ಅಸ್ಪೃಶ್ಯರ ಮತ್ತು ಶೂದ್ರರ ಸಂಖ್ಯೆ ಕಡಿಮೆ ಮಾಡಲು ಅವರನ್ನು ಬ್ರಾಹ್ಮಣರನ್ನಾಗಿ ಮತಾಂತರ ಮಾಡಬಹುದಲ್ಲ! ಕವಿ ಟಿ. ಎಸ್. ಎಲಿಯಟ್ ಹಾಗೆ ಮತಾಂತರಗೊಂಡಿದ್ದನಂತೆ. ಎಲ್ಲ ಮತಾಂತರಿಗಳಿಗೂ ಇದು ಅನ್ವಯವಾಗುವುದಿಲ್ಲ, ನಿಜ; ಆದರೆ ಆಯ್ಕೆಯ ಸ್ವಾತಂತ್ರ್ಯವನ್ನು ನಿರಾಕರಿಸುವುದು ಸಾಧುವೆ? ಇಷ್ಟಕ್ಕೂ ಈ ಇವಾಂಜಲಿಸ್ಟನ ಪ್ರಾರ್ಥನಾ ಸಮಾವೇಶದಿಂದ ಜನ ತಮ್ಮ ಮತವನ್ನು ಬದಲಾಯಿಸಿಕೊಂಡುಬಿಡುತ್ತಾರೆಯೆ ? ಅವನೊಬ್ಬ ಢೋಂಗಿ ಬಾಬಾ ಎಂಬುದನ್ನು ತಿಳಿಯಲಾರದಷ್ಟು ಅವಿವೇಕಿಗಳೆ ನಮ್ಮ ಜನ ? ಬಾಬಾನ ಬಳಿ ಬೂದಿಗೆ ಹೋಗುವವರೆಲ್ಲಾ ಯಾವುದೇ ಸ್ಮಶಾನಕ್ಕೆ ಹೋಗಿ ಒಂದು ಚೀಲ ಬೂದಿ ತುಂಬಿಕೊಂಡು ಬರಬಹುದಾದರೂ ಬೃಂದಾವನಕ್ಕೇ ಹೋಗುತ್ತಾರಲ್ಲವೆ ? ಅವರಿಗೆ ಬೂದಿಭಾಗ್ಯ ತಪ್ಪಿಸಲು ಯಾವ ಕ್ರಮ ಸೂಕ್ತ ? ಹಾಗೆಯೇ ಈ ಇವಾಂಜಲಿಷ್ಟನ ಬಗೆಗಿನ ತೆವಲು !

ಇವಾಂಜಲಿಸ್ಟ್, ಇಸ್ಕಾನ್, ಬಾಬಾ, ದೇವಮಾನವ, ಇಂತಹ ಮೋಹಕ ಸಾಮಗ್ರಿಗಳಿಂದ ವಿಮುಖರಾಗುವ ಜನ ಯಾವಾಗ ಬರುತ್ತಾರೆಂದರೆ ಜೀವನದ ಜಂಜಾಟದಲ್ಲಿ ಮೋಹಕ ಸಾಧನೆಗಳ ಅಗತ್ಯ ಇಲ್ಲದಿರುವಂತಾದಾಗ. ಅಂತಹ ಬೆಳವಣಿಗೆಗಾಗಿ ನಾವು ಆಸಕ್ತರಾಗಬೇಕು. ಜಾಗರಣದ ಹೆಸರಲ್ಲಿ ಜನರನ್ನು ಇನ್ನೂ ಹೆಚ್ಚಿನ ಅಜಾಗರತ್ವಕ್ಕೆ ನೂಕುವ ಹುನ್ನಾರಗಳ ಬಗ್ಗೆ ಎಚ್ಚರ ವಹಿಸಬೇಕು.

*೫ನೇ ಪುಟದಿಂದ... ಸಂಪಾದಕೀಯ*

ಧರ್ಮಗಳ ಶಾಸ್ತ್ರಸಂಕೋಲೆಗಳನ್ನು ಮೀರಿದ ಮನುಷ್ಯರಾದರು.

ಇಂದು ಕೋಮುವಾದ ಕೊಳ್ಳಿದೆವ್ವದಂತೆ ಕುಣಿಯುತ್ತಿದೆ. ಜಾತಿವಾದ ಜಗಲಿ ಹತ್ತಿ ಜಪ್ಪೆಂದು ಕೂತಿದೆ. ವಿದ್ಯಾವಂತರು ಹೆಚ್ಚಾದಂತೆ ಕೋಮುವಾದ ಮತ್ತು ಜಾತಿವಾದವೂ ಹೆಚ್ಚಾಗುತ್ತಿರುವುದು ಒಂದು ವಿಪರ್ಯಾಸವಾಗಿದೆ. ಇದರಿಂದ ಕನ್ನಡ ಮನಸ್ಸು ಕಲುಷಿತವಾಗಬಾರದು. ಸಾಮಾಜಿಕ ಮತ್ತು ಸಾಂಸ್ಕೃತಿಕ ಉತ್ತರಗಳ ಮೂಲಕ ಮಾನವೀಯವಾಗುತ್ತ ಹೋಗಬೇಕು.

ಆದರೆ, ಸಾಹಿತ್ಯ ಮತ್ತು ಸಂಸ್ಕೃತಿಯ ಕ್ಷೇತ್ರದಲ್ಲಿ ಕೆಲಸ ಮಾಡುವ ಅನೇಕರು ಕೋಮುವಾದಿ ಮತ್ತು ಜಾತಿವಾದಿ ಸಂಘಟನೆಗಳ ಜೊತೆ ಕ್ರಿಯಾತ್ಮಕ ಸಂಬಂಧವಿಟ್ಟುಕೊಂಡಿರುವುದು ಆಘಾತಕಾರಿಯಾಗಿ ಕಾಣಿಸುತ್ತದೆ. ಕೋಮುವಾದಿ ಮತ್ತು ಜಾತಿವಾದಿ ಸಂಘಟನೆಗಳ ಜೊತೆ ಸಂಬಂಧ ಸ್ಥಾಪಿಸಿಕೊಳ್ಳುವ ಸಾಹಿತಿಗಳಿಗೆ ಮತ್ತು ಸಾಂಸ್ಕೃತಿಕ ವ್ಯಕ್ತಿಗಳಿಗೆ ನಾವೇಕೆ ಸಾಮಾಜಿಕ ಗೌರವ ಕೊಡಬೇಕು ? ಅಂಥವರನ್ನು ಇಡೀ ಸಮಾಜದ ಗಣ್ಯ ವ್ಯಕ್ತಿತ್ವಗಳೆಂದು ನಾವೇಕೆ ಪರಿಗಣಿಸಬೇಕು ? ಎಲ್ಲ ಧರ್ಮ ಮತ್ತು ಎಲ್ಲ ಜಾತಿಯ ಸಂಕುಚಿತವಾದಿಗಳನ್ನು ನಾವು ಸೂಕ್ತವಾಗಿ ಎಚ್ಚರಿಸಬೇಕು. ಧಾರ್ಮಿಕವಾಗಿ ಇರುವುದು ಬೇರೆ, ಧರ್ಮದ ಹೆಸರಲ್ಲಿ ಕೋಮುವಾದ ಬಿತ್ತುವುದು ಬೇರೆ; ಜಾತಿಯನ್ನು ಸಾಮಾಜಿಕ ವಾಸ್ತವವೆಂದು ಪರಿಗಣಿಸುವುದು ಬೇರೆ, ಜಾತಿ ಹೆಸರಲ್ಲಿ ಶೋಷಣೆ ಮತ್ತು ವೈಷಮ್ಯ ಬಿತ್ತುವುದು ಬೇರೆ. ಕನ್ನಡ ಮನಸ್ಸು ಈ ಔಚಿತ್ಯ ಮತ್ತು ವಿವೇಕವನ್ನು ವಿಸ್ತರಿಸಬೇಕು. ಜಾತಿ ವಿನಾಶದ ಮಾತಾಡುತ್ತಲೇ ಸ್ವಂತ ಜಾತಿಯ ಸಂಸ್ಥೆಯ ಸದಸ್ಯರೋ ಪದಾಧಿಕಾರಿಗಳೋ ಕ್ರಿಯಾಶೀಲರೋ ಆಗಿರುವವರು ಮತ್ತು ಧರ್ಮ ದರ್ಶನದ ಮಾತಾಡುತ್ತಲೇ ತಮ್ಮ ಧರ್ಮವೊಂದೇ ಶ್ರೇಷ್ಠವೆಂದು ಹೇಳುತ್ತ ಅನ್ಯ ಧರ್ಮದ್ವೇಷವನ್ನು ಕಲಿಸುವವರು ಮನುಷ್ಯ ಮನಸ್ಸಿನ ಸಾಹಿತಿಗಳಾಗಲು ಹೇಗೆ ಸಾಧ್ಯ ? ಇವರ ಅಕ್ಷರಗಳಲ್ಲಿ ಅಂತಃಕರಣ ಹೇಗೆ ಇದ್ದೀತು ? ಅಂತಃಕರಣವಿಲ್ಲದ ಅಕ್ಷರಗಳಿಂದ ಆತ್ಮವಂಚನೆ ಮಾಡಿಕೊಳ್ಳಬೇಡಿ ಎಂದು ಇಂಥವರಿಗೆ ಸಾರಿ ಹೇಳಬೇಕು.

— ಬರಗೂರು ರಾಮಚಂದ್ರಪ್ಪ

*(೨೦೦೪ರ ಡಿಸೆಂಬರ್‌ನಲ್ಲಿ ಮೂಡಬಿದಿರೆಯಲ್ಲಿ ನಡೆದ 'ನುಡಿಸಿರಿ' ಸಮ್ಮೇಳನದಲ್ಲಿ ನೀಡಲಾದ ಅಧ್ಯಕ್ಷ ಭಾಷಣದಿಂದ ಆಯ್ದ ಭಾಗಗಳು).*

# ಸರ್ವೋದಯದತ್ತ ಹೆಜ್ಜೆಗಳು

ಈಗಿನ ಸರ್ಕಾರ ಶ್ರೀಮಂತ ಭೂಮಾಲೀಕರಿಗೆ ಎಷ್ಟು ಭೂಮಿ ಉಳಿಸಬೇಕು ಎಂಬುದನ್ನು, ಪಟ್ಟಣದಲ್ಲಿರುವ ಪಟ್ಟಭದ್ರರು ಎಷ್ಟು ಸಂಗ್ರಹಿಸಿಡಬಹುದು ಎಂಬುದನ್ನಷ್ಟೇ ಯೋಚಿಸುತ್ತದೆ. ಸ್ವಾತಂತ್ರ್ಯದ ಫಲವನ್ನು ಕೊನೆಯ ಮನುಷ್ಯನಿಗೂ ದೊರಕಿಸುವುದು ಹೇಗೆ ಎಂಬ ಬಗ್ಗೆ ಕಳಕಳಿಯಿಂದ ಚಿಂತನೆ ಮಾಡುವುದಿಲ್ಲ.

**ಎಚ್. ಎಸ್. ದೊರೆಸ್ವಾಮಿ**

ರಾಜಕೀಯ ಸ್ವಾತಂತ್ರ್ಯ ದೊರೆತ ಮಾತ್ರದಿಂದ ತಮ್ಮ ಗುರಿಸಾಧನೆಯಾಯಿತೆಂದು ತೃಪ್ತಿ ಪಡೆದವರಲ್ಲ ಗಾಂಧೀಜಿ. ರಾಜಕೀಯ ಸ್ವಾತಂತ್ರ್ಯ ಸರ್ವೋದಯ ಸಮಾಜ ರಚನೆಗೆ ನಾಂದಿಯಾಗಬೇಕು ಎಂದು ಅವರು ನಂಬಿದ್ದರು. ಸ್ವಾತಂತ್ರ್ಯದ ಫಲ ದೇಶದ ಸರ್ವರಿಗೂ ದೊರಕಬೇಕೆಂಬುದೇ ಅವರ ಆಶಯವಾಗಿತ್ತು. ಸ್ವಾತಂತ್ರ್ಯ ಎಂಬುದು ರಾಜಕೀಯ ರಂಗಕ್ಕೇ ಸೀಮಿತವಾಗದೆ ಆರ್ಥಿಕ ಮತ್ತು ಸಾಮಾಜಿಕ ರಂಗಗಳಲ್ಲೂ ಸರ್ವರಿಗೂ ಸ್ವಾತಂತ್ರ್ಯದ ಫಲ ದೊರಕಬೇಕೆಂಬುದು ಅವರ ಗುರಿಯಾಗಿತ್ತು. ಸ್ವಾತಂತ್ರ್ಯ ಲಾಂಛನರೂಪವಾಗಿ ರಾಷ್ಟ್ರವೆಂಬ ಘಟಕಕ್ಕೆ ಮಾತ್ರ ದೊರೆಯುವುದರಲ್ಲಿ ಅರ್ಥವಿಲ್ಲ. ವ್ಯಕ್ತಿಗಳು ಮತ್ತು ವರ್ಗಗಳ ಬಗೆಗೆ ಚಿಂತನ ಮಾಡುವಾಗ ಗಾಂಧೀಜಿಯ ಬಗೆಗಣ್ಣಿನ ಮುಂದೆ ಮೊದಲು ಸುಳಿಯುತ್ತಿದ್ದವರು ದೀನ ದಲಿತರು ಹಾಗೂ ಆರ್ಥಿಕವಾಗಿ, ಸಾಮಾಜಿಕವಾಗಿ, ಮಾನಸಿಕವಾಗಿ ಶೃಂಖಲಬದ್ಧರಾದ, ಹಿಂದೂಡಲ್ಪಟ್ಟ ನತದೃಷ್ಟ ವರ್ಗಗಳು. ಅಂತ್ಯೋದಯದಿಂದ ಆರಂಭಮಾಡಿ ಸರ್ವೋದಯದತ್ತ ನಡೆಯಲು ಗಾಂಧೀಜಿ ಬಯಸಿದ್ದರು. ಸ್ವತಂತ್ರ ಭಾರತದಲ್ಲಿ ಕೊನೆಯ ಮನುಷ್ಯನಿಗೇ ಆದ್ಯ ಗಮನ, ಬಲಹೀನ ವರ್ಗಕ್ಕೇ ಮೊದಲ ನೆರವು ಎಂದರು. ಎಲ್ಲರಿಗಿಂತ ಹೆಚ್ಚು ಶೋಷಣೆಗೆ ಯಾರು ಒಳಗಾಗಿರುವರೋ ಅವರ ಏಳಿಗೆಯ ವ್ಯವಸ್ಥೆಯನ್ನು ಪ್ರಪ್ರಥಮವಾಗಿ ಎಲ್ಲರೂ ಸೇರಿ ಮಾಡಬೇಕು, ಅವರ ಶೋಷಣೆ ದೂರವಾದರೆ, ಇತರರ ಸಮಸ್ಯೆಗಳು ತನಗೆ ತಾನೇ ಪರಿಹಾರವಾಗುವುದು ಎಂಬುದು ಅವರ ನಂಬಿಕೆ.

ಆದರೆ ಈಗಿನ ಸರ್ಕಾರ, ಶ್ರೀಮಂತ ಭೂಮಾಲೀಕರ ಕೈಲಿ ಎಷ್ಟು ಭೂಮಿ ಉಳಿಸಬೇಕು ಎಂಬುದನ್ನು ಕುರಿತೇ ಯೋಚಿಸುತ್ತದೆ. ಪಟ್ಟಣದಲ್ಲಿ ಇರುವ ಪಟ್ಟಭದ್ರರು ಎಷ್ಟು ಸಂಗ್ರಹಿಸಿಡಬಹುದು ಎಂಬುದನ್ನು ಕುರಿತೇ ಯೋಚನೆ ಮಾಡುತ್ತಾರೆ. ಈ ಸ್ವಾತಂತ್ರ್ಯದ ಫಲವನ್ನು ಕೊನೆಯ ಮನುಷ್ಯನಿಗೂ ದೊರಕಿಸುವುದು ಹೇಗೆ ಎಂಬ ಬಗೆಗೆ ಕಳಕಳಿಯಿಂದ ಚಿಂತನೆ ಮಾಡುವುದಿಲ್ಲ. ಜೂಜುಕೋರರು, ಸಟ್ಟಾ ವ್ಯಾಪಾರಿಗಳು, ಕಾಳಸಂತೆಕೋರರು, ದುಡ್ಡಿನ ಡಬ್ಬಿಗಳು, ಲಂಚಕೋರ ಅಧಿಕಾರಿಗಳು, ಭ್ರಷ್ಟ ರಾಜಕಾರಣಿಗಳು ಇವರಿಗೆ ಮಾತ್ರ ಸ್ವಾತಂತ್ರ್ಯದ ಪೂರ್ಣಲಾಭ ದೊರೆಯುತ್ತಿದೆ. ಈ ಪರಿಸ್ಥಿತಿ ಬದಲಾವಣೆಯಾಗಲು ಅನುಸರಿಬೇಕಾದ ಮಾರ್ಗ ಯಾವುದು ? ಇವರುಗಳ ಪ್ರಾಬಲ್ಯ ಕಡಿಮೆ ಮಾಡದೆ ಸಾಮಾಜಿಕ ನ್ಯಾಯ ಎಲ್ಲರಿಗೂ, ಅದರಲ್ಲೂ ಮುಖ್ಯವಾಗಿ ಸಮಾಜದ ಕೊಟ್ಟಕೊನೆಯ ವರ್ಗಗಳಿಗೆ ದೊರಕುವ ಸಂಭವವಿಲ್ಲ. ಈ ಪಟ್ಟಭದ್ರರ ಪ್ರಾಬಲ್ಯ ಕಡಿಮೆಮಾಡಲು ಒಂದು ಕ್ರಾಂತಿಯನ್ನೇ ಮಾಡಬೇಕಾದೀತು.

ಭಾರತವು ಪ್ರಧಾನವಾಗಿ ಹಳ್ಳಿಗಳ ದೇಶ. ೧೦೦ಕ್ಕೆ ೮೦ ಜನ ಗ್ರಾಮವಾಸಿಗಳು. ಆದ್ದರಿಂದ ಗ್ರಾಮೀಣ ಸಮಾಜದಲ್ಲಿ ಒಂದು ಕ್ರಾಂತಿಯನ್ನು ಎಬ್ಬಿಸದ ಹೊರತು, ಸಾಮಾಜಿಕ ನ್ಯಾಯ ದೊರಕಿಸಿಕೊಳ್ಳುವ ಸಂಭವವಿಲ್ಲ. ಗ್ರಾಮೀಣ ರೈತರ ಕ್ರಾಂತಿಯ ಮಹತ್ವವನ್ನು ಕಂಡುಕೊಂಡ ಮಹಾನುಭಾವರು ಇಬ್ಬರು : ಗಾಂಧೀಜಿ ಮತ್ತು ಚೀನಾದಲ್ಲಿ ಮಾವೊ. ಕ್ರಾಂತಿ ತರುವ ವಿಧಾನದಲ್ಲಿ ಗಾಂಧಿಯವರಿಗೂ ಮಾವೊ ಅವರಿಗೂ ಮೂಲಭೂತ ಹಾಗೂ ವಿಭಿನ್ನ ದೃಷ್ಟಿಕೋನಗಳಿದ್ದವು. ಈ ಗ್ರಾಮೀಣ ಕ್ರಾಂತಿಯನ್ನು ಹೃದಯ ಪರಿವರ್ತನೆ ಹಾಗೂ ಶಾಂತಿಯುತ ಸಾಮಾಜಿಕ ಹೋರಾಟ ಹಾಗೂ ನೈತಿಕ ಒತ್ತಾಯಗಳ ಮೂಲಕ ಸಾಧಿಸುವುದು ಗಾಂಧೀಜಿಯ ಸಂಕಲ್ಪ. ಒಳ್ಳೆಯ ಗುರಿಸಾಧನೆಗೆ ಕೈಗೊಳ್ಳುವ ಮಾರ್ಗವೂ ಸಾಧುವಾಗಿರಬೇಕು ಎಂದು ಗಾಂಧೀಜಿ ಹೇಳಿದರೆ, ಗುರಿಸಾಧನೆ ಮುಖ್ಯ, ಅದಕ್ಕೆ ಯಾವ ಮಾರ್ಗವಾದರೆ ಏನಂತೆ, ಎಂಬುದು ಮಾವೊ ಅವರ ಅಂಬೋಣ.

ದೆಹಲಿಯ ಯೋಜನಾ ಆಯೋಗದವರು ಪಂಚವಾರ್ಷಿಕ ಯೋಜನೆಗಳ ಮೂಲಕ ಔದ್ಯೋಗಿಕ ಕ್ರಾಂತಿಯನ್ನು ಭಾರತದಲ್ಲಿ ತರಲು ಪ್ರಯತ್ನಿಸಿ ವಿಫಲರಾಗಿದ್ದಾರೆ. ಪಟ್ಟಣಗಳ ಹಾಗೂ ಗ್ರಾಮೀಣ ಜನರ ಬಡತನ ನಿವಾರಣೆಗಾಗಿಯೇ ಎರಡು ಪಂಚವಾರ್ಷಿಕ ಯೋಜನೆಗಳನ್ನು ಆದ್ಯತೆಯ ಮೇಲೆ ಕಾರ್ಯಗತಗೊಳಿಸಬೇಕು.

ಮಾಲೀಕತ್ವದ ಆಧಾರದ ಮೇಲೆ ಈಗ ರಾಜ್ಯ ಶಕ್ತಿಗೆ ಎಲ್ಲಿಲ್ಲದ ಅಧಿಕಾರ ಲಭ್ಯವಾಗಿದೆ. ಶಕ್ತಿ ರಾಜಕೀಯವನ್ನು ಕೊನೆಗಾಣಿಸಲು ಇರುವ ಏಕೈಕ ಸಾಧನ ಗ್ರಾಮಸ್ವರಾಜ್ಯ ಸ್ಥಾಪನೆ.

ಆಂತರಿಕವಾಗಿ ಕೊಳೆಯುತ್ತಿರುವ ನಮ್ಮ ರಾಜಕೀಯ ವ್ಯವಸ್ಥೆಗೆ ವಿದಾಯ ಹೇಳಬೇಕು. ಸರ್ಕಾರಗಳು ಜನತೆಯಲ್ಲಿ ದೊಡ್ಡದೊಡ್ಡ ಅಪೇಕ್ಷೆಗಳನ್ನು ಪ್ರಚೋದಿಸುತ್ತವೆ. ಆದರೆ ಅವುಗಳನ್ನು ಪೂರೈಸುವುದರಲ್ಲಿ ವಿಫಲಗೊಳ್ಳುತ್ತವೆ. ಸಣ್ಣಪುಟ್ಟ ಪರಿಹಾರ ಕಾರ್ಯಕ್ರಮಗಳನ್ನು ಘೋಷಣೆ ಮಾಡುವ ಮೂಲಕ ಹಾಗೂ ಅಮುಖ್ಯ ಸಮಸ್ಯೆಗಳನ್ನೇ ದೊಡ್ಡದು ಮಾಡುವುದರ ಮೂಲಕ ಮೂಲಭೂತ ಪ್ರಶ್ನೆಗಳನ್ನು ಮರೆಸುವ ಪ್ರಯತ್ನವನ್ನು ಸರಕಾರಗಳು ಯಶಸ್ವಿಯಾಗಿ ಮಾಡುತ್ತಿವೆ. ಸತ್ತಾ ರಾಜಕೀಯ ಭ್ರಷ್ಟವಾಗಿದೆ. ಜನ ತಮ್ಮ ಜೊತೆಗಿದ್ದಾರೆ ಎಂಬ ಭ್ರಮೆ ರಾಜಕೀಯ ಪಕ್ಷಗಳಿಗೆ ಇದೆ. ಓಟು ಪಡೆಯುವ ವಿಚಾರವೇ ಬೇರೆ, ಜನತೆಯ ಸಹಯೋಗ ಪಡೆಯುವುದೇ ಬೇರೆ. ಜನರಲ್ಲಿ ರಾಜಕೀಯ ಪಕ್ಷಗಳ ಬಗೆಗೆ ಅಸಂತುಷ್ಟಿ ಇದೆ. ಆದರೆ ಸಂಘಟಿತರಾಗಿ ಅದನ್ನು ಮೊಕಾಬಿಲೆ ಮಾಡುವ ತಂತ್ರ ಜನಕ್ಕೆ ಗೊತ್ತಾಗಿಲ್ಲ. ಈ ತಂತ್ರವನ್ನು ಜನ ಕಂಡುಕೊಂಡರೆ ಜನತಾ ಹೋರಾಟಕ್ಕೆ ಯಶಸ್ಸು ಖಂಡಿತ. ವಿಚಾರಕ್ರಾಂತಿಯ ಮೂಲಕ ಜನರನ್ನು ಕ್ರಾಂತಿಗೆ ಅಣಿಗೊಳಿಸಬೇಕು. ಅನಂತರ ಸಂಘಟನೆ ಮತ್ತು ಹೋರಾಟದತ್ತ ಸಾಗಬೇಕು.

ಸುಖೀ ರಾಜ್ಯವಲ್ಲ, ಸಂಪೂರ್ಣ ಕ್ರಾಂತಿ – ಸಮಗ್ರ ಕ್ರಾಂತಿ – ನಮ್ಮ ಗುರಿಯಾಗಬೇಕು. ಭಾರತದ ೨೦-೨೫ ಪಟ್ಟಣಗಳಿಗೆ ರಾಷ್ಟ್ರದ ಆದಾಯದ ಶೇ. ೬೦ರಷ್ಟು ಖರ್ಚಾಗುತ್ತಿದೆ. ಗ್ರಾಮಾಭಿವೃದ್ಧಿಗಾಗಿ ಶೇ. ೨೦-೨೫ ರಷ್ಟು ಲಭ್ಯವಿರುವುದಿಲ್ಲ. ಮಾನವಶಕ್ತಿ, ಪಶುಶಕ್ತಿ, ಭೂಶಕ್ತಿ, ಶ್ರಮಶಕ್ತಿ ಇವು ರಾಷ್ಟ್ರದ ವಿಕಾಸಕ್ಕೆ ಆಧಾರ ಸ್ತಂಭಗಳಾಗಬೇಕು. ಇವುಗಳಿಗೆ ಇಂದು ಬೆಲೆ ಇಲ್ಲದಂತಾಗಿದೆ. ಬೆಳೆದದ್ದರಲ್ಲಿ ಗ್ರಾಮಕ್ಕೆ ಎರಡು ವರುಷಕ್ಕೆ ಬೇಕಾಗುವಷ್ಟನ್ನು, ಗ್ರಾಮಗಳಲ್ಲೆ ಉಳಿಸಿಕೊಳ್ಳುವ ಯೋಜನೆ ತಯಾರಾಗಬೇಕು. ಇದು ಗ್ರಾಮದ ಹಕ್ಕು. ಗ್ರಾಮಗಳಲ್ಲಿ ಬೆಳೆದ ಎಲ್ಲವನ್ನೂ ಪಟ್ಟಣದ ಉದ್ಧಾರಕ್ಕಾಗಿ, ರಫ್ತಿಗಾಗಿ ದೋಚುವ ತಂತ್ರ ಹಳ್ಳಿಗರ ಅವನತಿಗೆ ಕಾರಣವಾಗಿದೆ. ಗ್ರಾಮ ವಿಕಾಸದ ಕಾರ್ಯ ಜನಶಕ್ತಿಯ ಆವಿರ್ಭಾವದಿಂದ ನಡೆಯಬೇಕು.

ಜನತೆ ತಮ್ಮ ಹಕ್ಕುಗಳಿಗಾಗಿ ಹೋರಾಡಲು ಆರಂಭ ಮಾಡಿದರೆ ಜನತಾ ಚಳುವಳಿಗೆ ಪುಟವಿಟ್ಟಂತಾಗುತ್ತದೆ. ಪ್ರಜೆಗಳು ಸ್ವಶಾಸನದ ಅಧಿಕಾರವನ್ನು ಪಡೆಯಬೇಕು. ಕೇಂದ್ರ ಮತ್ತು ರಾಜ್ಯ ಸರ್ಕಾರಗಳನ್ನು ನಡೆಸುವವರ ಮೇಲೆ ಜನತೆ ಅಂಕುಶ ಹಾಕುತ್ತಾ ಹೋದಂತೆ ಪ್ರಜಾಶಕ್ತಿ ಬೆಳೆಯುತ್ತಾಹೋಗುತ್ತದೆ. ಲೋಕಸಂಗ್ರಹಕಾರ್ಯ ಶಾಂತಿಯುತವಾಗಿ ನಡೆಯಬೇಕು. ಗ್ರಾಮಸ್ವಾಮಿತ್ವ ಜನತೆಯ ಕೈಗೆ ಬರಬೇಕು. ಗ್ರಾಮಶಕ್ತಿ ಬೆಳೆಯಲು ಆಧಾರ, ಸಮೃದ್ಧಿ ಹಾಗೂ ಪೂರ್ಣಸಮಯದ ಉದ್ಯೋಗಾವಕಾಶ.

ಎಚ್. ಎಸ್. ದೊರೆಸ್ವಾಮಿ
ಸರ್ವೋದಯ ಕೇಂದ್ರ ಸಮಿತಿ ಸದಸ್ಯರು, ಬೆಂಗಳೂರು

# ನಕ್ಸಲೀಯರೂ ಪಾರ್ಲಿಮೆಂಟರಿ ವಿಧಾನಕ್ಕೆ ಇಳಿದರೆ...

ಸ್ವಾತಂತ್ರ್ಯಕ್ಕೆ ಮುಂಚೆ ಕಾಂಗ್ರೆಸ್ ಪಕ್ಷವು ಸ್ವಲ್ಪ ಖರ್ಚಿನಲ್ಲೇ, ಜಮೀನುದಾರರನ್ನು, ಶ್ರೀಮಂತರನ್ನು ಜನರ ಭಾರೀ ಬೆಂಬಲದಿಂದ ಸೋಲಿಸುತ್ತಿದ್ದಂತೆ, ಈಗ ಎಡಪಕ್ಷಗಳವರು ಸಾಧಿಸಬಹುದು. ಮುಕ್ತ ಚುನಾವಣೆಗಳನ್ನು ನಡೆಸಲು ಚುನಾವಣಾ ಆಯೋಗವು ಎಷ್ಟೇ ಕ್ರಮಗಳನ್ನು ಕೈಗೊಂಡರೂ ಗೂಂಡಾಗಳ ಬೆದರಿಕೆಗಳಿಗೆ, ಹಣ ಹೆಂಡಗಳ ಆಸೆಗೆ, ಬಡವರು ತುತ್ತಾಗಿ ಮತ ಚಲಾಯಿಸದೆ ಹೋಗಬಹುದು, ಬೇರೆಯವರ ಪರವಾಗಿ ಚಲಾಯಿಸಬಹುದು. ಇವುಗಳನ್ನು ತಡೆಗಟ್ಟಬೇಕಾದರೆ, ಎಡಪಕ್ಷಗಳಿಗೆ ದೊಡ್ಡಮಟ್ಟದ ಜನರ ಬೆಂಬಲವಿಲ್ಲದೆ ಸಾಧ್ಯವಿಲ್ಲ.

ಆಂಧ್ರಪ್ರದೇಶದಲ್ಲಿ ನಕ್ಸಲೀಯ ಮುಖಂಡರು ಹೊರಬಂದು ರಾಜ್ಯಸರ್ಕಾರದೊಂದಿಗೆ ಮಾತುಕತೆ ಪ್ರಾರಂಭಿಸುವುದು ಸ್ವಾಗತಾರ್ಹವಾದರೂ ಪರಿಣಾಮದ ಬಗ್ಗೆ ಈಗಲೇ ಏನೂ ಹೇಳುವಂತಿಲ್ಲ.

ನಕ್ಸಲೀಯ ಚಳವಳಿಯು ''ಆಂತರಿಕ ಸುರಕ್ಷತೆಗೆ'' ಪ್ರಧಾನ ಸವಾಲಾಗಿದೆ ಎಂಬ ಪೊಲೀಸ್ ಅಧಿಕಾರಿಗಳ ತೀರ್ಮಾನವನ್ನು ಕೇಂದ್ರ ಗೃಹಮಂತ್ರಿ ಶಿವರಾಜ್ ಪಾಟೀಲರು ಪುನರುಚ್ಚರಿಸಿದ್ದರೂ, ಮಾತುಕತೆಗಳ ಮೂಲಕ ಸಮಸ್ಯೆಯನ್ನು ಬಗೆಹರಿಸಲು ರಾಜ್ಯ ಸರ್ಕಾರಕ್ಕೆ ಅವಕಾಶವನ್ನು ಕೊಡಲೇಬೇಕೆಂದು ಹೇಳಿದ್ದಾರೆ. ಮಾತುಕತೆಗಳಿಂದ ''ಆಂತರಿಕ ಸುರಕ್ಷತೆಗೆ'' ಅಪಾಯ ಆಗಿದೆ ಎಂಬ ಬಿ.ಜೆ.ಪಿ. ಅಧ್ಯಕ್ಷ ಅಡ್ವಾನಿಯವರ ಟೀಕೆಯನ್ನು ಪ್ರಧಾನಿ ಮನಮೋಹನ ಸಿಂಗ್ ತಳ್ಳಿಹಾಕಿರುವುದಲ್ಲದೆ ಮಾತುಕತೆಗಳ ಮೂಲಕ ನಕ್ಸಲೀಯರನ್ನು ದಾರಿಗೆ ತರಬಹುದೆಂಬ ಇಂಗಿತವನ್ನು ವ್ಯಕ್ತಪಡಿಸಿದ್ದಾರೆ. ನಕ್ಸಲೀಯ ಮುಖಂಡರೂ ಕೂಡ ಹೆಚ್ಚುವರಿಯಾಗಿರುವ ಜಮೀನನ್ನು ಎರಡು ತಿಂಗಳೊಳಗಾಗಿ ಬಡವರಿಗೆ ಹಂಚದಿದ್ದರೆ, ಬಡವರು ಅಂತಹ ಜಮೀನುಗಳನ್ನು ತಾವೇ ವಶಪಡಿಸಿಕೊಳ್ಳುವ ಚಳವಳಿ ಪ್ರಾರಂಭಿಸಬೇಕಾಗುತ್ತದೆಂದು ಹೇಳಿದ್ದಾರೆಯೇ ವಿನಾ ಸಶಸ್ತ್ರ ಹೋರಾಟವನ್ನ ಮತ್ತೆ ಪ್ರಾರಂಭಿಸುತ್ತೇವೆಂದು ಹೇಳಿಲ್ಲ. ಅವರಿಗೂ ಸಶಸ್ತ್ರ ಹೋರಾಟ ಸಾಕಾಗಿಹೋಗಿರಬಹುದು. ಅವರ ಮೇಲೆ ಇರುವ ಮೊಕದ್ದಮೆಗಳನ್ನು ಕೈಬಿಟ್ಟು ಸಶಸ್ತ್ರ ಪೊಲೀಸ್ ಕಾರ್ಯಾಚರಣೆಯನ್ನು ಸರ್ಕಾರದವರು ನಿಲ್ಲಿಸಿದರೆ, ನಕ್ಸಲೀಯರು ಸಶಸ್ತ್ರ ಹೋರಾಟವನ್ನು ನಿಲ್ಲಿಸಿ ಹೊರಬರಬಹುದೆಂದು ಊಹಿಸಬಹುದು.

ಈ ೩೫ ವರ್ಷಗಳ ಅವಧಿಯಲ್ಲಿ ನೂರಾರು ಮಂದಿ ನಕ್ಸಲೀಯ ಕಾರ್ಯಕರ್ತರು ಪ್ರಭುತ್ವದ ದಬ್ಬಾಳಿಕೆಗೆ ಬಲಿಯಾಗಿದ್ದಾರೆ. ಆದರೂ ಅವರ ಪಾಲಿಗೆ ಅವರ ಹೋರಾಟ ಸಂಪೂರ್ಣವಾಗಿ ವ್ಯರ್ಥವಾಯಿತೆಂದೇನೂ ಹೇಳುವಹಾಗಿಲ್ಲ. ಅವರ ಮುಖಂಡರು ಮಾತುಕತೆಗಾಗಿ ಹೊರಬಂದ ಮೇಲೆ ನಡೆದ ಎರಡು ಬಹಿರಂಗ ಸಭೆಗಳಲ್ಲಿ ನೆರದಿದ್ದ ಜನಸ್ತೋಮವನ್ನು ನೋಡಿದರೆ ಅವರ ವಿಷಯದಲ್ಲಿ ಬಡಜನರಿಗೆ ಎಷ್ಟೊಂದು ನಂಬಿಕೆ ವಿಶ್ವಾಸ ಇವೆಯೆಂದು ಗೊತ್ತಾಗುತ್ತದೆ. ಈ ಬೆಂಬಲದ ಆಧಾರದ ಮೇಲೆ ಆಂಧ್ರಪ್ರದೇಶದಲ್ಲಿ ನಕ್ಸಲೀಯರು ಒಂದು ರಾಜಕೀಯ ಶಕ್ತಿಯಾಗಿ ಬೆಳೆಯಬಹುದು. ಆ ರಾಜ್ಯದ ಪ್ರಮುಖ ನಕ್ಸಲೀಯ ಬಣವಾದ 'ಪೀಪಲ್ಸ್ ವಾರ್ ಗ್ರೂಪ್' ಮತ್ತು ಬಿಹಾರಿನಲ್ಲಿ ಸ್ವಲ್ಪಮಟ್ಟಿಗೆ ಬಲವಾಗಿರುವ 'ಎಂ.ಸಿ.ಸಿ.' ಎರಡೂ ವಿಲೀನವಾಗಿ ಸಿ.ಪಿ.ಐ (ಮಾವೊಯಿಸ್ಟ್) ಎಂಬ ಹೆಸರಿನಲ್ಲಿ ರಾಜಕೀಯ ಪಕ್ಷವಾಗಿ ಜನ್ಮತಾಳಿರುವುದು ಗಮನಾರ್ಹ. ಈ ಹೊಸ ಎಡಪಕ್ಷಕ್ಕೂ ಹಳೆಯ ಎಡಪಕ್ಷಗಳಿಗೂ ಯಾವ ರೀತಿಯ ಸಂಬಂಧ ಏರ್ಪಡುತ್ತದೆಂಬುದನ್ನು ಕಾದುನೋಡಬೇಕಾಗಿದೆ.

''ನಾವು ೩೦ ವರ್ಷಗಳ ಕಾಲ ಸರ್ಕಾರದೊಂದಿಗೆ ಸಶಸ್ತ್ರ ಹೋರಾಟ ನಡೆಸಿ, ಹುತಾತ್ಮರ, ತ್ಯಾಗಿಗಳ ಪಕ್ಷವಾಗಿದ್ದೇವೆಂದು'' ಹೇಳಿಕೊಳ್ಳುತ್ತಾ, ಸಿ.ಪಿ.ಐ.(ಮಾವೊಯಿಸ್ಟ್) ಪಕ್ಷವು ಮುಖ್ಯವಾಹಿನಿಯಲ್ಲಿರುವ ಸಿ.ಪಿ.ಐ.ಎಮ್ ಮತ್ತು ಸಿ.ಪಿ.ಐ.ಗಳನ್ನು ಅವು ಕ್ರಾಂತಿಕಾರಿ ಸ್ವಭಾವವನ್ನು ಕಳೆದುಕೊಂಡು ಮಾಮೂಲೀ ಪಕ್ಷಗಳಾಗಿವೆಯೆಂದು ದೂಷಿಸುತ್ತಾ, ಅವರ ಬಲವನ್ನು ಕುಗ್ಗಿಸುವುದರ ಮೂಲಕ ತಾವು ಬೆಳೆಯಬಹುದೆಂಬ ಧೋರಣೆಯನ್ನು ಇಟ್ಟುಕೊಂಡರೆ ಅದು ಬಹಳ ದುರದೃಷ್ಟಕರ. ಪ್ರತಿಯಾಗಿ, ಈ ಮೂರು ಎಡಪಕ್ಷಗಳಲ್ಲಿ ಎಷ್ಟೇ ಭಿನ್ನಾಭಿಪ್ರಾಯಗಳಿದ್ದರೂ ಪರಸ್ಪರ ಹೊಂದಾಣಿಕೆಯಿಂದ ಕೆಲಸ ಮಾಡಿದರೆ ಇಡೀ ಎಡ ಚಳವಳಿಗೇ ಒಳ್ಳೆಯದು.

ಚುನಾವಣೆಗಳಲ್ಲಿ ಭಾಗವಹಿಸದೆ, ಶಾಸನಸಭೆಗಳನ್ನು ಸಂಪೂರ್ಣವಾಗಿ ಬಹಿಷ್ಕರಿಸುವುದರ ಮೂಲಕ ಸಿ.ಪಿ.ಐ. (ಮಾವೊಯಿಸ್ಟ್) ತನ್ನ ''ಕ್ರಾಂತಿಕಾರಿ ಸ್ವಭಾವ''ವನ್ನು ಕಾಪಾಡಿಕೊಳ್ಳಲು ನಿರ್ಧರಿಸಿದರೆ, ಅದು ದೊಡ್ಡ ತಪ್ಪಾಗುತ್ತದೆ. ಒಂದು ಕ್ರಾಂತಿಕಾರಿ ಪಕ್ಷಕ್ಕೆ ಶಾಸನಸಭೆಗಳು ಬಹುಮುಖ್ಯವಾದ ಸ್ಥಳ. ತಮ್ಮ ನಿಲುವನ್ನು ವಿವರಿಸಲು, ಸರ್ಕಾರದ ಜನವಿರೋಧಿ ನೀತಿಗಳನ್ನು ಖಂಡಿಸಲು ಅವಕಾಶವಿರುವ ಅಂತಹ ವೇದಿಕೆ ಬೇರೊಂದಿಲ್ಲ, ಅಲ್ಲಿ ಅವರಾಡುವ ಮಾತುಗಳಿಂದ, ಅವರು ಕೇಳುವ ಪ್ರಶ್ನೆಗಳಿಂದ, ಅವರ ದಿಟ್ಟತನದಿಂದ ಹೊರಗಡೆಯ ಹೋರಾಟಕ್ಕೆ ಆಗುವ ಸಹಾಯ ಅಷ್ಟಿಷ್ಟಲ್ಲ. ಇಂದು ಲೋಕಸಭೆಯಲ್ಲಿ ಕೇವಲ ಅರವತ್ತೂರು ಮಂದಿ ಸದಸ್ಯರಿರುವ ಎಡಪಕ್ಷಗಳು ಕೇಂದ್ರ ಸರ್ಕಾರದ ಉಳಿವು ಅಳಿವುಗಳನ್ನು ನಿರ್ಧರಿಸುವ ಸ್ಥಾನದಲ್ಲಿವೆ, ಸರ್ಕಾರದ ಮೇಲೆ ಬಡಜನರ ಪರವಾಗಿ ಭಾರೀ ಒತ್ತಡ ಹೇರುವ ಸ್ಥಿತಿಯಲ್ಲಿವೆ. (ಈ 'ಏರ್ಪಾಡು' ಕಾಲಕ್ರಮದಲ್ಲಿ ಮುರಿದುಬಿದ್ದರೂ ಕೂಡ, ಎಡಪಕ್ಷಗಳು ಹೆಚ್ಚು ಬಲಯುತವಾಗಿ ಹೊರಬರುತ್ತವೆಯೇ ವಿನಾ, ಅವರಿಗೆ ನಷ್ಟವೇನೂ ಉಂಟಾಗುವುದಿಲ್ಲ.) ಮುಂದಿನ ಲೋಕಸಭೆಯಲ್ಲಿ ಎಡಪಕ್ಷಗಳ ಸದಸ್ಯರ ಸಂಖ್ಯೆ ನೂರಕ್ಕೆ ಏರಿದರೆ, ಒಂದು ಹೊಸ ಘಟ್ಟವೇ ಪ್ರಾರಂಭವಾಗುತ್ತದೆ. ಒಟ್ಟಿನಲ್ಲಿ, ಚುನಾವಣೆಗಳಲ್ಲಿ ಭಾಗವಹಿಸುವುದರಿಂದ ಎಡಪಕ್ಷಗಳ ತೀವ್ರತೆಗೆ ಕುಂದುಂಟಾಗುವುದೆಂದು ತಿಳಿಯುವುದು ದೊಡ್ಡ ತಪ್ಪು. ಜನತೆಯ ದೈನಿಕ ಹೋರಾಟಗಳು ಅವರ ಬಿಡಿ ಬಿಡಿ ಸಮಸ್ಯೆಗಳ ಪರಿಹಾರಕ್ಕಾಗಿ ನಡೆಯುತ್ತವೆ. ಆದರೆ ಚುನಾವಣಾ ಹೋರಾಟವು ರಾಜಕೀಯ ಸ್ವರೂಪವನ್ನು ತಾಳಿ, ಅಧಿಕಾರ ಪ್ರಶ್ನೆಯನ್ನು ಮುಂದಕ್ಕೆ ತರುತ್ತದೆ. ಅಲ್ಲದೆ ಚುನಾವಣಾ ಫಲಿತಾಂಶಗಳು ಪಕ್ಷಗಳ ಬಲವನ್ನು ಸಂಖ್ಯಾರೂಪದಲ್ಲಿ ಸ್ಪಷ್ಟವಾಗಿ ತೋರಿಸುತ್ತವೆ.

ಮೇಲೆ ಹೇಳಿರುವ ಚುನಾವಣಾ ಪರವಾದ ಮಾತುಗಳಿಂದ ಅವುಗಳೇ ಸರ್ವಸ್ವ ಎಂದು ತಿಳಿದುಕೊಳ್ಳಬಾರದು. ಚುನಾವಣೆಗಳಿಗೂ ಇತಿಮಿತಿಗಳಿವೆ. ಚುನಾವಣೆಗಳಲ್ಲಿ ಬಹಳ ಹಣ ಖರ್ಚುಮಾಡಬೇಕಾಗುತ್ತದೆ. ಬಡಜನರ ಪಕ್ಷಗಳಾದ ಎಡಪಕ್ಷಗಳಿಗೆ ಅಷ್ಟೊಂದು ಹಣ ಸಿಗುವುದಾದರೂ ಹೇಗೆ ? ಅದೂ, ಬಹುಸಂಖ್ಯೆಯ ಸ್ಥಾನಗಳಿಗೆ ಸ್ಪರ್ಧಿಸಬೇಕೆಂದರೆ, ಹಣ ಒದಗಿಸುವುದು ವಿಪರೀತ ಕಷ್ಟವಾಗುತ್ತದೆ. ಖರ್ಚನ್ನು ಕಡಿಮೆಮಾಡಿಕೊಳ್ಳಲು ಎಡಪಕ್ಷಗಳಿಗೆ ಒಂದೇ ಉಪಾಯವಿದೆ. ಅದು ಜನರ ಬೆಂಬಲವನ್ನು ಅಧಿಕವಾಗಿ ಸಂಪಾದಿಸುವುದು. ಸ್ವಾತಂತ್ರ್ಯಕ್ಕೆ ಮುಂಚೆ ಕಾಂಗ್ರೆಸ್ ಪಕ್ಷವು ಸ್ವಲ್ಪ ಖರ್ಚಿನಲ್ಲೇ, ಜಮೀನುದಾರರನ್ನು, ಶ್ರೀಮಂತರನ್ನು ಜನರ ಭಾರೀ ಬೆಂಬಲದಿಂದ ಸೋಲಿಸುತ್ತಿದ್ದಂತೆ, ಈಗ ಎಡಪಕ್ಷಗಳವರು ಸಾಧಿಸಬಹುದು. ಮುಕ್ತ ಚುನಾವಣೆಗಳನ್ನು ನಡೆಸಲು ಚುನಾವಣಾ ಆಯೋಗವು ಎಷ್ಟೇ ಕ್ರಮಗಳನ್ನು ಕೈಗೊಂಡರೂ ಗೂಂಡಾಗಳ ಬೆದರಿಕೆಗಳಿಗೆ, ಹಣ ಹೆಂಡಗಳ ಆಸೆಗೆ, ಬಡವರು ತುತ್ತಾಗಿ ಮತ ಚಲಾಯಿಸದೆ ಹೋಗಬಹುದು, ಬೇರೆಯವರ ಪರವಾಗಿ ಚಲಾಯಿಸಬಹುದು. ಇವುಗಳನ್ನು ತಡೆಗಟ್ಟಬೇಕಾದರೆ, ಎಡಪಕ್ಷಗಳಿಗೆ ದೊಡ್ಡಮಟ್ಟದ ಜನರ ಬೆಂಬಲವಿಲ್ಲದೆ ಸಾಧ್ಯವಿಲ್ಲ.

ಈಗಲಾದರೋ, ಬಡಜನರ ಸಮೂಹವು (ದಲಿತರು, ಹಿಂದುಳಿದ ವರ್ಗಗಳವರು, ಬಡರೈತರು, ಪಟ್ಟಣಗಳಲ್ಲಿರುವ ಬಡವರು) ಪ್ರಾದೇಶಿಕ ಮತ್ತು ಜಾತಿಪಕ್ಷಗಳ ಹಿಂದಿದ್ದು ಹಂಚಿಹೋಗಿದ್ದಾರೆ. ಅನೇಕರು ಕಾಂಗ್ರೆಸ್, ಬಿ.ಜೆ.ಪಿ.ಗಳಲ್ಲಿ ಕೂಡ ನಂಬಿಕೆ ಇಟ್ಟುಕೊಂಡಿದ್ದಾರೆ. ತಮ್ಮ ಜಾತಿಯವರು ಶಾಸನಸಭೆಗಳ ಸದಸ್ಯರಾಗುವುದರಿಂದ, ಮಂತ್ರಿಗಳಾಗುವುದರಿಂದ ತಮ್ಮ ಬಾಳು ಉತ್ತಮ

ಗೊಳ್ಳುವುದೆಂದು ತಿಳಿದಿದ್ದಾರೆ. ಇದು ಸಹಜವಾದದ್ದೇ. ಎಲ್ಲಾ ಜಾತಿಯ ಬಡವರೂ ಎಡಪಕ್ಷಗಳಡಿಯಲ್ಲಿ ಒಂದುಗೂಡಬೇಕಾದರೆ, ಅವರು ತಮ್ಮ ಅನುಭವದಿಂದಲೇ, ಬೇರೆ ಬೇರೆ ಜಾತಿಯ ಬಡವರು ಪ್ರತ್ಯೇಕವಾಗಿ ಉದ್ಧಾರವಾಗುವುದು ಸಾಧ್ಯವಿಲ್ಲವೆಂದೂ, ಎಲ್ಲರೂ ಒಂದಾಗಿಯೇ ತಮ್ಮೆಲ್ಲರ ಉದ್ಧಾರವನ್ನು ಸಾಧಿಸಬೇಕೆಂಬುದನ್ನೂ ಅರಿಯುತ್ತಾರೆ.

ಈ ಬಡಜನರಲ್ಲಿ ವರ್ಗಪ್ರಜ್ಞೆಯನ್ನು ಬೆಳೆಸುವ ನಿಟ್ಟಿನಲ್ಲಿ ಎಡಪಕ್ಷಗಳು ತಕ್ಕ ಕಾರ್ಯಕ್ರಮಗಳನ್ನು ರೂಪಿಸಬೇಕು. ಹಿಂದುಳಿದ ಜಾತಿಗಳ ಸಾಮಾಜಿಕ ಸಮಸ್ಯೆಗಳನ್ನು ಕೈಗೆತ್ತಿಕೊಂಡು, ಅವರು ಸಾಮಾಜಿಕವಾಗಿ ಅನುಭವಿಸುತ್ತಿರುವ ಅನ್ಯಾಯಗಳನ್ನು ಕೊನೆಗಾಣಿಸಲು ಸರ್ವಪ್ರಯತ್ನಗಳನ್ನು ಮಾಡಬೇಕು. ಆರ್ಥಿಕ ಪದ್ಧತಿ ಬದಲಾದರೆ ಈ ಸಾಮಾಜಿಕ ಸಮಸ್ಯೆಗಳ ಪರಿಹಾರ ಇನ್ನೂ ಸುಲಭವಾಗುತ್ತದೆ ಎನ್ನುವುದೇನೋ ನಿಜ. ಅದಕ್ಕಾಗಿ ಈ ಸಾಮಾಜಿಕ ಅನ್ಯಾಯಗಳನ್ನು ಈಗ ಅಲಕ್ಷಿಸುವಂತಿಲ್ಲ. ಹಿಂದೆ, ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ಮಹಾತ್ಮಗಾಂಧಿ ಹಾಕಿಕೊಟ್ಟಿದ್ದ 'ರಚನಾತ್ಮಕ ಕಾರ್ಯಕ್ರಮ'ದಂತಹ ಕಾರ್ಯಕ್ರಮವನ್ನು ಎಡಪಕ್ಷಗಳು ಈಗ ರೂಪಿಸಬೇಕಾಗಿದೆ. ವಯಸ್ಕರಿಗೆ ಓದುಬರಹ ಹೇಳಿಕೊಡುವುದು, ದಲಿತರ ಪ್ರತ್ಯೇಕತೆಯನ್ನು ಹೋಗಲಾಡಿಸುವುದು, ಅಧಿಕಾರಿಗಳು ಮತ್ತು ಪೊಲೀಸರು ಬಡಜನರ ವಿಷಯದಲ್ಲಿ ಕಾನೂನುಪ್ರಕಾರ ಇತರ ಅನುಕೂಲಸ್ಥರನ್ನ ಹೇಗೆ ಕಾಣುತ್ತಾರೋ ಹಾಗೆಯೇ ಕಾಣುವಂತೆ ಒತ್ತಾಯಿಸುವುದು ಮುಂತಾದ ಕಾರ್ಯಕ್ರಮಗಳ ಮೂಲಕ ಎಲ್ಲಾ ಜಾತಿಯ ಬಡಜನರನ್ನು ತಮ್ಮ ಕಡೆಗೆ ಸೆಳೆಯಬಹುದಾಗಿದೆ. ದಲಿತರ ಮತ್ತು ಹಿಂದುಳಿದ ವರ್ಗಗಳ ವಿದ್ಯಾಭ್ಯಾಸ ಪಡೆದ ಮತ್ತು ಪ್ರಜ್ಞಾವಂತ ವ್ಯಕ್ತಿಗಳು ಹೆಚ್ಚು ಹೆಚ್ಚಾಗಿ ಎಡಪಕ್ಷಗಳ ನಾಯಕರಾಗಿ ಆ ಪಕ್ಷಗಳ ಎಲ್ಲಾ ಮಟ್ಟಗಳಲ್ಲೂ ಪ್ರಸಿದ್ಧಿಗೆ ಬಂದರೆ, ಆ ಜಾತಿಗಳ ಬಡವರಿಗೆ ಎಡಪಕ್ಷಗಳ ಬಗ್ಗೆ ಹೆಚ್ಚು ನಂಬಿಕೆಯುಂಟಾಗುತ್ತದೆ. ಈ ವಿಷಯದಲ್ಲಿ ನಕ್ಸಲೀಯರು ಇತರ ಎಡಪಕ್ಷಗಳಿಗಿಂತ ಮುಂದಿರುವುದರಿಂದಲೇ ಅವರು ಬಡಜನರ ವಿಶ್ವಾಸವನ್ನು ಅಷ್ಟರಮಟ್ಟಿಗೆ ಗಳಿಸಿದ್ದಾರೆ.

ಚುನಾವಣೆಗಳಲ್ಲಿ ಬಿ.ಜೆ.ಪಿ. ಸೋತು ಕಾಂಗ್ರೆಸ್ ಅಧಿಕಾರಕ್ಕೆ ಬರುವುದೂ, ಕಾಂಗ್ರೆಸ್ ಸೋತು ಮತ್ತೆ ಬಿ.ಜೆ.ಪಿ. ಬರುವುದೂ ದೊಡ್ಡ ವಿಷಯವಲ್ಲ. ಏಕೆಂದರೆ ಈ ಪಕ್ಷಗಳು ಆರ್ಥಿಕ ಪದ್ಧತಿಯನ್ನು ಮೂಲಭೂತವಾಗಿ ಬದಲಾಯಿಸುವ ಗುರಿಯನ್ನು ಇಟ್ಟುಕೊಂಡಿಲ್ಲ. ಅದೇ ಎಡಪಕ್ಷಗಳ ನಾಯಕತ್ವದಲ್ಲಿ ಸಮ್ಮಿಶ್ರ ಸರ್ಕಾರ ಬರುವುದು ಬಹುದೊಡ್ಡ ವಿಷಯ. ಇದೊಂದು ಹಗಲುಗನಸು ಎಂದು ತಳ್ಳಿಹಾಕಬಾರದು. ಎಡಪಕ್ಷಗಳು ಶಾಶ್ವತವಾಗಿ ವಿರೋಧ ಪಕ್ಷಗಳಾಗಿ ಉಳಿಯಬೇಕೆಂದು ಸಂವಿಧಾನದಲ್ಲೇನೂ ಹೇಳಿಲ್ಲ. ಎಡಪಕ್ಷಗಳ ಸರ್ಕಾರ ಬರುವುದು ಸಾಧ್ಯವಿಲ್ಲ ಎಂದು ಹೇಳಲಾಗದು. ಅದು ಸಾಧ್ಯವಾಗಬೇಕಾದರೆ, ಯಾವ ಯಾವ ಘಟ್ಟಗಳ ಮೂಲಕ ಸಾಗಬೇಕಾಗುತ್ತದೆಂಬುದನ್ನು ಸ್ವಲ್ಪ ಚರ್ಚಿಸೋಣ.

ಈಗ ಲೋಕಸಭೆಯಲ್ಲಿ ಎಡಪಕ್ಷಗಳ ಸದಸ್ಯರ ಸಂಖ್ಯೆ ೬೩ಕ್ಕೆ ಏರಿದೆ. ಹಳೆಯ ಮತ್ತು ಹೊಸ ಎಡಪಕ್ಷಗಳೂ ಸಹಕರಿಸಿ ಕೆಲಸಮಾಡಿದರೆ, ಮುಂದಿನ ಚುನಾವಣೆಯಲ್ಲಿ ಈ ಸಂಖ್ಯೆಯನ್ನು ೧೦೦ಕ್ಕೆ ಏರಿಸುವ ಸಾಧ್ಯತೆ ಖಂಡಿತ ಇದೆ – ಇದು ಮೊದಲನೆಯ ಘಟ್ಟವೆಂದು ಹೇಳಬಹುದು. ಈ ಘಟ್ಟದಲ್ಲಿ ಪ್ರಾದೇಶಿಕ ಪಕ್ಷಗಳೊಂದಿಗೆ ಸೇರಿಕೊಂಡು ಮೂರನೆಯ ರಂಗದ ಸಮ್ಮಿಶ್ರ ಸರ್ಕಾರದಲ್ಲಿ ಎಡಪಕ್ಷಗಳ ಸದಸ್ಯರು ಮಂತ್ರಿಮಂಡಲದಲ್ಲಿ ಭಾಗವಹಿಸಬಹುದು. ಅದು ಅಲ್ಪಾವಧಿಯ ಸರ್ಕಾರವಾಗುತ್ತದೆಯೋ ಪೂರ್ಣಾವಧಿಯ ಸರ್ಕಾರವಾಗುತ್ತದೆಯೋ, ಆ ಮಾತು ಬೇರೆ. ಎಡಪಕ್ಷಗಳನ್ನು ಪ್ರತಿನಿಧಿಸುವ ಮಂತ್ರಿಗಳು ಶ್ರದ್ಧಾಪೂರ್ವಕ ಕಾರ್ಯವೈಖರಿಯಿಂದ ಭ್ರಷ್ಟಾಚಾರರಹಿತ ಕಾರ್ಯ ನಿರ್ವಹಣೆಯಿಂದ, ವ್ಯಕ್ತಿಗತವಾಗಿ ಹಾಗೂ ತಮ್ಮ ಪಕ್ಷಗಳಿಗೆ ಮೆಚ್ಚುಗೆ ಗಳಿಸುವುದರಲ್ಲಿ ಸಂದೇಹವಿಲ್ಲ. ಇನ್ನೊಂದು ಕಡೆ, ಶೋಷಕ ವರ್ಗಗಳೂ ಅವರ ರಾಜಕೀಯ ಪಕ್ಷಗಳೂ ಎಚ್ಚರಗೊಂಡು, ಎಡಪಕ್ಷಗಳ ಪ್ರಾಬಲ್ಯ ಮತ್ತಷ್ಟು ಬೆಳೆಯದಿರಲು, ಅದನ್ನು ಕುಗ್ಗಿಸಲು, ಸರ್ವಪ್ರಯತ್ನ ಮಾಡುವರೆಂದು ಬೇರೆ ಹೇಳಬೇಕಾಗಿಲ್ಲ.

ಲೋಕಸಭೆಯಲ್ಲಿ ಎಡಪಕ್ಷಗಳ ಸದಸ್ಯರ ಸಂಖ್ಯೆ ೧೫೦ಕ್ಕೆ ಏರುವುದು ಎರಡನೆಯ ಘಟ್ಟವೆಂದು ಇಟ್ಟುಕೊಳ್ಳೋಣ. ಆ ಘಟ್ಟವನ್ನು ತಲುಪಲು ಬಹಳ ತೀವ್ರವಾದ ಪ್ರತಿರೋಧವನ್ನು ಎದುರಿಸಬೇಕಾಗುತ್ತದೆ. ಹಿಂದಿನ ತಂತ್ರಗಳ ಜೊತೆಗೆ, ಹೊಸತಂತ್ರಗಳು ಪ್ರಯೋಗವಾಗುತ್ತವೆ. ''ಎಡಪಕ್ಷದವರಿಗೆ ದೇವರು, ಧರ್ಮ ಇದಾವುದೂ ಇಲ್ಲ'' ''ಇವರು ಅಧಿಕಾರಕ್ಕೆ ಬಂದರೆ, ನಮ್ಮ ಪುರಾತನ ಸಂಸ್ಕೃತಿ ನಾಶವಾಗುತ್ತದೆ.'' ಅಲ್ಲದೆ, ''ಅವರು ಪ್ರಜಾಪ್ರಭುತ್ವವನ್ನೇ ಕೊನೆಗಾಣಿಸಿ, ತಮ್ಮ ಸರ್ವಾಧಿಕಾರತ್ವವನ್ನು ಸ್ಥಾಪಿಸುತ್ತಾರೆ. ಇದೇ ಕೊನೆಯ ಚುನಾವಣೆಯಾಗುತ್ತದೆ'' ಇಂತಹ ಸುಳ್ಳು ಪ್ರಚಾರಗಳು ಮೊಳಗುತ್ತವೆ. ಬಂಡವಾಳಶಾಹಿ ಮತ್ತು ಕೋಮುಶಕ್ತಿಗಳು ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ, ತಾತ್ವಿಕ – ಎಲ್ಲಾ ರಂಗಗಳಲ್ಲೂ ತಮ್ಮ ಅಪಾರ ಪ್ರಚಾರ ಸಾಧನಗಳನ್ನು ಹೇರಳವಾಗಿ ಬಳಸುತ್ತಾರೆ. ಇವುಗಳನ್ನು ಎದುರಿಸಬೇಕಾದರೆ, ಎಡಪಕ್ಷಗಳಿಗೆ ಬಡಜನರ ಬಲವೊಂದೇ ಸಾಕಾಗದು. ಬುದ್ಧಿಜೀವಿಗಳ, ಮಧ್ಯಮವರ್ಗದ ಮತ್ತು ಮಾನವೀಯತೆಯುಳ್ಳ ವಿಭಾಗಗಳ ನೆರವು ಅತ್ಯಗತ್ಯವಾಗುತ್ತದೆ.

ಎಡಪಕ್ಷಗಳು ಇಟ್ಟುಕೊಂಡಿರುವ ಆರ್ಥಿಕ ಗುರಿಯು, ಚಾರಿತ್ರಿಕವಾಗಿ ಅವಶ್ಯ ಮಾತ್ರವೇ ಅಲ್ಲದೆ, ನೈತಿಕವಾಗಿ ಸಮರ್ಥನೀಯ ಎಂಬ ಅಂಶವನ್ನು ಈಗಿನಿಂದಲೇ ಒತ್ತಿ ಹೇಳಬೇಕು. ಶೋಷಣೆಯಿಲ್ಲದ ಸಮಾಜ ಪದ್ಧತಿಯು ನೈತಿಕ ದೃಷ್ಟಿಯಿಂದ ಅಪೇಕ್ಷಣೀಯ ಪದ್ಧತಿಯೆಂದೂ, ಮಾನವೀಯತೆಯುಳ್ಳವರೆಲ್ಲರೂ ಅದನ್ನು ಬೆಂಬಲಿಸಬೇಕೆಂದೂ ಸಾರಿಸಾರಿ ಹೇಳಬೇಕಾಗುತ್ತದೆ. ಬುದ್ಧಿಜೀವಿಗಳನ್ನು, ಮಾನವೀಯತೆಯುಳ್ಳವರನ್ನು ಬಾಧಿಸುವ ಮತ್ತೊಂದು ಪ್ರಶ್ನೆಯೆಂದರೆ ಪ್ರಜಾಪ್ರಭುತ್ವದ ವಿಷಯದಲ್ಲಿ ಅವರಿಗಿರುವ ಕೆಲವು ಸಂದೇಹಗಳು. ಈ ಬಗ್ಗೆ ಅವರೊಡನೆ ಸತತವಾಗಿ ಸಂವಾದ ಮಾಡಿ ಅವರ ಸಂದೇಹಗಳನ್ನು ಹೋಗಲಾಡಿಸಬೇಕಾಗುತ್ತದೆ. ಚುನಾಯಿತ ಸರ್ಕಾರ ಅಧಿಕಾರದಲ್ಲಿದ್ದ ಮಾತ್ರಕ್ಕೆ ಅದು ನಿಜವಾದ ಪ್ರಜಾಪ್ರಭುತ್ವವಾಗಲಾರದೆಂದು, ಸಾಮಾನ್ಯ ಜನರು ಪ್ರಭುತ್ವದ ಅಧಿಕಾರಿಗಳಿಗೆ ಭಯಪಡದೆ ತಮ್ಮ ಜೀವನವನ್ನು ಸಾಗಿಸುವುದು ಪ್ರಜಾಪ್ರಭುತ್ವದ ತಿರುಳೆಂದು ಒತ್ತಿಹೇಳುತ್ತಾ, ಎಡಪಕ್ಷಗಳ ಸರ್ಕಾರದಡಿಯಲ್ಲಿ ಜನಸಾಮಾನ್ಯರು ನಿರ್ಭಯರಾಗಿ ಇರುವಂತಹ ಪರಿಸ್ಥಿತಿ ಉಂಟಾಗಿ, ಪ್ರಜಾಪ್ರಭುತ್ವ ವಿಕಾಸಗೊಳ್ಳುವುದೆಂದು ವಿವರಿಸಬೇಕು. ಅಲ್ಲದೆ, ಎಡಪಕ್ಷಗಳ ಸರ್ಕಾರವು ತಪ್ಪುಗಳನ್ನು ಮಾಡಿ ಜನರ ವಿಶ್ವಾಸವನ್ನು ಕಳೆದುಕೊಂಡರೆ, ತಾವು ಚುನಾವಣೆಯ ಮೂಲಕ ಸೋಲೊಪ್ಪಿಕೊಳ್ಳಲು ಸಿದ್ಧರೆಂದು ಸ್ಪಷ್ಟವಾಗಿ ಹೇಳಬೇಕು. ಒಟ್ಟಿನಲ್ಲಿ ಇದೊಂದು ನಂಬಿಕೆಯ ಪ್ರಶ್ನೆ. ಪಕ್ಷದ ಒಳಗೂ ಮತ್ತು ಹೊರಗೂ ಭಿನ್ನಾಭಿಪ್ರಾಯಗಳನ್ನು ಮುಚ್ಚಿಟ್ಟುಕೊಳ್ಳದೆ ಅವುಗಳನ್ನು ಕೂಲಂಕಷವಾಗಿ ಚರ್ಚಿಸುವ ಸಂಸ್ಕೃತಿ ಎಡಪಕ್ಷಗಳಲ್ಲಿ ಬೆಳೆದಂತೆಲ್ಲಾ ಬುದ್ಧಿಜೀವಿಗಳಲ್ಲೂ ಮಾನವೀಯತೆಯುಳ್ಳವರಲ್ಲೂ ನಂಬಿಕೆ ಉಂಟಾಗುತ್ತದೆಂದು ಬೇರೆ ಹೇಳಬೇಕಾಗಿಲ್ಲ.

ಇನ್ನು ಚುನಾವಣೆ ಮಾರ್ಗದ ಕೊನೆಯ ಹಂತದ ಕುರಿತಾಗಿ ಒಂದು ಮಾತು. ಎಲ್ಲಾ ಅಡಚಣೆಗಳನ್ನೂ ದಾಟಿ ಕೊನೆಗೆ ಎಡಪಕ್ಷಗಳ ನಾಯಕತ್ವದಲ್ಲಿ ಸಮ್ಮಿಶ್ರ ಸರ್ಕಾರ ಉಂಟಾಗುತ್ತದೆಯೆಂಬೋಣ. ಇದು ಈಗ ಕೇವಲ ಕಾಲ್ಪನಿಕ ಸಂಭವ ಎಂದು ತೋರಿದರೂ, ಇದೂ ಒಂದು ಸಾಧ್ಯತೆಯಾದುದರಿಂದ, ಇದನ್ನು ಚರ್ಚಿಸದಿದ್ದರೆ ಲೇಖನ ಸಂಪೂರ್ಣವಾಗುವುದಿಲ್ಲ. ಅಂತಹ ಸರ್ಕಾರ ಅಧಿಕಾರಕ್ಕೆ ಬಂದು, ಕಾನೂನುಗಳ ಮೂಲಕ, ಆರ್ಥಿಕ ಶೋಷಣೆಯನ್ನು ಕೊನೆಗೊಳಿಸಲು ಯತ್ನಿಸಿದರೆ, ಶೋಷಕವರ್ಗಗಳೂ ಅವರ ಪ್ರತಿನಿಧಿಗಳೂ ಸುಮ್ಮನಿರುತ್ತಾರೆಯೇ? ಇದು ಸಂವಿಧಾನಕ್ಕೆ ವಿರೋಧ ಎಂದು ಅವರು ಸುಪ್ರೀಂ ಕೋರ್ಟಿಗೆ ಹೋಗಲೂ ಸಿದ್ಧರಿರುತ್ತಾರೆ. ಈಗ ವಿರೋಧ ಪಕ್ಷಗಳು ಬಂದ್ ಆಚರಿಸುವಂತೆ, ಅವರೂ ಆಚರಿಸುತ್ತಾರೆ. ಆರ್ಥಿಕ ಯಾಜಮಾನ್ಯ ಅವರ ಕೈಯಲ್ಲೇ ಇರುವುದರಿಂದ, ಅವರು ಸುಲಭವಾಗಿ ಎಲ್ಲವನ್ನೂ ಬಂದ್ ಮಾಡಬಹುದು. ಸೂಕ್ತ ಕ್ರಮಗಳಿಂದ ಸರ್ಕಾರವು ಇವೆಲ್ಲವನ್ನೂ ವಿಫಲಗೊಳಿಸಿದರೆ, ಆ ಶಕ್ತಿಗಳು ಗಲಭೆ, ಹಿಂಸಾಚಾರ ಮುಂತಾದ ಜನವಿರೋಧಿ ಚಟುವಟಿಕೆಗಳಲ್ಲಿ ತೊಡಗಬಹುದು. ಒಟ್ಟಿನಲ್ಲಿ ಚುನಾವಣೆಯಲ್ಲಿ ಸೋಲುವುದು ಒಂದು ಕ್ರಿಕೆಟ್ ಪಂದ್ಯದಲ್ಲಿನ ಸೋಲಿನಂತಲ್ಲ. ಹಾಲಿ ಆರ್ಥಿಕ ಪದ್ಧತಿಗೆ ಧಕ್ಕೆ ಬರದೆಯಿರುವವರೆಗೆ ಯಾವ ಪಕ್ಷ ಅಧಿಕಾರಕ್ಕೆ ಬಂದರೂ ಶೋಷಕ ವರ್ಗಗಳು ನಿಭಾಯಿಸಬಲ್ಲವು. ಆರ್ಥಿಕ ಪದ್ಧತಿಯನ್ನು ಮೂಲಭೂತವಾಗಿ ಬದಲಾಯಿಸುವ ಗುರಿಯುಳ್ಳ ಎಡಪಕ್ಷಗಳು ಚುನಾವಣೆಗಳ ಮೂಲಕ ಅಧಿಕಾರಕ್ಕೆ ಬಂದರೆ, ಶೋಷಕವರ್ಗವು ಏನುಬೇಕಾದರೂ ಮಾಡಲು ಪ್ರಯತ್ನಿಸುತ್ತದೆ. ಚುನಾಯಿತ ಸರ್ಕಾರವು ಆಗ ಪ್ರಭುತ್ವದ ಶಕ್ತಿಯನ್ನು ಉಪಯೋಗಿಸಿ ಜನರು ತನಗಿತ್ತ ಆದೇಶವನ್ನು ಕಾಪಾಡಬೇಕಾಗುತ್ತದೆ.

■ ಅನಾಮಿಕ

# ಕನ್ನಡದ, ಕನ್ನಡಿಗರ, ಕರ್ನಾಟಕದ ಹಿತರಕ್ಷಣೆಗೆ
# ಕರ್ನಾಟಕ ಸ್ವಾತಂತ್ರ್ಯ ಸಂಗ್ರಾಮ
# ಅನಿವಾರ್ಯವಾಗಬಹುದೇ ?

**ಸಂಕ್ಷಿಪ್ತ ಐತಿಹಾಸಿಕ ಹಿನ್ನೆಲೆ**

ಭಾರತವೆಂದು ಇಂದು ನಾವು ಕರೆಯುತ್ತಿರುವ ಈ ಪೃಥ್ವಿಯ ಉಪಖಂಡವು ಮೂಲವಾಗಿ ದ್ರಾವಿಡ ಜನಾಂಗದಿಂದ (ಇಂದಿನ ಕನ್ನಡ, ತೆಲುಗು, ತಮಿಳು, ಮಲಯಾಳಂ ಮತ್ತು ತುಳು ಮಾತೃಭಾಷೆಯಾಗಿದ್ದ ಜನಾಂಗ) ವಾಸಿಸಲ್ಪಟ್ಟಿತ್ತು. ದ್ರಾವಿಡ ಜನಾಂಗವು ಈ ಉಪಖಂಡದ ಮೂಲನಿವಾಸಿಗಳು. ಆರ್ಯರು ಈ ಉಪಖಂಡವನ್ನು ಹೊರಗಿನಿಂದ ಬಂದು ಆಕ್ರಮಿಸಿಕೊಂಡ ಮೊದಲ ಧಾರ್ಮಿಕ ಮಿಶನರಿಗಳು. ಅವರು ತಮ್ಮ ಧಾರ್ಮಿಕ, ಸಾಮಾಜಿಕ, ಆರ್ಥಿಕ, ರಾಜಕೀಯ ವಿಚಾರಗಳ ಹೊತ್ತಿಗೆಗಳಾದ ವೇದ, ಉಪನಿಷತ್ತು, ರಾಮಾಯಣ, ಮಹಾಭಾರತ, ಭಗವದ್ಗೀತೆ, ಕೌಟಿಲ್ಯನ ಅರ್ಥಶಾಸ್ತ್ರ, ವಿವಿಧ ಧರ್ಮಶಾಸ್ತ್ರಗಳು ಮುಂತಾದ ಸಾಹಿತ್ಯಗಳನ್ನೆಲ್ಲಾ ಅತ್ಯಂತ ಜಾಣತನದಿಂದ ಇಲ್ಲಿಯ ಜನರ ಭಾಷೆಗಳಲ್ಲಿಯೇ ವ್ಯವಸ್ಥಿತವಾಗಿ ಪ್ರಚಾರ ಮಾಡಿದರು. ಮಾತ್ರವಲ್ಲದೇ ಇಲ್ಲಿಯೇ ಬೇರೆ ಬೇರೆ ಪ್ರದೇಶಗಳಲ್ಲಿ ನೆಲೆ ನಿಂತು, ಶಾಶ್ವತವಾಗಿ ತಳವೂರಿ ಇಲ್ಲಿಯ ಜನರ ನುಡಿ ಮತ್ತು ನಡೆಯ ಮೇಲೆ ತಮ್ಮ ದಟ್ಟವಾದ ಹಾಗೂ ಅಳಿಸಲಾಗದ ಪ್ರಭಾವವನ್ನು ಬೀರಿದರು.

ಆರ್ಯರ ನಂತರ ಈ ಉಪಖಂಡದ ಮೇಲೆ ಆಕ್ರಮಣ ಮಾಡಿ ತಮ್ಮ ಧಾರ್ಮಿಕ ಮತ್ತು ಸಾಮಾಜಿಕ ಪ್ರಭಾವವನ್ನು ಬೀರಿದವರೆಂದರೆ ಮುಸ್ಲಿಮ್ ಮಿಶನರಿಗಳು. ಆದರೆ ಇವರು ಆರ್ಯರಷ್ಟು ಜಾಣತನದಿಂದ ತಮ್ಮ ಮಿಶನರಿ ಕೆಲಸ ಮಾಡಲಿಲ್ಲ. ಇವರು ಸ್ವಲ್ಪ ಹುಂಬತನದಿಂದ ಹಾಗೂ ಒತ್ತಡ ತಂತ್ರಗಳಿಂದ ತಮ್ಮ ಧಾರ್ಮಿಕ ಮತ್ತು ಸಾಮಾಜಿಕ ಪ್ರಭಾವ ಬೆಳೆಸಿದರು. ಇಲ್ಲಿನದೇ ಭಾಷೆಗಳಲ್ಲಿ ಹೆಚ್ಚು ಪ್ರಚಾರ ಮಾಡಲಿಲ್ಲ. ಆದರೆ ಇವರೂ ಸಹ ಶಾಶ್ವತವಾಗಿ ನೆಲೆಸಿ ಇಲ್ಲಿಯ ಪ್ರಮುಖ ಧಾರ್ಮಿಕ ಜನಾಂಗಗಳಲ್ಲೊಂದಾದರು. ನಂತರ ಬಂದವರು, ಬ್ರಿಟಿಷ್ ಹಾಗೂ ಇತರ ದೇಶಗಳ ಕ್ರಿಶ್ಚಿಯನ್ ಮಿಶನರಿಗಳು. ಇವರೂ ಸಹ ವ್ಯವಸ್ಥಿತವಾಗಿ ತಮ್ಮ ಧರ್ಮ ಪ್ರಚಾರದ ಜೊತೆಗೇ ವ್ಯಾಪಾರ ಮತ್ತು ರಾಜಕೀಯ ಕ್ಷೇತ್ರಗಳನ್ನು ಆಕ್ರಮಿಸಿಕೊಂಡು ಸುಮಾರು ೨೦೦ ವರ್ಷಗಳ ಕಾಲ ಭಾರತ ಉಪಖಂಡವನ್ನು 'ಇಂಡಿಯಾ' ಎಂದು ಕರೆದು ಆಳ್ವಿಕೆ ಮಾಡಿದರು. ಆದರೆ ಇವರು ಈ ಉಪಖಂಡದಲ್ಲಿ ಶಾಶ್ವತವಾಗಿ ನೆಲೆ ನಿಲ್ಲದೆ ಹೊರಗಿನವರಾಗಿಯೇ ಆಳ್ವಿಕೆ ಮಾಡಿ ಹಲವಾರು ಅಭಿವೃದ್ಧಿ ಕಾರ್ಯಗಳ ಜೊತೆಗೆ ಸಾಕಷ್ಟು ಶೋಷಣೆಯನ್ನೂ ಮಾಡಿದರು. ಹೀಗೆ ಈ ಉಪಖಂಡವನ್ನು ಆರ್ಯರು 'ಭರತವರ್ಷ'ವೆಂದೂ ಮುಸ್ಲಿಮರು 'ಹಿಂದ್' ಮತ್ತು 'ಹಿಂದೂಸ್ತಾನ್' (ಭೌಗೋಳಿಕ ಶಬ್ದವೇ ಹೊರತು ಧಾರ್ಮಿಕ ಶಬ್ದವಲ್ಲ) ಎಂದೂ, ಕ್ರಿಶ್ಚಿಯನ್ನರು 'ಇಂಡಿಯಾ' ಎಂದೂ ಕರೆದು ಈ ಉಪಖಂಡದ ಮೇಲೆ ತಮ್ಮ ಅಳಿಸಲಾರದ ಪ್ರಭಾವ ಬೀರಿದ್ದಾರೆ. ಆ ನಂತರ ಮುಸ್ಲಿಮರೆಲ್ಲರೂ ಉಪಯೋಗಿಸುತ್ತಿದ್ದ 'ಹಿಂದ್' ಮತ್ತು 'ಹಿಂದುಸ್ತಾನ್' ಶಬ್ದದ ಆಧಾರದ ಮೇಲೆ ಇಲ್ಲಿಯ ವೈದಿಕಶಾಹಿ ಮತ್ತು ಪುರೋಹಿತಶಾಹಿಗಳು 'ಹಿಂದು' ಎನ್ನುವ ಶಬ್ದವನ್ನು ಚಲಾವಣೆಗೆ ತಂದರು. ಮುಖ್ಯವಾಗಿ ಬೌದ್ಧರಲ್ಲದ, ಕ್ರಿಶ್ಚಿಯನ್ ಅಲ್ಲದ, ಮುಸ್ಲಿಂ ಅಲ್ಲದ, ಸಿಕ್ಖರಲ್ಲದ, ಜೈನರಲ್ಲದ ಜನರೆಲ್ಲರಿಗೂ 'ಹಿಂದು' ಎಂದು ಕರೆದು ಅವರನ್ನೆಲ್ಲಾ ಶೋಷಣೆ ಮಾಡಲಾಗುತ್ತಿದೆ.

ಹೀಗೆ ಇತಿಹಾಸದ ಕಾಲಚಕ್ರದಲ್ಲಿ ಈ ಉಪಖಂಡ ಸಾವಿರಾರು ಬದಲಾವಣೆಗಳನ್ನೂ, ಏರುಪೇರುಗಳನ್ನೂ ಕಂಡಿದೆ. ಕಳೆದ ೨೫೦೦-೩೦೦೦ ವರ್ಷಗಳಲ್ಲಿ ಭರತಖಂಡ ಅನೇಕ ಜನಾಂಗಗಳ, ಅನೇಕ ಧರ್ಮಗಳ, ಅನೇಕ ಭಾಷೆಗಳ, ಅನೇಕ ಸಂಸ್ಕೃತಿಗಳ ಪ್ರಯೋಗಶಾಲೆಯಾಗಿದೆ. ಇದು ಎಂದಿಗೂ ಆಧುನಿಕ 'ರಾಷ್ಟ್ರ'ದ ಅರ್ಥದಲ್ಲಿ ಒಂದು 'ರಾಷ್ಟ್ರ'ವಾಗಿರಲಿಲ್ಲ. ರಾಜಪ್ರಭುತ್ವವಿದ್ದ ಅನೇಕ 'ರಾಜ್ಯ'ಗಳ ಹಾಗೂ ಸಾಮ್ರಾಟ ಪ್ರಭುತ್ವವಿದ್ದ ಅನೇಕ 'ಸಾಮ್ರಾಜ್ಯ'ಗಳ ಭೂಪ್ರದೇಶವಾಗಿದ್ದಿತು. ನಂತರ ಹೊರಗಿನವರಾಗೆ ಆಳ್ವಿಕೆ ನಡೆಸಿದ, ಇಲ್ಲಿಯವರಾಗದೇ ಉಳಿದ ಇಂಗ್ಲಿಷರು ಸ್ಥಳೀಯರಿಗೆಲ್ಲರಿಗೂ ಸಮಾನ ಶತ್ರುಗಳಾದರು. ಆದ್ದರಿಂದ ಎಲ್ಲರೂ ಮಹಾತ್ಮ ಗಾಂಧಿಯವರ ಧುರೀಣತ್ವದಲ್ಲಿ ಇಂಗ್ಲಿಷರ ವಿರುದ್ಧ 'ಭಾರತ'ವು ಇಂಗ್ಲಿಷರಿಂದ ಸ್ವತಂತ್ರವಾಗಲು ಹೋರಾಡಿದರು.

**ಇಂಗ್ಲಿಷರಿಂದ ಸ್ವತಂತ್ರವಾದ ನಂತರ**

ಇಂಗ್ಲಿಷರಿಂದ ಸ್ವತಂತ್ರವಾದ ಹಿನ್ನೆಲೆಯಲ್ಲೇ 'ಇಂಡಿಯಾ' ಮತ್ತು 'ಪಾಕಿಸ್ತಾನ' ಎಂದು ಎರಡು ರಾಷ್ಟ್ರಗಳು ಅಸ್ತಿತ್ವಕ್ಕೆ ಬಂದವು. ಇಂಗ್ಲಿಷರು ಈ 'ರಾಷ್ಟ್ರ'ವನ್ನು ಇಬ್ಭಾಗ ಮಾಡಿದರು ಎಂದು ಅನೇಕರು ಮೂದಲಿಸುತ್ತಾರೆ. ಆದರೆ ವಾಸ್ತವದಲ್ಲಿ ಇಂಗ್ಲಿಷರು ಇಲ್ಲಿಗೆ ಬಂದಾಗ 'ಭಾರತ' ಅರ್ಥಾತ್ 'ಹಿಂದುಸ್ತಾನ್' ಒಂದು 'ರಾಷ್ಟ್ರ'ವಾಗಿ ಇರಲೇ ಇಲ್ಲ. ಅದು ಹಲವಾರು ರಾಜ್ಯಗಳ, ದೇಶಗಳ, ಸಾಮ್ರಾಜ್ಯಗಳ ಉಪಖಂಡವಾಗಿತ್ತು. ಹಾಗೆ ನೋಡಿದರೆ ಹಲವಾರು ರಾಜ್ಯಗಳಿದ್ದ ಭಾರತ ಉಪಖಂಡದ ಭೂಪ್ರದೇಶಗಳನ್ನು ಧಾರ್ಮಿಕ, ವಾಣಿಜ್ಯಾತ್ಮಕ, ರಾಜಕೀಯ ಹಿತಾಸಕ್ತಿಗಳಿಗನುಗುಣವಾಗಿ ಒಂದೇ ಆಡಳಿತ ವ್ಯವಸ್ಥೆಯಲ್ಲಿ ಒಗ್ಗೂಡಿಸಿದವರು ಇಂಗ್ಲಿಷರು. ಇಲ್ಲಿನ ಜನರ ಹಾಗೂ ಧುರೀಣರು ಒತ್ತಡ ಮತ್ತು ಧಾರ್ಮಿಕ ಕಾರಣಗಳಿಗಾಗಿ 'ಇಂಡಿಯಾ' ಮತ್ತು 'ಪಾಕಿಸ್ತಾನ್' ಎಂಬ ಎರಡು ರಾಷ್ಟ್ರಗಳನ್ನಾಗಿ ಇಂಗ್ಲಿಷರು ಮಾಡಿದ್ದು ಆಶ್ಚರ್ಯವೇನಲ್ಲ. ಹನ್ನೊಂದನ್ನು ಒಂದು ಮಾಡಿದ್ದು ಇಂಗ್ಲಿಷರೇ, ಒಂದನ್ನು ಎರಡು ಮಾಡಿದ್ದು ಇಂಗ್ಲಿಷರ ಜೊತೆಗೆ ನಾವು ಸಹ. ಆಧುನಿಕ ಜಗತ್ತಿನ ಜನತಾಂತ್ರಿಕ ರೀತಿಯಂತೆ ಬಹುಜನರ ಇಚ್ಛೆ, ಅಭಿಪ್ರಾಯ ಹಾಗೂ ಹೋರಾಟದಿಂದ ಹೆಚ್ಚು ರಾಷ್ಟ್ರಗಳ ನಿರ್ಮಾಣ ಸಾಧ್ಯವಾಗಬಹುದು, ಸಾಧುವೂ ಆಗಬಹುದು. ಸಂಯುಕ್ತ ಅರಬ್ ಗಣರಾಜ್ಯ ಒಡೆದು ಈಜಿಪ್ಟ್, ಸಿರಿಯಾ, ಲಿಬಿಯಾ ರಾಷ್ಟ್ರಗಳು, ಪಾಕಿಸ್ತಾನ್ ಒಡೆದು ಬಾಂಗ್ಲಾದೇಶ, ಯುಗೋಸ್ಲಾವಿಯಾ ಒಡೆದು ಕೆಲವು ರಾಷ್ಟ್ರಗಳು, ಸೋವಿಯತ್ ಒಕ್ಕೂಟ ಒಡೆದು ಹಲವು ರಾಷ್ಟ್ರಗಳು ನಿರ್ಮಾಣವಾಗಲಿಲ್ಲವೇ ?

**ಇಂಗ್ಲಿಷ್ ಸಾಮ್ರಾಜ್ಯದ ಬದಲಾಗಿ ಹಿಂದೀ ಸಾಮ್ರಾಜ್ಯ**

ಅದೇನೆ ಇರಲಿ, ಇಂಗ್ಲಿಷರಿಂದ ಸ್ವತಂತ್ರವಾದ ಮೇಲೆ ಸಮಾನ ಭಾಷಿಕ, ಆರ್ಥಿಕ, ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ, ರಾಷ್ಟ್ರೀಯತೆಯ ಹಕ್ಕುಗಳನ್ನು ಹೊಂದುವ ಆಳವಾದ ಇಚ್ಛೆ ಭಾರತ ಉಪಖಂಡದ 'ರಾಷ್ಟ್ರ'ಗಳಂತೇ ಇದ್ದ ವಿವಿಧ ಭಾಷಾಧಾರಿತ

ಇಂದಿನ ಕೇಂದ್ರೀಕೃತ ರಾಜಕೀಯ ವ್ಯವಸ್ಥೆಯಿಂದ ಉದ್ಭವವಾಗಿರುವ ರೋಗಗಳು ಮತ್ತು ಅವುಗಳ ಚಿಹ್ನೆಗಳು ಪದೇ ಪದೇ ಭಾರತದ ಬೇರೆಬೇರೆ ಭಾಗಗಳಲ್ಲಿ ಭಯೋತ್ಪಾದನೆ, ಆಹಾರ ನಿರುದ್ಯೋಗ, ಅಸಮಾನ ಅಭಿವೃದ್ಧಿಯ ರೂಪಗಳಲ್ಲಿ ಕಾಣಿಸಿಕೊಳ್ಳುತ್ತಿವೆ. ದೇಶಗಳ ಸ್ವಾಯತ್ತತೆ, ಸ್ವಯಂನಿರ್ಣಯ, ಸ್ವಯಂ ಅಧಿಕಾರಗಳ ಚಳುವಳಿಗಳ ಮೂಲಕ ವ್ಯಕ್ತವಾಗುತ್ತಿವೆ.

ಡಾ|| ದೊಡ್ಡಮೇಟಿ ಅಶೋಕ

ಭೂವಲಯಗಳ ಜನರಿಗಿದ್ದಿತು. ಅದರಂತೆಯೇ ಸ್ವಾತಂತ್ರ್ಯ ಸಂಗ್ರಾಮದ ಕಾಲಕ್ಕೆ, ಪ್ರಮುಖ ರಾಜಕೀಯ ಪಕ್ಷವಾದ ಕಾಂಗ್ರೆಸ್ ಪಕ್ಷವು ಬೇರೆ ಬೇರೆ ರಾಷ್ಟ್ರೀಯ ಭಾವನೆಗಳನ್ನು (ಭಾಷಾಧಾರಿತ) ಹೊಂದಿದ ಜನರಿಗೆ ಆಶ್ವಾಸನೆ ನೀಡಿತ್ತು. ಕೇವಲ ಕೆಲವು ಇಲಾಖೆಗಳು ಮಾತ್ರ ದಿಲ್ಲಿಯ ಒಕ್ಕೂಟ ಸರ್ಕಾರದ ವ್ಯಾಪ್ತಿಯಲ್ಲಿದ್ದು ಬಹುತೇಕ ಬೇರೆಲ್ಲಾ ಇಲಾಖೆಗಳು ದೇಶೀಯ ಸರ್ಕಾರಗಳ ವ್ಯಾಪ್ತಿಗೆ (ಇಂದು ತಪ್ಪಾಗಿ ರಾಜ್ಯ ಸರ್ಕಾರಗಳೆಂದು ನಾವು ಕರೆಯುತ್ತಿರುವ State Governments) ಬರುವವೆಂದೂ ಕಾಂಗ್ರೆಸ್ ಪಕ್ಷ ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ಆಶ್ವಾಸನೆ ಕೊಟ್ಟಿತ್ತು. ಆದರೆ ಸ್ವಾತಂತ್ರ್ಯ ದೊರೆತ ಮೇಲೆ ರಾಜಕೀಯರಂಗದಲ್ಲಿ ಪ್ರಬಲವಾದ ಹಿಡಿತವಿದ್ದ ಉತ್ತರ ಭಾರತದ ಹಾಗೂ ಹಿಂದೀ ಮೂಲದ ಪ್ರದೇಶಗಳ ಕುತಂತ್ರದಿಂದ ದಿಲ್ಲಿಯ ಒಕ್ಕೂಟ ಸರ್ಕಾರದಲ್ಲಿ - ಪ್ರಮುಖ ಅಧಿಕಾರವೆಲ್ಲವೂ ಕೇಂದ್ರೀಕೃತಗೊಳ್ಳುವಂಥ ಹಾಗೂ ಹಿಂದೀ ಭಾಷೆಗೆ ‘ರತ್ನಖಚಿತ ಸಿಂಹಾಸನ’ ವಿರುವ, ಬೇರೆಲ್ಲಾ ಪ್ರಮುಖ ಬಾಷೆಗಳಿಗೆ ‘ಶವಾಸನ’ ವಿರುವ ಇಂದಿನ ಭಾರತದ ಏಕಮೇವ ಸಂವಿಧಾನ ರಚನೆಯಾಯಿತು. ಅದೂ ಸಹಿತ ಭಾಷಾಧಾರಿತ ರಾಷ್ಟ್ರೀಯ ಭಾವನೆಗಳನ್ನು ಹೊಂದಿದ ದೇಶಗಳ ರಚನೆಯಾಗುವ ಮೊದಲೇ ಜಾರಿಯಲ್ಲಿ ಬಂದಿದ್ದು ಹಿಂದಿಯೇತರ ದೇಶಗಳ ಜನರಿಗೆ ಬಹಳ ಅನ್ಯಾಯ ವಾಯಿತು. ಹಿಂದಿಯೇತರ ದೇಶಗಳ ಜನರು ಸ್ವಾತಂತ್ರ್ಯ ದೊರೆತ ಅಮಲಿನಲ್ಲಿ ಇವುಗಳ ಬಗ್ಗೆ ಹೆಚ್ಚು ಗಮನ ಹರಿಸಲಿಲ್ಲ. ಭಾರತ ಸಂವಿಧಾನ ಕರಡು ಸಮಿತಿಯ ಅಧ್ಯಕ್ಷರಾಗಿದ್ದ ಡಾ|| ಬಾಬಾಸಾಹೇಬ್ ಅಂಬೇಡ್ಕರ್ ಅವರ ವಿಶೇಷ ಆಸಕ್ತಿಯಿಂದ ಅನುಸೂಚಿತ ಜಾತಿ ಮತ್ತು ಪಂಗಡದ ಜನರಿಗೆ ಮೀಸಲಾತಿ, ಸಾಮಾಜಿಕ ನ್ಯಾಯ ಹಾಗೂ ಸಂವಿಧಾನದ ಜಾತ್ಯತೀತ ನೀತಿ ಮುಂತಾದ ಕೆಲವು ಪ್ರಗತಿಪರ ವಿಚಾರಗಳು ಸಂವಿಧಾನದಲ್ಲಿ ಅಡಕಗೊಂಡವು. ಸಂವಿಧಾನದ ಬೇರೆಲ್ಲಾ ವಿಧಿಗಳು ಹಿಂದೀ ಸಾಮ್ರಾಜ್ಯಶಾಹಿಗಳ, ದಿಲ್ಲೀ ದರ್ಬಾರ್‌ಶಾಹಿಗಳ, ವೈದಿಕಶಾಹಿಗಳ ಮತ್ತು ಪುರೋಹಿತಶಾಹಿಗಳ ಹಿತಾಸಕ್ತಿಗಳಿಗನುಗುಣವಾಗಿ ರಚನೆಯಾದವು. ೧೯೪೭ರಿಂದ ಇಲ್ಲಿಯವರೆಗೆ ನಡೆದುಬಂದ ಘಟನಾವಳಿಗಳನ್ನು ಕೂಲಂಕಷವಾಗಿ ಪರಿಶೀಲಿಸಿ ನೋಡಿದಾಗ ಭಾರತದಿಂದ ಬ್ರಿಟಿಷರು ಹೋದನಂತರ ಇಲ್ಲಿ ಸ್ಥಾಪನೆಯಾಗಿರುವುದು ‘ಹಿಂದೀ ಸಾಮ್ರಾಜ್ಯ’ವೇ ಹೊರತು ಎಲ್ಲ ಭಾರತೀಯರ ‘ಗಣರಾಜ್ಯ’ವಲ್ಲವೆಂದು ಖಂಡಿತವಾಗಿ ಹೇಳಬಹುದು. ಇಂಗ್ಲಿಷರು ಆಳುವ ಹಕ್ಕುಗಳನ್ನೆಲ್ಲಾ ಉತ್ತರಭಾರತದ ಹಿಂದೀಯರ ಕೈಗೇ ಒಪ್ಪಿಸಿ ಹೋದಂತೆ ಕಾಣುತ್ತದೆ.

**ಕನ್ನಡಿಗರ ಇಂದಿನ ರಾಜಕೀಯ ಪರಿಸ್ಥಿತಿ**

ಇಂದಿನ ಕೇಂದ್ರೀಕೃತ ರಾಜಕೀಯ ವ್ಯವಸ್ಥೆಯಿಂದ ಉದ್ಭವವಾಗಿರುವ ರೋಗಗಳು ಮತ್ತು ಅವುಗಳ ಚಿಹ್ನೆಗಳು ಪದೇ ಪದೇ ಭಾರತದ ಬೇರೆಬೇರೆ ಭಾಗ ಗಳಲ್ಲಿ ಭಯೋತ್ಪಾದನೆ, ಅಸಹನೆ, ನಿರುದ್ಯೋಗ, ಅಸಮಾನ ಅಭಿವೃದ್ಧಿಯ ರೂಪಗಳಲ್ಲಿ ಕಾಣಿಸಿಕೊಳ್ಳುತ್ತಿವೆ. ದೇಶಗಳ ಸ್ವಾಯತ್ತತೆ, ಸ್ವಯಂನಿರ್ಣಯ, ಸ್ವಯಂ ಅಧಿಕಾರಗಳ ಚಳುವಳಿಗಳ ಮೂಲಕ ವ್ಯಕ್ತವಾಗುತ್ತಿವೆ.

ಹಿಂದೀ ಸಾಮ್ರಾಜ್ಯಶಾಹಿ, ದಿಲ್ಲೀ ದರ್ಬಾರ್‌ಶಾಹಿ ದಬ್ಬಾಳಿಕೆಯು ವಿಶೇಷವಾಗಿ ಕನ್ನಡ ಭಾಷೆಗೆ, ಕನ್ನಡ ಜನರಿಗೆ ಹಾಗೂ ಕರ್ನಾಟಕಕ್ಕೆ ಗಂಡಾಂತರಕಾರಿಯಾಗಿದೆ. ಏಕೆಂದರೆ ಕನ್ನಡಿಗರು ವಿಶೇಷ ರಾಜಕೀಯ ಜಾಗೃತಿಯಿಲ್ಲದ, ಮೃದುಸ್ವಭಾವದ ಜನರು. ತಾವು ಒಂದು ‘ಜನಪದ’ ಹಾಗೂ ತಮಗೂ ಒಂದು ‘ರಾಷ್ಟ್ರೀಯತೆ’ ಇದೆಯೆಂಬ ಕಲ್ಪನೆಯೂ ಇಲ್ಲದವರು. ಭಾರತ ಸಂವಿಧಾನದಲ್ಲಿ ಏನೇ ಇದ್ದರೂ ತಮಿಳರು, ಮಲಯಾಳಿಗಳು, ತೆಲುಗರು ಹಾಗೂ ಇತರ ಹಿಂದೀಯೇತರ ಜನರು ತಮ್ಮ ಸಾಮರ್ಥ್ಯದಿಂದ, ಗಟ್ಟಿತನದಿಂದ ತಮ್ಮ ಭಾಷೆ, ದೇಶದ ಹಿತಾಸಕ್ತಿಗಳನ್ನು ಉಳಿಸಿ ಕೊಳ್ಳಬಲ್ಲರಷ್ಟೇ ಅಲ್ಲ, ಬೇರೆ ದೇಶಗಳಲ್ಲಿ ತಮ್ಮ ಭಾಷೆಯ, ಜನರ, ದೇಶದ ಪ್ರಭಾವಗಳನ್ನು ಬೆಳೆಸಿಕೊಂಡು ವಲಸೆ ಹೋಗಿ ತಮ್ಮದೇ ಅಸ್ತಿತ್ವವನ್ನು ಸ್ಥಾಪಿಸಬಲ್ಲರು. ಯಾವುದೇ ದೇಶ ಆ ದೇಶದ ಜನರಿಗೆ ಸೇರಬೇಕಾದರೆ ಕಾನೂನಾತ್ಮಕವಾಗಿ ಆ ದೇಶದ ಜನರಲ್ಲಿ ವಶದಲ್ಲಿರುವುದು ಬಹಳ ಮಹತ್ವದ ಸಂಗತಿ. ಜನತಂತ್ರದಲ್ಲಿ ಆಯಾ ದೇಶದ ಜನರು ಆಯಾ ದೇಶದಲ್ಲಿ ಬಹುಮತ ಹೊಂದಿರುವುದು ಅವಶ್ಯಕ. ಇಲ್ಲವಾದಲ್ಲಿ ಯಾವುದೇ ದೇಶದ ಜನರು ತಮ್ಮ ದೇಶವನ್ನೇ ಕಳೆದುಕೊಳ್ಳುವ ಸಂಭವವಿರುತ್ತದೆ.

ಕರ್ನಾಟಕದ ಇತಿಹಾಸವನ್ನು ಪರಾಮರ್ಶಿಸಿ ನೋಡಿದಾಗ ಆರ್ಥಿಕವಾಗಿ, ರಾಜಕೀಯವಾಗಿ ಕ್ರಮೇಣ ಭಾಷಿಕವಾಗಿ, ಸಾಂಸ್ಕೃತಿಕವಾಗಿ, ನಾವು ದುರ್ಬಲರಾಗುತ್ತ ಹೋಗುತ್ತಿದ್ದೇವೆ. ಒಂಭತ್ತನೇ ಶತಮಾನದಲ್ಲಿ ಕಾವೇರಿಯಿಂದ ಗೋದಾವರಿಯವರೆಗೆ ಇದ್ದ ಕರ್ನಾಟಕ ಇಂದು ಬೀದರಿನಿಂದ ಮೈಸೂರಿನವರೆಗೆ ಸೀಮಿತಗೊಂಡಿದೆ. ಭಾರತದ ಇಂದಿನ ಸಂವಿಧಾನದ ಬದಲಾವಣೆಗೆ ಉಗ್ರ ಹೋರಾಟ ಮಾಡದೇ ಹೋದರೆ – ಇನ್ನು ಹಲವೇ ವರ್ಷಗಳಲ್ಲಿ ನಾವು ನಮ್ಮ ಭಾಷೆ, ನಮ್ಮ ದೇಶ ಎರಡನ್ನೂ ಕಳೆದುಕೊಳ್ಳುವುದರಲ್ಲಿ ಯಾವ ಸಂದೇಹವೂ ಇಲ್ಲ. ಈಗಾಗಲೇ ಬೆಂಗಳೂರು ಹಾಗೂ ಕರ್ನಾಟಕದ ಇತರ ಪ್ರಮುಖ ನಗರಗಳು ಕರ್ನಾಟಕೇತರರಿಂದ ಬೇರೆ ಬೇರೆ ರೀತಿಯಲ್ಲಿ ಆಕ್ರಮಿತವಾಗುತ್ತಿವೆ. ಒಂದು ದೇಶ ಕೇವಲ ಮಿಲಿಟರಿ, ಸೈನಿಕರಿಂದ ಆಕ್ರಮಣಗೊಳ್ಳುವುದಿಲ್ಲ, ಸಾಂಸ್ಕೃತಿಕ ವಿಧಾನಗಳಿಂದಲೂ ಆಕ್ರಮಣಗೊಳ್ಳುತ್ತದೆ. ನಾವು ಕರ್ನಾಟಕವು ನಮ್ಮದಾಗಿ ಉಳಿಯಬೇಕಾದರೆ ಭಾಷಿಕವಾಗಿ, ಸಾಂಸ್ಕೃತಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ ಹೆಚ್ಚು ಜಾಗೃತರಾಗಿ ನಮ್ಮ ಹಿತಾಸಕ್ತಿಗಳನ್ನು ಕಾಪಾಡುವಂಥ ಸಂವಿಧಾನದ ಬದಲಾವಣೆಗಳಿಗೆ ಒತ್ತಾಯಿಸಬೇಕು. ಇಲ್ಲವಾದರೆ ಕರ್ನಾಟಕ ಸ್ವಾತಂತ್ರ್ಯ ಸಂಗ್ರಾಮವು ಅನಿವಾರ್ಯವಾಗಬಹುದು.

**ಡಾ|| ದೊಡ್ಡಮೇಟ ಅಶೋಕ**
“ಚಂದ್ರಲೋಕ”, ನಂ. ೪(೯೮೪) ಚೆನ್ನಣ್ಣ ಲೇಔಟ್, ಕಾವಲ್‌ಭೈರಸಂದ್ರ, ಆರ್. ಟಿ. ನಗರ ಪೋಸ್ಟ್
ಬೆಂಗಳೂರು - ೫೬೦ ೦೩೨



## ಅಪರೂಪ ಜನ

ಇದ್ದಾರೆ ಅಲ್ಲೊಬ್ಬರು ಇಲ್ಲೊಬ್ಬರು ಪ್ರಾಮಾಣಿಕರು
ಅಂಥವರಿಗೆ ಕರ್ತವ್ಯವೇ ದೇವರು ಕಾಯಕ ಉಸಿರು;
ಪರೋಪಕಾರ ಅವರ ಬಾಳಲ್ಲಿ ಹಸಿ ಹಸಿರು
ಬಿಟ್ಟುಹೋಗುತ್ತಾರೆ ಅಂಥವರು ಒಳ್ಳೆಯ ಹೆಸರು.

ನಿಷ್ಠೆ ಎಂಬುದು ಅವರ ಬಾಳಿನ ಹೃದಯ
ಲೋಪದೋಷವಿರದೆ ಮಾಡುತ್ತಾರೆ ಕಾರ್ಯ;
ತೋರುತ್ತಾರೆ ಎಲ್ಲರಲ್ಲೂ ಉದಾರ ಸೌಜನ್ಯ
ನಡೆನುಡಿ ಅಪರೂಪ ತೋರುತ್ತಾರೆ ಮಾದರಿಯ !

ಯಾವತ್ತೂ ಅಂಥವರ ನಿರ್ಧಾರ ನೇರ
ಪಾರದರ್ಶಕ ಅವರ ಆಡಳಿತದ ವಿವರ ;
ನಿಷ್ಪಕ್ಷಪಾತಕ್ಕೆ ಅವರೊಂದು ನಿದರ್ಶನ
ಮಾಡಬೇಕು ನಾವೆಂದು ಅವರ ಬಾಳ ಗುಣಗಾನ !

ಪ್ರೊ|| ದೊಡ್ಡರಂಗೇಗೌಡ
“ಶ್ರೀ ಸನ್ನಿಧಿ”, ೧೪೨೦, ಕತ್ತರಿಗುಪ್ಪೆ ೩ನೇ ಮುಖ್ಯರಸ್ತೆ,
ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

# ಪ್ರತ್ಯೇಕ ರಾಜ್ಯದ ಬೇಡಿಕೆ : ರೋಗಗ್ರಸ್ತ ಸಮಾಜದ ಲಕ್ಷಣವೇ ?

■ ಡಾ|| ಬಿ. ಕೃಷ್ಣಮೂರ್ತಿ

**ಈ**ಗಾಗಲೇ ಸ್ಥಾಪಿಸಲ್ಪಟ್ಟಿರುವ ರಾಜ್ಯಗಳಿಂದ ಹೊರಬಂದು ಪ್ರತ್ಯೇಕ ರಾಜ್ಯಗಳನ್ನು ಸ್ಥಾಪಿಸಬೇಕೆಂಬ ಬೇಡಿಕೆಯನ್ನು ಸಾಮಾನ್ಯವಾಗಿ ಆಯಾ ರಾಜ್ಯಗಳ ಹಿಂದುಳಿದ ಪ್ರದೇಶಗಳು ಮುಂದಿಡುತ್ತವೆ. ರಾಜ್ಯದ ಮುಂದುವರಿದ, ಹೆಚ್ಚಿನ ರಾಜಕೀಯ ಅಧಿಕಾರವನ್ನು ಪಡೆದ, ಆರ್ಥಿಕ ಸಂಪನ್ಮೂಲಗಳನ್ನು ರೂಪಿಸಿಕೊಂಡಿರುವ ಪ್ರದೇಶಗಳು ಪ್ರತ್ಯೇಕ ರಾಜ್ಯದ ಬೇಡಿಕೆಯನ್ನು ಮುಂದಿಟ್ಟುಕೊಂಡು ಹೋರಾಡಿರುವ ನಿದರ್ಶನಗಳಿಲ್ಲ.

ಭಾರತದ ಸಂದರ್ಭದಲ್ಲಿ ಭಾಷೆಯ ಆಧಾರದ ಮೇಲೆ ಪ್ರಾಂತಗಳು ೧೯೫೬ರಲ್ಲಿ ರೂಪುಗೊಂಡಾಗ ಹಲವು ಹಿಂದುಳಿದ ಪ್ರದೇಶಗಳು ಮುಂದುವರೆದ ಪ್ರದೇಶಗಳೊಂದಿಗೆ ಕಡ್ಡಾಯವಾಗಿ ಸೇರಿಸಲ್ಪಟ್ಟು ರಾಜ್ಯಗಳು ರಚನೆಯಾದದ್ದು ಇದೀಗ ಚರಿತ್ರೆ. ಆಗ ಸ್ವಾತಂತ್ರ್ಯ ಬಂದು ಕೆಲವೇ ವರ್ಷಗಳಾಗಿದ್ದರಿಂದ, ಸ್ವಾತಂತ್ರ್ಯ ಬಂದದ್ದೇ ಜನರ ಪ್ರಜ್ಞೆಯ ಘನಭಾಗವಾಗಿದ್ದರಿಂದ, ಹಿಂದುಳಿದಿರುವಿಕೆ, ಮುಂದುವರಿಕೆಯ ಪ್ರಕ್ರಿಯೆಗಳು ಬಹುಶಃ ಜನರ ಪ್ರಜ್ಞೆಯ ಅಂಚಿನಲ್ಲಿ ಮಿಂಚುತ್ತಿರಬಹುದು. ಆದರೆ ಅವು ಪ್ರಜ್ಞೆಯ ಮುಖ್ಯಾಂಶಗಳಾಗಿರಲಿಲ್ಲ. ಆದರೂ ಈ ಪ್ರಾಂತಗಳು ರಚನೆಯಾದಾಗ, ಹಿಂದುಳಿದ ಪ್ರದೇಶಗಳು ಬಹಳ ಮಟ್ಟಿಗೆ ತಾವು ಮುಂದುವರೆದ ಪ್ರದೇಶಗಳ ಸರಿಸಮಾನ ಬೆಳೆಯುತ್ತೇವೆನ್ನುವ ನಂಬಿಕೆಯನ್ನು ಅಪ್ರಜ್ಞಾಪೂರ್ವಕವಾಗಿ, ಬಹಳ ಮಸುಕಾಗಿ ಗುರುತಿಸಿರಬಹುದು.

ಆದರೆ ಇತ್ತೀಚೆಗೆ ಕೇಳಿಬರುತ್ತಿರುವ ಪ್ರತ್ಯೇಕ ರಾಜ್ಯದ ಬೇಡಿಕೆ ಭಾರತದ ಚರಿತ್ರೆಯಲ್ಲಿ ಸ್ವಾತಂತ್ರ್ಯಾನಂತರ ಮೂಡಿರುವ ಹೊಸಪ್ರಜ್ಞೆಯ ಸೂಚಕವಾಗಿ ಕಂಡುಬರುತ್ತದೆ. ಒಂದು ರಾಜ್ಯದಲ್ಲಿ, ಉದಾಹರಣೆಗೆ, ಕರ್ನಾಟಕದಲ್ಲಿ ಹಿಂದುಳಿದ ಭಾಗವಾದ ಹೈದರಾಬಾದ್-ಕರ್ನಾಟಕ ತಾನು ಪ್ರಜ್ಞಾಪೂರ್ವಕ ರಾಜಕೀಯ, ಆರ್ಥಿಕ ಅಲಕ್ಷ್ಯಕ್ಕೆ, ಶೋಷಣೆಗೆ ಒಳಗಾಗಿದ್ದೇನೆಂಬ ಅರಿವನ್ನು ಸ್ವಲ್ಪಮಟ್ಟಿಗೆ ಪಡೆದು ತನಗೆ ಒಂದು ಪ್ರತ್ಯೇಕ ರಾಜ್ಯ ರೂಪಿಸಿದಲ್ಲಿ ಮಾತ್ರ ಈ ಶೋಷಣೆಯಿಂದ ಮುಕ್ತಿ ಎನ್ನುವ ವಾದವನ್ನು ಮುಂದಿಟ್ಟಿದೆ.

ಈಗಿನ ರಾಜ್ಯವ್ಯವಸ್ಥೆಯಲ್ಲಿ ಭಾಷಾವಾರು ಪ್ರಾಂತಗಳು ರಚನೆಯಾದಾಗಿನಿಂದ ರಾಜ್ಯದೊಳಗಿನ ಶೋಷಣಾ-ಶೋಷಿತ ಸಂಬಂಧಗಳು ಹಾಗೆಯೇ ಮುಂದುವರಿದಿವೆ ಎನ್ನುವ ವಾದವನ್ನು ಮಂಡಿಸುತ್ತಾ, ಪ್ರತ್ಯೇಕತೆ ಪಡೆದಲ್ಲಿ ತಾನು ಬಯಸುವ ಪ್ರಗತಿಯನ್ನು ಸಾಧಿಸಬಹುದೆಂಬ ವಾದವನ್ನು ಜನರ ಮುಂದಿಟ್ಟಿದೆ. ಇಂತಹ ಪ್ರಸ್ತಾಪದ ಹಿನ್ನೆಲೆಯಲ್ಲಿ ಪ್ರತ್ಯೇಕ ರಾಜ್ಯದ ಅನಿವಾರ್ಯತೆಯನ್ನು ರೂಪಿಸಲು ಯತ್ನಿಸುತ್ತಿದೆ.

ಕರ್ನಾಟಕದಲ್ಲಿರುವ ಪ್ರಾದೇಶಿಕ ಪ್ರಗತಿ ಅಸಮತೋಲನದ ವಿವಿಧ ಆಯಾಮಗಳನ್ನು ವೈಜ್ಞಾನಿಕ ಚೌಕಟ್ಟಿನಲ್ಲಿ ವೀಕ್ಷಿಸಿ ನಿವಾರಿಸಲೋಸುಗವೇ ಕರ್ನಾಟಕ ಸರಕಾರ ಡಾ|| ನಂಜುಂಡಪ್ಪ ಸಮಿತಿಯನ್ನು ರಚಿಸಿ ಹಿಂದುಳಿದ ಪ್ರದೇಶಗಳ ಸಂಪನ್ಮೂಲಗಳನ್ನು ಜನರ ಮುಂದಿಟ್ಟಿದೆ : ಅಸಮತೋಲನ ನಿವಾರಿಸುವ ಕಾರ್ಯಕ್ರಮದ ಪಟ್ಟಿ ಸಿದ್ಧವಾಗಿದೆ. ಆದರೆ ಸಾಕಷ್ಟು ಕಾರ್ಯಗತವಾಗಿಲ್ಲವೆನ್ನುವುದು ಎಲ್ಲರಿಗೂ ತಿಳಿದ ವಿಷಯ. ಈ ಶಿಫಾರಸುಗಳು ಕಾರ್ಯಗತವಾಗುವ ಸಾಧ್ಯತೆಗಳ ವಿಶ್ಲೇಷಣೆಯನ್ನು ನಾವು ಇಂದು ಕೇವಲ ರಾಜ್ಯದ, ದೇಶದ ಆರ್ಥಿಕ ಚೌಕಟ್ಟಿಗೆ ಸೀಮಿತಗೊಳಿಸದೆ, ಜಾಗತಿಕ-ನವ ಸಾಮ್ರಾಜ್ಯಶಾಹಿ ಆರ್ಥಿಕ-ರಾಜಕೀಯ ಧೋರಣೆಗಳ ಹಿನ್ನೆಲೆಯಲ್ಲಿ ಕೈಗೊಳ್ಳಬೇಕು.

> **ಇತ್ತೀಚೆಗೆ ಕೇಳಿಬರುತ್ತಿರುವ ಪ್ರತ್ಯೇಕ ರಾಜ್ಯದ ಬೇಡಿಕೆ ಭಾರತದ ಚರಿತ್ರೆಯಲ್ಲಿ ಸ್ವಾತಂತ್ರ್ಯಾನಂತರ ಮೂಡಿರುವ ಹೊಸ ಪ್ರಜ್ಞೆಯ ಸೂಚಕವಾಗಿ ಕಂಡುಬರುತ್ತದೆ. ಪ್ರತ್ಯೇಕ ರಾಜ್ಯದ ಬೇಡಿಕೆ ಒಂದು ಪ್ರದೇಶದ ಪ್ರಗತಿಗಾಗಿ ಮುಂದಿಟ್ಟರೂ ಆ ಗುರಿಯನ್ನು ಮುಟ್ಟಲು ಸಾಧ್ಯವಿಲ್ಲ...**

ಅಸಮತೋಲನವನ್ನು ಹೋಗಲಾಡಿಸಿ ರಾಜ್ಯದ ಎಲ್ಲಾ ಭಾಗಗಳೂ ಪ್ರಗತಿಯತ್ತ ಸಾಗುವ ಸೂಚನೆಗಳು ಕಂಡುಬರುವುದಿಲ್ಲ; ಪ್ರಗತಿಯತ್ತ ಸಾಗುವ ಸಾಧ್ಯತೆಗಳು ನವಸಾಮ್ರಾಜ್ಯಶಾಹಿ ಜಾಗತೀಕರಣದ ಹಿನ್ನೆಲೆಯಲ್ಲಿ ಕಡಿಮೆ. ಆದುದರಿಂದ ಚರಿತ್ರೆಯ ಈ ಘಟ್ಟದ ಆರ್ಥಿಕ ವ್ಯವಸ್ಥೆಯನ್ನು ಗಂಭೀರವಾಗಿ ಪರಿಗಣಿಸಿದರೆ ಮತ್ತು ಅದರಲ್ಲಿ ಸೂಕ್ಷ್ಮವಾಗಿ, ಆದರೆ ಬಹಳ ವ್ಯವಸ್ಥಿತವಾಗಿ ಸ್ಥಾಪಿಸಲ್ಪಟ್ಟಿರುವ ಅಂತರ್‍ರಾಷ್ಟ್ರೀಯ ಸಂಬಂಧಗಳನ್ನು ಗಣನೆಗೆ ತೆಗೆದುಕೊಂಡರೆ ಹಿಂದುಳಿದ ಪ್ರದೇಶಗಳು ಹೊರಬಂದು ಪ್ರತ್ಯೇಕ ರಾಜ್ಯವನ್ನು ರೂಪಿಸಿಕೊಂಡಾಗ ಪ್ರಗತಿಯಿಂದ ಇನ್ನೂ ದೂರ ಸರಿಯುವ ಸಂಭವವೇ ಹೆಚ್ಚು.

ಏಕೆಂದರೆ, ಸಮಕಾಲೀನ ಸಂದರ್ಭದಲ್ಲಿ ಪ್ರಗತಿಯ ಸಮಸ್ಯೆಯನ್ನು ವಿಶ್ಲೇಷಣೆಗೆ ಒಡ್ಡಿದರೆ : ಜಾಗತೀಕರಣದ ಹಿನ್ನೆಲೆಯಲ್ಲಿ ದೇಶ-ದೇಶಗಳ ನಡುವಿನ, ದೇಶದೊಳಗಿನ ರಾಜ್ಯದ ಪ್ರದೇಶದೊಳಗಿನ ಶೋಷಣೆ-ಶೋಷಿತ ಸಂಬಂಧಗಳು ಇನ್ನೂ ಬಲಗೊಳ್ಳುತ್ತಾ ಹೋಗುತ್ತವೆ : ಮುಂದುವರೆದ ದೇಶಗಳು, ರಾಜ್ಯಪ್ರದೇಶಗಳು ಹಿಂದುಳಿದ ದೇಶ ಪ್ರದೇಶಗಳನ್ನು ತಮ್ಮ ಉಳಿವಿಗಾಗಿ ಶೋಷಿಸುತ್ತಲೇ ನಡೆಯುತ್ತವೆ. ಅವು ತಮ್ಮ ಪ್ರಗತಿಯನ್ನು ಉಳಿಸಿಕೊಳ್ಳಬೇಕಾದರೆ ಶೋಷಣೆ ಮಾಡಲೇಬೇಕು. ಶೋಷಿತ ದೇಶ ಪ್ರದೇಶಗಳು ಶೋಷಣೆಗೆ ಒಳಗಾಗಲೇಬೇಕು ....Shock-absorbers ಆಗಿ ಕೆಲಸಮಾಡಬೇಕು : ಮುಂದುವರೆದ ದೇಶಗಳಲ್ಲಿ ಸಕ್ರಿಯವಾಗಿರುವ ವಿರೋಧಾಭಾಸಗಳಿಂದ ಉಂಟಾಗುವ ಆರ್ಥಿಕ ಆಘಾತವನ್ನು ಹಿಂದುಳಿದ ದೇಶ ಪ್ರದೇಶಗಳು ನುಂಗಬೇಕು. ಇದು ಸಾಮ್ರಾಜ್ಯಶಾಹಿ ಆರ್ಥಿಕ ವ್ಯವಸ್ಥೆಯ ಮುಖ್ಯ ಲಕ್ಷಣ.

ಸಮಕಾಲೀನ ಚಾರಿತ್ರಿಕ ಸಂದರ್ಭದಲ್ಲಿ ಪ್ರಗತಿಯತ್ತ ಸಾಗುವುದೆಂದರೆ ದೇಶ ಪ್ರದೇಶಗಳ ಆರ್ಥಿಕ-ಸಾಮಾಜಿಕ-ರಾಜಕೀಯ ಕ್ಷೇತ್ರಗಳಲ್ಲಿ ಜಾಗತಿಕ ವ್ಯವಸ್ಥೆಯಲ್ಲಿರುವ ನವಸಾಮ್ರಾಜ್ಯಶಾಹಿ ವಿರೋಧಾಭಾಸಗಳಿಂದುಂಟಾಗುವ ಎಲ್ಲಾ ಪರಿಣಾಮಗಳನ್ನೂ ವಿಶ್ಲೇಷಿಸಿ ಕಾರ್ಯಸೂಚಿಯನ್ನು ರೂಪಿಸಬೇಕು.

ಆದುದರಿಂದ ನವಸಾಮ್ರಾಜ್ಯಶಾಹಿ ಆರ್ಥಿಕ-ರಾಜಕೀಯ ಕಪಿಮುಷ್ಟಿಯ ಚೌಕಟ್ಟಿಗೆ ಈಗಾಗಲೇ ಸಾಕಷ್ಟು ತನ್ನ ಆರ್ಥಿಕ ವ್ಯವಸ್ಥೆಯನ್ನು ಬಲಿಕೊಟ್ಟಿರುವ ಭಾರತದ ಸಂದರ್ಭದಲ್ಲಿ ಶೋಷಣೆಯಿಂದ ಹೊರಬಂದು ಪ್ರಗತಿಯನ್ನು ಸಾಧಿಸಲು ಪ್ರತ್ಯೇಕ ರಾಜ್ಯ ಕಟ್ಟುವ ಬೇಡಿಕೆ ಚಾರಿತ್ರಿಕ ಪ್ರಜ್ಞೆಯ ಶೂನ್ಯತೆಯ ಸೂಚಕ. ಬಹಳ ಮುಖ್ಯವಾಗಿ ಬೇಕಾಗಿರುವುದು : ಶೋಷಣೆಯ ಸಾರ್ವತ್ರಿಕ ವ್ಯಾಪ್ತಿಯ ಪ್ರಜ್ಞೆ ; ಶೋಷಣೆ ನಮ್ಮ ಇಂದಿನ ಸಾಮಾಜಿಕ-ರಾಜಕೀಯ-ಆರ್ಥಿಕ ವ್ಯವಸ್ಥೆಯ ಒಂದು ಅಂತರ್ಗತ, ಅನಿವಾರ್ಯ ಅಂಶ. ಈ ಹಿನ್ನೆಲೆಯಲ್ಲಿ ನಮ್ಮನ್ನು ಕಾಡುತ್ತಿರುವ ಸಮಸ್ಯೆಗಳನ್ನು ವಿಶ್ಲೇಷಿಸಿ ಪರಿಹಾರಗಳನ್ನು ಕಂಡುಕೊಳ್ಳಬೇಕಾಗುತ್ತದೆ.

ಆದರೆ ಚಾರಿತ್ರಿಕ ಪ್ರಜ್ಞೆ ಬಹಳಮಟ್ಟಿಗೆ ಆಳುವ ವರ್ಗಗಳ ಹಿತಾಸಕ್ತಿಗಳ ಹಿನ್ನೆಲೆಯಲ್ಲಿ ರೂಪಿಸಲ್ಪಟ್ಟು ಶೋಷಣೆಯ ಪರವಾಗಿ ಕೆಲಸಮಾಡುವುದರಿಂದ, ಈ ಶೋಷಣಾ-ರೋಗಗ್ರಸ್ತ ಸಮಾಜಕ್ಕೆ ಹೊಂದಿಕೊಂಡು ಹೋಗುವ ಮನೋಧೋರಣೆಯನ್ನು ಜನರಲ್ಲಿ ಮೂಡಿಸಿದೆ. ಆದುದರಿಂದ ಸಮಸ್ಯೆಗಳ ವಿಶ್ಲೇಷಣೆ ದಾರಿತಪ್ಪಿ ಇರುವ ರೋಗಗ್ರಸ್ತ ಸಮಾಜವನ್ನು ಮುಂದುವರೆಸುವ ಕೆಲಸವನ್ನು ಶೋಷಿತನೇ ಮಾಡುತ್ತಾನೆ. ಪ್ರತ್ಯೇಕ ರಾಜ್ಯದ ಬೇಡಿಕೆಯೂ ಈ ಸಾಲಿಗೆ ಸೇರಿದ್ದು.

ಮುಖ್ಯವಾಗಿ ಗಮನಿಸಬೇಕಾಗಿರುವುದು : ಬಂಡವಾಳಶಾಹಿ ನವಸಾಮ್ರಾಜ್ಯಶಾಹಿ ವ್ಯವಸ್ಥೆ ಇಂದು ಜಾಗತೀಕರಣದ ರೂಪದಲ್ಲಿ ಶೋಷಣೆಯನ್ನು ಬಲಗೊಳಿಸುತ್ತಿರುವಾಗ, ಇಡೀ ವ್ಯವಸ್ಥೆಯನ್ನು ಮೂಲಭೂತವಾಗಿ ಬದಲಾಯಿಸುವ ಸವಾಲನ್ನು ಎದುರಿಸಬೇಕಾಗುತ್ತದೆ – ಪ್ರಗತಿಯನ್ನು ಸಾಧಿಸಲು. ಈ ದೃಷ್ಟಿಯಿಂದ ಸಮಸ್ಯೆಗಳನ್ನು ವಿಶ್ಲೇಷಿಸುತ್ತಾ ಪರಿಹಾರಗಳನ್ನು ಕಂಡುಕೊಳ್ಳಬೇಕಾಗುತ್ತದೆ.

ಆದುದರಿಂದ ಸಮಾಜದಲ್ಲಿ ಮೂಲಭೂತ

೧೫ನೇ ಪುಟಕ್ಕೆ...



# ಕರ್ತವ್ಯನಿಷ್ಠ ಮಗಳು

ಮೂಲ : ಸಾದಾತ್ ಹಸನ್ ಮಾಂಟೊ

ಅನು : ಡಾ॥ ಮಹಾಬಲೇಶ್ವರರಾವ್

ದೇಶ ವಿಭಜನೆಯಾಯಿತು. ನೂರಾರು ಸಾವಿರಾರು ಹಿಂದೂ ಮುಸಲ್ಮಾನರು ಪಾಕಿಸ್ತಾನದಿಂದ ಭಾರತಕ್ಕೆ ಮತ್ತು ಭಾರತದಿಂದ ಪಾಕಿಸ್ತಾನಕ್ಕೆ ವಲಸೆ ಹೋದರು. ಅವರಿಗೆ ತಾತ್ಕಾಲಿಕ ಆಸರೆ ಒದಗಿಸಲು ನಿರಾಶ್ರಿತರ ಶಿಬಿರಗಳನ್ನು ಸ್ಥಾಪಿಸಿದರು. ನಿರಾಶ್ರಿತರ ಶಿಬಿರಗಳಲ್ಲಿ ಜನವೋ ಜನ. ಹೊಸಬರಿಗೆ ಅಲ್ಲಿ ಅವಕಾಶವೇ ಇಲ್ಲ. ಹಾಗಿದ್ದರೂ ಪ್ರತಿನಿತ್ಯ ಹೊಸಹೊಸ ನಿರಾಶ್ರಿತರನ್ನು ಶಿಬಿರಗಳಿಗೆ ತಂದು ಬಿಡುತ್ತಿದ್ದರು. ಎಲ್ಲರಿಗೂ ಆಗುವಷ್ಟು ಆಹಾರ ಸರಬರಾಜಿಲ್ಲ. ಮೂಲಭೂತ ಸೌಕರ್ಯಗಳ ಮಾತೇ ಕೇಳಬೇಡಿ. ಸೋಂಕು ರೋಗಗಳು ಸಾಂಕ್ರಾಮಿಕ ಕಾಯಿಲೆಗಳು ಮಾಮೂಲಿಯಾದವು. ಆದರೆ ಅದನ್ನೆಲ್ಲ ಯಾರೂ ತಲೆಗೆ ಹಚ್ಚಿಕೊಳ್ಳಲಿಲ್ಲ. ಕಾಲವೇ ಹಾಗಿತ್ತು.

ಇಸ್ವಿ ೧೯೪೮ ಆರಂಭವಾಯಿತು. ಅಪಹರಣಗೊಂಡ ಹೆಂಗಸರು ಮಕ್ಕಳನ್ನು ಕಂಡು ಹುಡುಕಿ ಅವರ ಕುಟುಂಬಗಳಿಗೆ ಒಪ್ಪಿಸುವ ಸಲುವಾಗಿ ನೂರಾರು ಸ್ವಯಂ ಸೇವಕರು ನೇಮಕಗೊಂಡರು. ಅವರು ಪಾಕಿಸ್ತಾನದಿಂದ ಭಾರತಕ್ಕೆ ಹಾಗೂ ಭಾರತದಿಂದ ಪಾಕಿಸ್ತಾನಕ್ಕೆ ತಂಡತಂಡವಾಗಿ ಹೋಗಿ ಕೆಲಸ ಶುರು ಮಾಡಿದರು.

ಇಂಥದ್ದೇ ವ್ಯಕ್ತಿಗಳು ಮಾಡಿದ ದುಷ್ಕೃತ್ಯಗಳ ಶಮನಕ್ಕಾಗಿಯೇ ಎಂಬಂತೆ ಇವರು ಮಾಡುವ ಉತ್ಸಾಹ ಭರಿತ ಪ್ರಯತ್ನಗಳನ್ನು ಕಂಡಾಗ ನನಗೆ ವಿಸ್ಮಯವಾಗುತ್ತದೆ. ಹೆಂಗಸರ ಮಾನಭಂಗ ಆಗಲಿ, ಅವರ ಅಪಹರಣ ಆಗಲಿ ಎಂದು ಸುಮ್ಮನೆ ಕುಳಿತಿದ್ದ ಮಂದಿಯೇ ಈಗೇಕೆ ಅವರ ಪುನರ್ವಸತಿಗಾಗಿ ಒದ್ದಾಡುತ್ತಿದ್ದಾರೆ ?

ಇದೆಲ್ಲ ಗೊಂದಲಮಯ. ಆದರೆ ಈ ಸ್ವಯಂ ಸೇವಕರ ಶ್ರದ್ಧೆ ಶ್ಲಾಘನೀಯ. ಅದು ಸರಳ ಕೆಲಸವೇನಲ್ಲ; ನಾನಾ ಬಗೆಯ ಕಷ್ಟ ಪರಂಪರೆಗಳು. ಅಪಹೃತರನ್ನು ಹುಡುಕಿ ತೆಗೆಯುವುದು ಸುಲಭವಲ್ಲ. ತಮ್ಮನ್ನು ಪತ್ತೆಹಚ್ಚುವವರನ್ನು ದಾರಿ ತಪ್ಪಿಸಲು ಅವರು ಬೇರೆ ಬೇರೆ ಉಪಾಯಗಳನ್ನು ಕಂಡುಕೊಂಡಿದ್ದರು. ಅವರು ಸತತವಾಗಿ ಇಲ್ಲಿಂದ ಅಲ್ಲಿಗೆ, ಅಲ್ಲಿಂದ ಇನ್ನೊಂದು ನಗರಕ್ಕೆ ಸಂಚರಿಸುತ್ತಲೇ ಇದ್ದರು. ಪತ್ತೆಹಚ್ಚಲು ಬಂದವರು ಯಾರೋ ಕೊಟ್ಟ ಸುಳಿವನ್ನು ಅನುಸರಿಸಿ ಹೋದರೆ ಅಲ್ಲಿ ಏನೂ ಇರುವುದಿಲ್ಲ.

ಚಿತ್ರ ವಿಚಿತ್ರ ಕತೆಗಳು ಚಲಾವಣೆಯಲ್ಲಿದ್ದವು. ಶಹರನ್ ಪುರದಲ್ಲಿ ಇಬ್ಬರು ಅಪಹೃತ ಮುಸ್ಲಿಂ ಹುಡುಗಿಯರು ಪಾಕಿಸ್ತಾನದಲ್ಲಿರುವ ತಮ್ಮ ಹೆತ್ತವರ ಮನೆಗೆ ಹೋಗಲು ನಿರಾಕರಿಸಿದರೆಂದು ಒಬ್ಬ ಸಂಪರ್ಕಾಧಿಕಾರಿ ಹೇಳಿದ. ಜಲಂಧರ್ ಮುಸ್ಲಿಂ ಹುಡುಗಿಯನ್ನು ಅಪಹರಿಸಿದ ಕುಟುಂಬದವರು ಅವಳನ್ನು ಹೃದಯಸ್ಪರ್ಶಿಯಾಗಿ ಬೀಳ್ಕೊಂಡರು. ದೂರದ ನಾಡಿಗೆ ತೆರಳುತ್ತಿರುವ ತಮ್ಮ ಸೊಸೆಯೇ ಎಂಬಂತೆ ಅವಳಿಗೆ ವಿದಾಯ ಹೇಳಿದರು. ಕೆಲವು ಹುಡುಗಿಯರು ತಮ್ಮ ತಂದೆತಾಯಿಯರಿಗೆ ಮುಖ ತೋರಿಸಲಾಗದೆ ದಾರಿಯಲ್ಲೇ ಆತ್ಮಹತ್ಯೆ ಮಾಡಿಕೊಂಡರು. ಕೆಲವರು ತಮಗಾದ ಭಯಾನಕ ಅನುಭವಗಳಿಂದಾಗಿ ಮಾನಸಿಕ ಸಮತೋಲನ ಕಳೆದುಕೊಂಡರು. ಇತರರು ಕುಡಿತದ ಚಟಕ್ಕೆ ಬಲಿಯಾಗಿ ಅಸಭ್ಯ, ಅಶ್ಲೀಲ ಭಾಷೆ ಬಳಸಲಾರಂಭಿಸಿದರು.

ಈ ಅಪಹೃತ ಹುಡುಗಿಯರನ್ನು ನೆನೆಸಿಕೊಂಡಾಗಲೆಲ್ಲಾ ಅವರ ಉಬ್ಬುವ ಹೊಟ್ಟೆಗಳು ಕಣ್ಮುಂದೆ ಬಂದರೆ ಏನಾಗಬಹುದು ? ಹೊಟ್ಟೆಯಲ್ಲಿ ಏನಿರಬಹುದು ? ಈ ಫಲ ತನ್ನದು ಎನ್ನುವವರು ಯಾರು ? ಭಾರತವೇ ? ಪಾಕಿಸ್ತಾನವೇ ? ಒಂಭತ್ತು ತಿಂಗಳ ಕಾಲ ಆ ಮಕ್ಕಳನ್ನು ತಮ್ಮ ಹೊಟ್ಟೆಯಲ್ಲಿ ಹೊರುವ ಹೆಂಗಸರಿಗೆ ಹಣ ಕೊಡುವವರು ಯಾರು ? ಪಾಕಿಸ್ತಾನವೇ ? ಭಾರತವೇ ? ಅಥವಾ ದೇವರ ಲೆಕ್ಕ ಪುಸ್ತಕದಲ್ಲಿ ಇನ್ನೂ ಕೆಲವು ಖಾಲಿ ಹಾಳೆಗಳಿದ್ದರೆ ಇವೆಲ್ಲ ಅದರಲ್ಲಿ ದಾಖಲಾಗುತ್ತವೆಯೇ ?

ಅಪಹೃತ ಮಹಿಳೆಯರೆಂದು ಏಕೆ ಅವರನ್ನು ಹಾಗೆ ಬಣ್ಣಿಸುತ್ತಿದ್ದರು ? ಒಬ್ಬ ಹುಡುಗಿ ತನ್ನ ಪ್ರಿಯಕರನ ಜೊತೆ ಓಡಿ ಹೋಗುವುದಿದೆಯಲ್ಲ, ಅದು ಜಗತ್ತಿನ ಅತ್ಯಂತ ರಮ್ಯ ಕ್ರಿಯೆ. ಪೊಲೀಸರು ಮಾತ್ರ ಇದನ್ನು 'ಅಪಹರಣ' ಎಂದು ಕರೆಯುತ್ತಾರೆ. ಆದರೆ ಈ ಹೆಂಗಸರಲ್ಲಿ ತಮ್ಮ ಇಚ್ಛೆಗೆ ವಿರುದ್ಧವಾಗಿ ಅಪಹರಿಸಲ್ಪಟ್ಟು ಭ್ರಷ್ಟಗೊಂಡವರು ಇರಬಹುದು.

ಅವು ವಿಚಿತ್ರ ವಿವೇಚನಾರಹಿತ ದಿನಗಳು. ನನ್ನ ಮನಸ್ಸಿನ ಎಲ್ಲ ಪ್ರಧಾನ ಕಿಟಕಿ ಬಾಗಿಲುಗಳನ್ನು ಮುಚ್ಚಿಬಿಟ್ಟಿದ್ದೇನೆ. ''ಆಗೊಮ್ಮೆ ಈಗೊಮ್ಮೆ ಅಲ್ಪ ಸ್ವಲ್ಪ ತೆರೆಯುತ್ತಿದ್ದೇನೆ.'' ಈ ಬಗ್ಗೆ ನೇರವಾಗಿ ಆಲೋಚಿಸುವುದು ಕಷ್ಟಕರವಾಗಿದೆ.

ಕೆಲವೊಮ್ಮೆ ಇಡಿ ಕಾರ್ಯಾಚರಣೆ ಆಮದು-ರಫ್ತು ವ್ಯಾಪಾರದ ಹಾಗೆ ಎಂದು ನನಗೆ ಅನ್ನಿಸುತ್ತಿದೆ.

ಓರ್ವ ಸಂಪರ್ಕಾಧಿಕಾರಿ ಕೇಳಿದ, ''ಯಾಕೆ ನೀವು ಬಹಳ ಸಪ್ಪಗಿದ್ದೀರಿ ?''

ನಾನು ಉತ್ತರ ಕೊಡಲಿಲ್ಲ.

ಆತ ನನಗೆ ಒಂದು ಕತೆ ಹೇಳಿದ :

''ನಾವು ಹಳ್ಳಿಹಳ್ಳಿಗಳಲ್ಲಿ, ರಸ್ತೆಗಳಲ್ಲಿ, ನಗರ ನಗರಗಳಲ್ಲಿ ಅಪಹೃತ ಮಹಿಳೆಯರನ್ನು ಅರಸುತ್ತಿದ್ದೆವು. ಎಷ್ಟೋ ದಿನಗಳಾದ ಮೇಲೆ ನಮಗೆ ಯಶಸ್ಸು ಸಿಗುತ್ತಿತ್ತು. ನಾನು ಈಗ ಭಾರತ ಎಂದು ಕರೆಯುವ ಜಾಗಕ್ಕೆ ಹೋದಾಗಲೆಲ್ಲ ಒಬ್ಬ ಮುದುಕಿಯನ್ನು ಗಮನಿಸುತ್ತಿದ್ದೆ. ಮೊದಲಬಾರಿ ಅವಳನ್ನು ಜಬಲ್ಪುರದ ಆಸುಪಾಸಿನಲ್ಲಿ ಕಂಡೆ. ಅವಳಿಗೆ ಸುತ್ತಮುತ್ತಲಿನ ಲೋಕದ ಪರಿವೆಯೇ ಇರಲಿಲ್ಲ. ಕಣ್ಣುಗಳು ತಮ್ಮ ಕಾಂತಿಯನ್ನು ಕಳೆದುಕೊಂಡಿದ್ದವು. ಬಟ್ಟೆಗಳು ಚಿಂದಿಯಾಗಿದ್ದವು. ಕೂದಲು ಜಡೆಗಟ್ಟಿತ್ತು. ಆದರೆ ಯಾರನ್ನೋ ಹುಡುಕುತ್ತಿದ್ದಾಳೆ ಎಂದು ನನಗೆ ತೀವ್ರವಾಗಿ ಅನ್ನಿಸಿತು. ಪಾಟಿಯಾಲದಲ್ಲಿ ನಡೆದ ದೊಂಬಿಗಳಲ್ಲಿ ಅವಳಿಗಿದ್ದ ಒಬ್ಬಳೇ ಒಬ್ಬ ಮಗಳನ್ನು ಅಪಹರಿಸಿದ್ದರಂತೆ. ಹೀಗಾಗಿ ಅವಳಿಗೆ ಬುದ್ಧಿಭ್ರಮಣೆಯಾಗಿದೆ ಎಂದು ಒಬ್ಬ ಮಹಿಳಾ ಕಾರ್ಯಕರ್ತೆ ಹೇಳಿದಳು. ಹಲವು ತಿಂಗಳ ಕಾಲ ಆ ಹುಡುಗಿಗಾಗಿ ಹುಡುಕಾಡಿ ಬರಿಗೈಯಲ್ಲಿ ಬಂದರು. ಬಹುಶಃ ಅವಳ ಕೊಲೆಯಾಗಿರಬೇಕು. ಆದರೆ ಮುದುಕಿ ಈ ಮಾತನ್ನು ಒಪ್ಪಲು ತಯಾರಿರಲಿಲ್ಲ.

ಎರಡನೆಯ ಸಲ ನಾನೇ ಶಹರನ್‌ಪುರದಲ್ಲಿ ಅವಳಿಗೆ ತೀಕ್ಷ್ಣ

ಹೊಡೆಯುವುದರಲ್ಲಿದ್ದೆ. ಅವಳು ಬಸ್ ಸ್ಟಾಪ್‌ನಲ್ಲಿದ್ದಳು. ಮೊದಲ ಸಲ ನೋಡಿದ್ದಕ್ಕಿಂತಲೂ ಸ್ಥಿತಿ ತುಂಬ ಕೆಟ್ಟಿತ್ತು. ತುಟಿಗಳು ಒಡೆದಿದ್ದವು. ಕೂದಲು ಕಗ್ಗಂಟಾಗಿತ್ತು. ನಾನು ಅವಳನ್ನು ಮಾತನಾಡಿಸಿದೆ, ''ನೀನು ನಿನ್ನ ವ್ಯರ್ಥ ಹುಡುಕಾಟ ಬಿಟ್ಟುಬಿಡು''. ಅವಳು ನನ್ನ ಉಪದೇಶವನ್ನು ಕೇಳುವಂತೆ ಮಾಡಲು ಹೀಗೆ ಹೇಳಿದೆ : ''ಬಹುಶಃ ನಿನ್ನ ಮಗಳನ್ನು ಯಾರೋ ಕೊಲೆ ಮಾಡಿರಬೇಕು, ಇದು ನಿಜಕ್ಕೂ ಬರ್ಬರ ಕಾರ್ಯ.''

ಅವಳು ನನ್ನೆಡೆಗೆ ನೋಡಿ, ''ಕೊಲೆಯೇ! ಇಲ್ಲ! ಇಲ್ಲ! ನನ್ನ ಮಗಳನ್ನು ಯಾರೂ ಕೊಲ್ಲಲು ಸಾಧ್ಯವಿಲ್ಲ; ನನ್ನ ಮಗಳನ್ನು ಯಾರೂ ಕೊಲ್ಲಲು ಸಾಧ್ಯವಿಲ್ಲ'' ಹಾಗೆ ಹೇಳಿ ಹೊರಟುಹೋದಳು.

ನಾನು ಚಿಂತಿತನಾದೆ. ''ತನ್ನ ಮಗಳನ್ನು ಯಾರೂ ಕೊಲೆ ಮಾಡಲು ಸಾಧ್ಯವಿಲ್ಲ, ಯಾವುದೇ ಮೊನಚಾದ ಚೂರಿಯಿಂದ ಅವಳ ಕುತ್ತಿಗೆ ಕೊಯ್ಯಲು ಸಾಧ್ಯವಿಲ್ಲ'' ಎಂದು ಚೀರಿದಳು, ಈ ಹುಚ್ಚಿ ಅದ್ಹೇಗೆ ಅಷ್ಟೊಂದು ವಿಶ್ವಾಸದಿಂದ ಹೇಳುತ್ತಿದ್ದಾಳೆ ? ತನ್ನ ಮಗಳು ಅಮರ ಎಂದು ಭಾವಿಸಿದ್ದಾಳೋ ? ಅಥವಾ ಅವಳ ತಾಯ್ತನ ಮಗಳ ಸಾವನ್ನು ಒಪ್ಪಿಕೊಳ್ಳಲು ಸಿದ್ಧವಿಲ್ಲವೋ ?

ಮೂರನೆಯ ಬಾರಿ ನಾನು ಅವಳನ್ನು ಇನ್ನೊಂದು ನಗರದಲ್ಲಿ ನೋಡಿದೆ. ಆಗ ಅವಳಿಗೆ ಸಾಕಷ್ಟು ವಯಸ್ಸಾಗಿತ್ತು. ಸಾಕಷ್ಟು ಕುಂದಿದ್ದಳು. ಬಟ್ಟೆಯೆಲ್ಲಾ ಚಿಂದಿಚಿಂದಿಯಾಗಿತ್ತು. ಅವಳಿಗೆ ಒಂದು ಜೊತೆ ಬಟ್ಟೆ ಕೊಟ್ಟೆ. ಆದರೆ ಅದನ್ನು ತೆಗೆದುಕೊಳ್ಳಲಿಕ್ಕೆ ಕೇಳಲಿಲ್ಲ. ನಾನು ''ಮುದುಕಿ, ನಿನ್ನ ಮಗಳನ್ನು ಪಾಟಿಯಾಲದಲ್ಲಿ ಕೊಂದಿದ್ದಾರೆ ಎಂದು ಆಣೆ ಮಾಡಿ ಹೇಳುತ್ತೇನೆ'' ಎಂದೆ.

''ನೀನು ಸುಳ್ಳು ಹೇಳುತ್ತಿದ್ದಿ'' ಎಂದಳು. ಅವಳ ಧ್ವನಿಯಲ್ಲಿ ದೃಢ ವಿಶ್ವಾಸವಿತ್ತು. ಅವಳನ್ನು ಸಂತೈಸಲು ಮತ್ತೆ ಹೇಳಿದೆ, ''ನಾನು ಸತ್ಯ ಹೇಳಿದ್ದೇನೆ. ನನ್ನನ್ನು ನಂಬು, ನೀನು ಸಾಕಷ್ಟು ನೊಂದಿದ್ದಿ. ನೀನೀಗ ಪಾಕಿಸ್ತಾನಕ್ಕೆ ಹೋಗುವ ಸಮಯ ಬಂದಿದೆ. ನಿನ್ನನ್ನು ಕರೆದುಕೊಂಡು ಹೋಗುತ್ತೇನೆ.''

ನನ್ನ ಮಾತುಗಳಿಗೆ ಅವಳು ಕಿವಿಗೊಡಲಿಲ್ಲ. ಅವಳಷ್ಟಕ್ಕೆ ಅವಳು ಗೊಣಗಿಕೊಂಡಳು. ''ಯಾರೂ ನನ್ನ ಮಗಳನ್ನು ಕೊಲೆ ಮಾಡಲು ಸಾಧ್ಯವಿಲ್ಲ!'' ಎಂದು ಗಟ್ಟಿಯಾಗಿ ಕೂಗಿದಳು.

''ಯಾಕೆ ?''

''ಯಾಕೆ ಅಂದರೆ ಅವಳು ತುಂಬ ಚಂದ. ಅವಳು ಎಷ್ಟು ಚಂದ ಅಂದ್ರೆ ಯಾರೂ ಅವಳನ್ನು ಕೊಲೆ ಮಾಡಲಿಕ್ಕೆ ಸಾಧ್ಯವಿಲ್ಲ. ಕನಸಿನಲ್ಲಿ ಕೂಡ ಅವಳಿಗೆ ಯಾರೂ ನೋವುಂಟುಮಾಡ್ಲಿಕ್ಕಿಲ್ಲ.''

ಅವಳ ಮಗಳು ನಿಜಕ್ಕೂ ಅಷ್ಟು ಚೆಲುವೆಯೇ ಎಂದು ನಾನು ಆಶ್ಚರ್ಯಗೊಂಡೆ. ಹೆತ್ತವರಿಗೆ ಹೆಗ್ಗಣ ಮುದ್ದು ಅಲ್ಲವೇ ? ಅಥವಾ ಮುದುಕಿ ಹೇಳುವುದು ಸರಿಯಿರಬಹುದು. ಯಾರಿಗೆ ಗೊತ್ತು? ಆದರೆ ಈ ರುದ್ರಪ್ರಳಯದಲ್ಲಿ ಸರ್ವನಾಶವಾಗಿದೆ. ಈ ಹುಚ್ಚು ಮುದುಕಿ ತನ್ನನ್ನು ತಾನು ವಂಚಿಸಿಕೊಳ್ಳುತ್ತಿದೆ. ಅಹಿತಕರ ವಾಸ್ತವದಿಂದ ಪಲಾಯನ ಮಾಡಲಿಕ್ಕೆ ಹಲವು ಮಾರ್ಗಗಳಿವೆ. ದುಃಖ ಎಂಬುದು ಸುತ್ತುಬಳಸುವ ಮಾರ್ಗ. ಅದು ಅನಂತ ದಾರಿಗಳನ್ನು ಸಂಧಿಸಿ ಮುಂದುವರಿಯುತ್ತದೆ.

ನಾನು ಹಲವು ಬಾರಿ ಭಾರತಕ್ಕೆ ಬಂದೆ. ಪ್ರತಿಸಲವೂ ಆ ಮುದುಕಿಯನ್ನು ಭೇಟಿಯಾಗುತ್ತಿದ್ದೆ. ಈಗ ಅವಳು ಮೂಳೆಯ ಹಂದರವಾಗಿದ್ದಾಳೆ. ಅವಳಿಗೆ ಸರಿಯಾಗಿ ಕಣ್ಣು ಕಾಣುತ್ತಿಲ್ಲ. ಕುರುಡರು ತಡವರಿಸಿ ನಡೆಯುವ ಹಾಗೆ ನಡೆಯುತ್ತಾಳೆ. 'ತನ್ನ ಮಗಳು ಬದುಕಿದ್ದಾಳೆ, ಅವಳನ್ನು ಕೊಲೆ ಮಾಡಲು ಯಾರಿಂದಲೂ ಸಾಧ್ಯವಿಲ್ಲ?' ಎಂಬ ಒಂದು ವಿಚಾರ ಮಾತ್ರ ಬದಲಾಗಿಲ್ಲ. ಮತ್ತೆಲ್ಲ ಬದಲಾಗಿದೆ.

ಒಬ್ಬ ಸ್ವಯಂ ಸೇವಕಿ ನನಗೆ ಹೇಳಿದಳು, ''ನೀವು ಅವಳ ಬಗ್ಗೆ ಸಮಯ ಹಾಳುಮಾಡಬೇಡಿ ಸರ್. ಅವಳು ಹುಚ್ಚಿ. ಅವಳನ್ನು ನಿಮ್ಮ ಜೊತೆ ಪಾಕಿಸ್ತಾನಕ್ಕೆ ಕರೆದುಕೊಂಡುಹೋಗಿ ಒಂದು ಆಶ್ರಯಧಾಮದಲ್ಲಿ ಸೇರಿಸಿಬಿಡಿ.''

ಅದನ್ನು ಕೂಡಲೆ ಮಾಡಲು ನನಗೆ ಇಷ್ಟವಿಲ್ಲ. ಬದುಕಿ ಉಳಿಯುವುದಕ್ಕಾಗಿ ಅವಳ ಬಳಿ ಇರುವ ಒಂದೇ ಒಂದು ಕಾರಣವನ್ನು ಅವಳಿಂದ ಕಿತ್ತುಕೊಳ್ಳಲು ನನಗೆ ಮನಸ್ಸಿಲ್ಲ. ನಾಲ್ಕು ಗೋಡೆಗಳ ನಡುವೆ ಅವಳನ್ನು ಬಂಧಿಸಿಡಲು ನನಗೆ ಮನಸ್ಸಿಲ್ಲ.

ಕಳೆದ ಸಲ ನಾನು ಅವಳನ್ನು ಅಮೃತಸರದಲ್ಲಿ ಭೇಟಿಯಾದೆ. ಅವಳು ಎಂಥ ದುಃಸ್ಥಿತಿಯಲ್ಲಿದ್ದಳೆಂದರೆ – ಅವಳನ್ನು ನೋಡಿ ನನಗೆ ಕಣ್ಣೀರು ಬಂದಿತು. ಅವಳನ್ನು ಪಾಕಿಸ್ತಾನಕ್ಕೆ ಕರೆದುಕೊಂಡು ಹೋಗುವ ಸಲುವಾಗಿ ಒಂದು ಕೊನೆಯ ಪ್ರಯತ್ನ ಮಾಡಬೇಕೆನಿಸಿತು.

ಅವಳು ತನ್ನ ಅರೆ ಕುರುಡು ಕಣ್ಣುಗಳಿಂದ ದಿಟ್ಟಿಸಿನೋಡುತ್ತಾ ಫರೀದ್ ಚೌಕದಲ್ಲಿ ನಿಂತಿದ್ದಳು. ನಾನು ಸಮೀಪದ ಅಂಗಡಿಯವನೊಬ್ಬನ ಜೊತೆ ಅಪಹೃತ ಮುಸ್ಲಿಂ ಹುಡುಗಿಯೊಬ್ಬಳ ಬಗ್ಗೆ ಮಾತನಾಡುತ್ತಿದ್ದೆ. ಲೇವಾದೇವಿಗಾರನೊಬ್ಬನ ಮನೆಯಲ್ಲಿ ಆ ಹುಡುಗಿ ಇದ್ದಾಳೆ ಅಂತ ಸುದ್ದಿ ಸಿಕ್ಕಿತ್ತು. ಸಂಭಾಷಣೆ ಮುಗಿದ ಮೇಲೆ ರಸ್ತೆ ದಾಟಿದೆ. ''ನನ್ನ ಜೊತೆ ಪಾಕಿಸ್ತಾನಕ್ಕೆ ಬಾ'' ಎಂದು ಆ ಮುದುಕಿಯನ್ನು ಒತ್ತಾಯಿಸಲು ನಿರ್ಧರಿಸಿದೆ.

ಆಗ ನಾನು ಒಂದು ಜೋಡಿಯನ್ನು ಕಂಡೆ. ಹೆಂಗಸಿನ ಮುಖ ಬಿಳಿಯ ಚದ್ದರ್‌ನಿಂದ ಸ್ವಲ್ಪಮಟ್ಟಿಗೆ ಮುಚ್ಚಿತ್ತು. ಅವಳ ಜೊತೆ ಇರುವವನು ಓರ್ವ ತರುಣ ಸಿಖ್.

ಅವರು ಆ ಮುದುಕಿಯನ್ನು ದಾಟಿ ಮುಂದೆ ಹೋಗುವಾಗ ಗಂಡಸು ಇದ್ದಕ್ಕಿದ್ದ ಹಾಗೆ ನಿಂತು ಒಂದೆರಡು ಹೆಜ್ಜೆ ಹಿಂದಿಟ್ಟ. ತನ್ನ ನಡುಗುವ ಕೈಗಳಿಂದ ಆ ಹೆಂಗಸಿನ ಕೈ ಹಿಡಿದುಕೊಂಡ. ನನಗೆ ಅವಳ ಪೂರ್ಣ ಮುಖವನ್ನು ಸರಿಯಾಗಿ ನೋಡಲಾಗಲಿಲ್ಲ. ಆದರೆ ಅವಳು ಅಪ್ರತಿಮ ಚೆಲುವೆ ಎಂಬುದು ಕೊಂಚ ಹೊರಳಿ ನೋಡುವಾಗಲೆ ಭಾಸವಾಯಿತು.

ಅವಳತ್ತ ನೋಡಿ ''ನಿನ್ನ ತಾಯಿ !'' ಎಂದು ಉಸುರಿದ. ಹುಡುಗಿ ಒಂದೇ ಒಂದು ಕ್ಷಣ ಮುಖವೆತ್ತಿ ನೋಡಿದಳು. ಆದರೆ ತನ್ನ ಚದ್ದರ್‌ನಿಂದ ಮುಖ ಮುಚ್ಚಿಕೊಂಡು ಸಂಗಾತಿಯ ಕೈ ಹಿಡಿದೆಳೆಯುತ್ತಾ ''ಇಲ್ಲಿಂದ ಬೇಗ ಹೊರಟುಹೋಗೋಣ'' ಎಂದಳು.

ಅವರು ಬಿರುಸಾಗಿ ಹೆಜ್ಜೆಯಿಡುತ್ತಾ ರಸ್ತೆ ದಾಟಿದರು.

''ಭಾಗ್ ಬರಿ, ಭಾಗ್ ಬರಿ'' ಎಂದು ಮುದುಕಿ ಕೂಗಿತು.

ನಾನು ಅವಳ ಬಳಿ ಧಾವಿಸಿದೆ. ''ಏನು ವಿಷಯ ?'' ಎಂದು ಕೇಳಿದೆ.

ಅವಳ ಮೈ ಕಂಪಿಸುತ್ತಿತ್ತು. ''ನಾನು ಅವಳನ್ನು ನೋಡಿದೆ, ನಾನು ಅವಳನ್ನು ಕಣ್ಣಾರೆ ಕಂಡೆ.''

''ಯಾರನ್ನು ನೋಡಿದೆ ಅಜ್ಜಿ ?''

''ನನ್ನ ಮಗಳನ್ನು ನೋಡಿದೆ. ಭಾಗ್ ಬರಿ ನನ್ನ ಮಗಳು - ನಾನು ಅವಳನ್ನು ನೋಡಿದೆ'' ಅವಳ ಕಣ್ಣುಗಳು ನಂದಿದ ದೀಪದಂತಿದ್ದವು.

''ನಿನ್ನ ಮಗಳು ಸತ್ತುಹೋಗಿದ್ದಾಳೆ'' ಎಂದೆ. ''ನೀನು ಸುಳ್ಳು ಹೇಳುತ್ತಿದ್ದೀ'' ಎಂದು ಕಿರುಚಿದಳು.

''ದೇವರ ಮೇಲೆ ಆಣೆ ಮಾಡಿ ಹೇಳುತ್ತೇನೆ. ನಿನ್ನ ಮಗಳು ಸತ್ತುಹೋಗಿದ್ದಾಳೆ.''

ಮುದುಕಿ ರಸ್ತೆಯಲ್ಲಿ ಮುದ್ದೆಯಾಗಿ ಕುಸಿದುಬಿದ್ದಳು.

**ಅನು : ಡಾ|| ಮಹಾಬಲೇಶ್ವರರಾವ್**
ಪ್ರಾಂಶುಪಾಲರು, ಡಾ|| ಟಿ. ಎಂ. ಎ. ಪೈ ಶಿಕ್ಷಣ ಕಾಲೇಜು, ಉಡುಪಿ

---

೧೫ನೇ ಪುಟದಿಂದ....

ಬದಲಾವಣೆ ತರಬೇಕೆಂಬ ಚಾರಿತ್ರಿಕ ಪ್ರಜ್ಞೆಯಿಂದ ವಂಚಿತರಾಗಿರುವ ಒಂದು ಪ್ರದೇಶದ ಜನರಿಗೆ, ಪ್ರಗತಿ ಸಾಧಿಸಲು ಪ್ರತ್ಯೇಕ ರಾಜ್ಯದ ಬೇಡಿಕೆ ಬಹಳ 'ಸಹಜ'ವಾಗಿ ಕಂಡರೂ, ಅಂತಹ ಬೇಡಿಕೆ ಅವರ ಸಮಸ್ಯೆಗಳ ಪರಿಹಾರದ ದೃಷ್ಟಿಯಿಂದ ಒಂದು ದಾರುಣ ಚಾರಿತ್ರಿಕ ಹಿನ್ನಡೆಯೆಂದು ಗುರುತಿಸಬೇಕು.

ನಮ್ಮ ಸಮಾಜದಲ್ಲಿ ಇಂತಹ ಹಲವಾರು ಪ್ರಗತಿ-ವಿರೋಧಿ ಬೆಳವಣಿಗೆಗಳನ್ನು ಗಮನಿಸಬಹುದು. ಹಾಗೂ ಈ ಪ್ರಗತಿ-ವಿರೋಧಿ ಬೆಳವಣಿಗೆಗಳಿಗೆ ಬೆಂಬಲವಾಗಿ ಕೆಲಸಮಾಡುವ ಸಾಮಾಜಿಕ-ಮಾನಸಿಕ ಆಯಾಮಗಳನ್ನು ಗುರುತಿಸಬಹುದು : ಪ್ರಸ್ತುತ ಜಾಗತೀಕರಣದ ಹಿನ್ನೆಲೆಯಲ್ಲಿ, ಶೋಷಣೆ ಬಲಗೊಂಡು ವ್ಯಕ್ತಿಯ ಭದ್ರತೆಯ ಪ್ರಜ್ಞೆ ಹಾಗೂ ಕರ್ತೃತ್ವತೆ (subjecthood) ಕುಸಿಯುತ್ತದೆ. ಭದ್ರತೆಯ ಪ್ರಜ್ಞೆ ಹಾಗೂ ಕರ್ತೃತ್ವತೆ ಕುಸಿದ ಹಾಗೆಲ್ಲಾ, ಈ ಸಮಸ್ಯೆಗಳು ವರ್ಗ ಶೋಷಣೆಯಿಂದ ಹುಟ್ಟುಹಾಕಲ್ಪಟ್ಟಿವೆ ಎನ್ನುವ ಪ್ರಜ್ಞೆಯಿಂದ ವಂಚಿತರಾಗಿರುವ ಜನರು ತಮ್ಮ ಪ್ರಜ್ಞೆಗೆ ಆಡಳಿತವರ್ಗಗಳಿಂದ ಸುಲಭವಾಗಿ ಸಿಗುವಂತೆ ಮಾಡಲ್ಪಟ್ಟಿರುವ ನೆಲೆಗಳಲ್ಲಿ (ಉದಾಹರಣೆಗೆ : ಅನ್ಯಜಾತಿ, ಪ್ರದೇಶ, ಭಾಷೆ, ಕೋಮು ಇತ್ಯಾದಿ) ಸಮಸ್ಯೆಯನ್ನು ಪರಿಹರಿಸಲು ಯತ್ನಿಸುತ್ತಾರೆ : ಬೇರೆ ಜಾತಿ, ಪ್ರದೇಶ, ಭಾಷೆ, ಕೋಮುಗಳ ಬಗ್ಗೆ ವೈಷಮ್ಯ ಬೆಳೆಸುವುದರಿಂದ ತಮ್ಮ ಜನಸಮೂಹದಲ್ಲಿ ಮಾನಸಿಕ ಭದ್ರತೆ, ಕರ್ತೃತ್ವತೆ ಬೆಳೆಸಲು ಯತ್ನಿಸುತ್ತಾರೆ. ಪ್ರತ್ಯೇಕ ರಾಜ್ಯದ ಬೇಡಿಕೆ ಹೀಗೆ ಒಂದು ಸೀಮಿತ ಪ್ರದೇಶದ 'ಮಾಲೀಕತ್ವ' ಪಡೆದು ಮಾನಸಿಕ ಅಭದ್ರತೆಯಿಂದ ಮತ್ತು ಕರ್ತೃತ್ವಹೀನತೆಯಿಂದ ಪಾರಾಗಬೇಕೆಂಬ ಪ್ರಯತ್ನ.

ಆದುದರಿಂದ ಪ್ರತ್ಯೇಕ ರಾಜ್ಯದ ಬೇಡಿಕೆ ಒಂದು ಪ್ರದೇಶದ ಪ್ರಗತಿಗಾಗಿ ಮುಂದಿಟ್ಟರೂ, ಆ ಗುರಿಯನ್ನು ಮುಟ್ಟಲು ಸಾಧ್ಯವಿಲ್ಲ. ಪ್ರಗತಿಯ ದೃಷ್ಟಿಯಿಂದ ಸಮಾಜದ ಆಮೂಲಾಗ್ರ ಬದಲಾವಣೆಗೆ ಯತ್ನಿಸುವುದು ಚಾರಿತ್ರಿಕ ಹಿನ್ನೆಲೆಯಲ್ಲಿ ಸರಿಯಾದ ಮಾರ್ಗ.

**ಡಾ|| ಬಿ. ಕೃಷ್ಣಮೂರ್ತಿ**
ಸಪ್ತಾಪುರ, ೧೦ನೇ ಕ್ರಾಸ್, ಧಾರವಾಡ - ೫೮೦ ೦೦೧




# ಪ್ರಕೃತಿ ವಿಕೋಪದ ಇನ್ನೊಂದು ಮುಖ

ಇದನ್ನು ಯುದ್ಧವೆಂದರೂ ಒಪ್ಪುವುದು ಕಷ್ಟ. ಏಕೆಂದರೆ ಯುದ್ಧದಲ್ಲಿ ಕನಿಷ್ಠ ಎರಡು ಬಣಗಳಿರುತ್ತವೆ. ಎರಡೂ ಬಣಗಳಲ್ಲಿ ಸಾವು ನೋವಾಗುತ್ತದೆ. ಇಲ್ಲಿ ಹಾಗಾಗಲಿಲ್ಲ. ಡಿಸೆಂಬರ್ ೨೬, ೨೦೦೪ರ ಭಾನುವಾರ ಬೆಳಗ್ಗೆ ೬.೨೯ರಲ್ಲಿ ಹಿಂದೂ ಮಹಾಸಾಗರ ಸುಮಾತ್ರ ಭಾಗದಲ್ಲಿ ಸುಳಿವು ಕೊಡದೆ ಉಕ್ಕಿತು. ಅದಕ್ಕೆ ಬಲಿಯಾದವರು ಕಡಲ ತಡಿಯಲ್ಲೇ ಇದ್ದವರು, ರಜೆ ಕಳೆಯಲು ಬಂದವರು ಇಲ್ಲವೆ ತಮ್ಮ ಎಂದಿನ ಮೀನುಗಾರಿಕೆಯಲ್ಲಿ ತೊಡಗಿದ ಮುಗ್ಧ ಮೀನುಗಾರರು; ಕಡಲ ಬೀಭತ್ಸ ಮುಖ ನೋಡದ ಅಮಾಯಕರು. ನೆಲದಲ್ಲಿ ಭೂಕಂಪನವಾಗಿದ್ದರೆ ಅದು ಮಹಾರಾಷ್ಟ್ರದ ಕಿಲಾರಿಯಲ್ಲಾದಂತೆ ಅಥವಾ ಗುಜರಾತಿನ ಭುಜ್‌ನಲ್ಲಾದಂತೆ ಭೂಕಂಪನ ಹುಟ್ಟಿದ ಸನಿಹದ ಜನರನ್ನೋ ಕಟ್ಟಡಗಳನ್ನೋ ನಾಶಮಾಡಿ ಬರುಬರುತ್ತ ಅದರ ತೀವ್ರತೆ ಕಡಿಮೆಯಾಗುತ್ತಿತ್ತು. ಸುಮಾತ್ರದ ಬಳಿ ಎದ್ದ ಹೆಬ್ಬಲೆಗಳನ್ನು ಸೃಷ್ಟಿಸಿದ ಭೂಕಂಪನ ಸಾಗರ ತಳದ ೪೦ ಕಿ.ಮೀ. ಆಳದಲ್ಲಿ ಹುಟ್ಟಿತ್ತು. ಕೊಳಕ್ಕೋ ಬಾವಿಗೋ ಕಲ್ಲು ಎಸೆದರೆ ಕಲ್ಲು ತಾಕಿದ ಭಾಗದಿಂದ ವೃತ್ತಾಕಾರವಾಗಿ ಅಲೆಗಳು ಒಂದರ ಹಿಂದೆ ಒಂದು ಎದ್ದು ಅಂಚನ್ನು ಬಡಿಯುವಂತೆ ಸಾಗರದಲೆಗಳು ಭೂಕಂಪನ ಕೇಂದ್ರ ಭಾಗದಿಂದ ವಿಶಾಲ ಸಾಗರವನ್ನೆಲ್ಲ ಮೈದಾನ ಮಾಡಿಕೊಂಡು ಒಂದರ ಹಿಂದೆ ಒಂದು ಬಂದು ಅಪ್ಪಳಿಸಿದಾಗ, ಇಡೀ ಇಂಡೋನೇಷ್ಯ, ಥೈಲೆಂಡ್, ಭಾರತದ ಪೂರ್ವ ಕರಾವಳಿ, ಶ್ರೀಲಂಕಾ ಮತ್ತು ಮಾಲೆ ತತ್ತರಿಸಿಹೋದುವು. ಜೀವನಷ್ಟ ಒಂದೂವರೆ


ಪೆಸಿಫಿಕ್ ಸಾಗರದಲ್ಲಿ ಸುನಾಮಿ ಎಚ್ಚರಿಕೆಯ ಕೇಂದ್ರಗಳ ಜಾಲ

ಲಕ್ಷವನ್ನು ಮೀರಿತೆಂದು ಅಂದಾಜು. ಆಸ್ತಿಪಾಸ್ತಿ ನಷ್ಟ, ಭಾರತ ಸರ್ಕಾರ ಅಂದಾಜು ಮಾಡಿದಂತೆ ೫,೩೨೨ ಸಾವಿರ ಕೋಟಿ ರೂಪಾಯಿ.

ಇದೀಗ ಗೋವಾದ ರಾಷ್ಟ್ರೀಯ ಸಾಗರಾಧ್ಯಯನ ಸಂಸ್ಥೆ ತನ್ನ ಸಾಗರಕನ್ಯೆ ಎಂಬ ಹಡಗನ್ನು ಅಂಡಮಾನ್-ನಿಕೋಬಾರ್ ದ್ವೀಪಕ್ಕೆ ಕಳಿಸಿದೆ. ಸುನಾಮಿ ತಂದ ಭೂ ಬದಲಾವಣೆಗಳನ್ನು ಕುರಿತು ಅಲ್ಲಿ ತಂತ್ರಜ್ಞರ ತಂಡವನ್ನೇ ನಿಯೋಜಿಸಿದೆ. ಹವಳ ದಿಬ್ಬಗಳು ಸುನಾಮಿ ಅಲೆಯನ್ನು ತಡೆಯುತ್ತವೆಂದು ತಂತ್ರಜ್ಞರು ಭಾವಿಸಿದ್ದರು. ಈಗ ಅಂಡಮಾನ್ ದ್ವೀಪದ ಶೇ. ೪೦ ಭಾಗ ಹವಳ ರಚನೆಗಳು ಧ್ವಂಸವಾಗಿವೆ. ಅದರ ಅಧ್ಯಯನಕ್ಕೆಂದೇ ಭಾರತೀಯ ಪ್ರಾಣಿ ಸರ್ವೇಕ್ಷಣ ಸಂಸ್ಥೆ ತನ್ನ ತಂಡವನ್ನು ಕಳಿಸಿದೆ. ಅಂಡಮಾನ್ ದ್ವೀಪ ಕಳೆದ ಹತ್ತು ದಿನಗಳಲ್ಲಿ ೯೩ ಬಾರಿ ಕಂಪನಕ್ಕೆ ತುತ್ತಾಗಿದೆ. ಈಗಲೂ ಅದು ಅಸ್ಥಿರ ಎಂದು ನಿತ್ಯ ಬರುತ್ತಿರುವ ಕಂಪನಗಳ ವರದಿಗಳು ಹೇಳುತ್ತಿವೆ. ಇಂಡೋನೇಷ್ಯದಲ್ಲಿ ಈಗಷ್ಟೇ ಹನ್ನೆರಡು ರಾಷ್ಟ್ರಗಳು ಸಮಾವೇಶಗೊಂಡು ವಿಶ್ವ ಸಂಸ್ಥೆಯ ಮಹಾ ಕಾರ್ಯದರ್ಶಿ ಕೋಫಿ ಅನ್ನಾನ್ ಜೊತೆ ಚರ್ಚಿಸಿ ಹಿಂದೂ ಮಹಾಸಾಗರದಲ್ಲೂ ಸುನಾಮಿ ಅಲೆಗಳ ಮುನ್ಸೂಚನೆ ಕೊಡುವಂತಹ ಯಂತ್ರೋಪಕರಣಗಳ ಸ್ಥಾಪನೆಗೆ ಒತ್ತಾಯಿಸಿವೆ. ಕೆನಡಾದಲ್ಲಿ ಸುನಾಮಿ ಮುನ್ಸೂಚನಾ ತಂತ್ರವನ್ನು ರೂಪಿಸಿದ ಭಾರತೀಯ ಸಂಜಾತ ಮೂರ್ತಿ ಎಂಬ ತಜ್ಞ ಭಾರತ ಸರ್ಕಾರಕ್ಕೆ ಭರವಸೆ ಕೊಡುತ್ತಿದ್ದಾರೆ. 'ನನ್ನ ಸೇವೆಯನ್ನು ಬಳಸಿಕೊಳ್ಳಿ, ಈ ಸೇವೆಗಾಗಿ ನಿಮ್ಮಿಂದ ಒಂದು ಬಿಡಿಗಾಸನ್ನೂ ನಾನು ನಿರೀಕ್ಷಿಸುತ್ತಿಲ್ಲ. ವಿಶಾಖಪಟ್ಟಣದ ಬಳಿ ಸುನಾಮಿ ಮುನ್ಸೂಚನಾ ಕೇಂದ್ರವನ್ನು ತೆರೆಯಿರಿ' ಎಂದು ಹೇಳುತ್ತಿದ್ದಾರೆ. ಸರ್ಕಾರ ಈಗ ೧೨೫ ಕೋಟಿ ರೂ. ವೆಚ್ಚದಲ್ಲಿ ಹಿಂದೂ ಮಹಾಸಾಗರದಲ್ಲಿ, ವಿಶೇಷವಾಗಿ ಪೂರ್ವ ತೀರಕ್ಕೆ ನೆರವಾಗುವಂತೆ ಸುನಾಮಿ ಮೀಟರ್ ಸ್ಥಾಪಿಸಲು ಹಸಿರು ನಿಶಾನೆ ತೋರಿಸಿದೆ. ಏಷ್ಯ ಖಂಡದ ಈ ಭಾರಿ ದುರಂತದ ಬಗ್ಗೆ ಖಚಿತವಾದ ನಷ್ಟದ ಬಾಬತ್ತಿನ ಲೆಕ್ಕ ಎಂದೂ ಸಿಗದು. ಆಧುನಿಕ ತಂತ್ರಜ್ಞಾನಗಳು ಯಾವೂ ಜನರ ಜೀವ ಉಳಿಸಲು ನೆರವಿಗೆ ಬರಲಿಲ್ಲವೆಂದು ಸಾರ್ವಜನಿಕರೂ ಕೊರಗುತ್ತಿದ್ದಾರೆ, ತಂತ್ರಜ್ಞರೂ ಕೈಚೆಲ್ಲಿ ತಮ್ಮ ಅಸಹಾಯಕತೆಯನ್ನು ತೋರುತ್ತಿರುವ ಈ ಸಂದರ್ಭದಲ್ಲೇ ಇಂಟರ್‌ನೆಟ್‌ನಲ್ಲಿ ಸುನಾಮಿ ಸಂತ್ರಸ್ತರ ನೆರವಿಗೆ ಮಾಡಿಕೊಂಡ ಮನವಿ ಹಲವು ಕೋಟಿ ಡಾಲರ್ ದೇಣಿಗೆಯನ್ನು ಸಂಗ್ರಹಿಸುವಲ್ಲಿ ನೆರವಾಗಿದೆ. ತಂತ್ರಜ್ಞಾನದ ಪ್ರಬಲ ಪ್ರಭಾವಕ್ಕೆ ಇದೂ ಒಂದು ಸಾಕ್ಷಿ.

ನಿಸರ್ಗ ದಯಾಮಯವಲ್ಲ ಎಂಬುದನ್ನು ಜನತೆ ಆಗಾಗ ಅರಿಯುತ್ತಲೇ ಬಂದಿದೆ

ವಿಕೋಪಗಳು ಎರಗಿದಾಗಲೆಲ್ಲ. ಇಷ್ಟು ದಿನ 'ಸುನಾಮಿ' ಎಂಬ ಪದವನ್ನು ಕೇಳೇ ಇರದ ಭಾರತಕ್ಕೆ ಇದೊಂದು ದೊಡ್ಡ ಆಘಾತ. ಭೂಮಿಯ ಒಳಗೆ ಏನಾಗುತ್ತಿದೆ ಎಂಬುದು ನಮ್ಮ ಬರಿಗಣ್ಣಿಗೆ ಕಾಣಿಸದು. ಹಾಗೆಯೇ ಸಾಗರ ತಳದ ಸ್ವರೂಪವೂ ಮರೆಮಾಚುವಷ್ಟು ನೀರಿನ ಸ್ತರ ನಿಂತಿದೆ ತನ್ನದೇ ಆದ ಮಟ್ಟ ಕಾಯ್ದಿರಿಸಿಕೊಂಡು. ಸುನಾಮಿಯಂಥ ನೈಸರ್ಗಿಕ ವಿಕೋಪಗಳು ಏಕೆ ಆಗಾಗ ಕಾಡುತ್ತವೆ ಎಂಬುದನ್ನು ಅರಿಯಬೇಕಾದರೆ ಭೂಮಿಯ ಅಸ್ಥಿರತೆಯ ಬಗ್ಗೆಯೂ ನಾವು ಕೊಂಚ ದೃಷ್ಟಿ ಹರಿಸಬೇಕಾಗುತ್ತದೆ, ಅದರ ಅಂತರಾಳದ ಸ್ವರೂಪವನ್ನು ಅರಿಯಬೇಕಾಗುತ್ತದೆ. ಭೂಮಿಯ ಮೇಲ್ಮೈನಲ್ಲಿ ಪರ್ವತ, ಬೆಟ್ಟ-ಗುಡ್ಡ, ಕಣಿವೆ-ಕಂದರ, ಮೈದಾನ-ಪ್ರಸ್ಥಭೂಮಿ ಇರುವಂತೆ ಸಾಗರ ತಳದಲ್ಲೂ ಇವೆ. ಅಂಥ ರಚನೆಗಳಿಗೆಲ್ಲ ನೀರಿನ ಹಾಳೆ ಪರದೆ ಹಾಕಿಬಿಟ್ಟಿದೆ. ಪೆಸಿಫಿಕ್ ಸಾಗರದ ಮೇರಿಯಾನ ಎಂಬ ಭಾಗದಲ್ಲಿ ಒಂದು ಕಮರಿ ಇದೆ. ಇದರಲ್ಲಿ ನಮ್ಮ ಎವರೆಸ್ಟ್ ಶಿಖರವೂ ಮುಳುಗಿಹೋಗಿ ಅದರ ಮೇಲೆ ಇನ್ನೂ ಎರಡೂವರೆ ಕಿ.ಮೀ. ನೀರು ನಿಂತಿರುತ್ತದೆ. ಈ ಬಗೆಯ ಕಮರಿಗಳು ಪೆಸಿಫಿಕ್, ಅಟ್ಲಾಂಟಿಕ್ ಮತ್ತು ಹಿಂದೂ ಮಹಾಸಾಗರ ಎಲ್ಲದರಲ್ಲೂ ಇವೆ. ೬೬,೦೦೦ ಕಿ.ಮೀ. ಸಾಗರ ತಳದುದ್ದಕ್ಕೂ ಹಲವಾರು ಕಿ.ಮೀ. ಎತ್ತರಕ್ಕಿರುವ ಪರ್ವತಮಾಲೆಗಳೇ ಹಬ್ಬಿವೆ. ಕೆಲವೆಡೆ ಈ ಪರ್ವತ ಶಾಖೆಗಳ ಅಗಲವೇ ಹಿಮಾಲಯದ ಉದ್ದದಷ್ಟಾಗುತ್ತದೆ. ಹವಾಯಿ ದ್ವೀಪದ ಬಳಿ ಸಾಗರ ತಳ ಮುಟ್ಟಬೇಕೆಂದರೆ ಅವರೋಹಣ ಮಾಡುತ್ತ ಸಾಗಿದರೆ ಅದು ಹತ್ತು ಕಿ.ಮೀ. ಆಳ ತಲುಪುತ್ತದೆ. ಎತ್ತರದಲ್ಲಿ ಹಿಮಾಲಯವನ್ನೂ ಮೀರಿಸಿದ ಪರ್ವತಗಳ ಸಮೂಹವೇ ಹವಾಯಿ ದ್ವೀಪದ ಸುತ್ತಮುತ್ತ ನೆಲೆಯಾಗಿವೆ. ಸಾಗರಗಳು ಎಂದೂ ಬರಿದಾಗುವುದಿಲ್ಲ. ಅಗಸ್ತ್ಯ ಋಷಿ ಇಡೀ ಸಾಗರವನ್ನೇ ಆಪೋಶನ ತೆಗೆದುಕೊಂಡು ಅದರಲ್ಲಿ ಅಡಗಿದ್ದ ರಕ್ಕಸರನ್ನು ಹಿಡಿದೆಳೆದ ಪ್ರಸಂಗ ಕೇವಲ ಪುರಾಣಗಳಲ್ಲಿ ಮಾತ್ರ ಸಾಧ್ಯ. ಏಕೆಂದರೆ ಎಲ್ಲ ಸಾಗರಗಳ ಒಟ್ಟು ಜಲರಾಶಿ ೧೪,೬೦,೦೦೦ ಘನ ಕಿ.ಮೀ. ಗಾತ್ರವಿದೆ. ಇದೆಲ್ಲ ಬಾಷ್ಪವಾಗಿ ಬಣಬಣಗುಟ್ಟುವ ಸಾಗರ ತಳ ಕಾಣುವುದು ಕೂಡ ಕೇವಲ ನಮ್ಮ ಕಲ್ಪನೆ ಅಷ್ಟೇ. ಎರಡನೇ ಮಹಾಯುದ್ಧದ ಸಮಯದಲ್ಲಿ ಸಾಗರಗಳ ಬಗ್ಗೆ ವ್ಯಾಪಕ ಶೋಧನೆಯಾಗಿ ಹೊಸ ತಂತ್ರೋಪಕರಣಗಳು ಹುಟ್ಟಿದವು. ಅವುಗಳ ನೆರವಿನಿಂದ ಸಾಗರ ತಳ ಹೇಗಿದೆ ಎಂಬ ಕಲ್ಪನೆ ಮೂಡಿತು.

ಸಾಗರ ತಳದಲ್ಲೇಕೆ ಗೌರಿಶಂಕರ ಶಿಖರವನ್ನು ಮುಳುಗಿಸುವಷ್ಟು ಆಳ ಕಮರಿಗಳಿವೆ? ಹಿಮಾಲಯ ಪರ್ವತ ಮಾಲೆಯನ್ನೂ ಮೀರಿಸುವಂಥ ಪರ್ವತ ಸ್ತೋಮಗಳು ಸಾಗರದ ತಳದಲ್ಲೇಕೆ ಕುಳಿತಿವೆ? ಏಕೆಂದರೆ ಇಂಥ ಪರ್ವತಗಳು ನಮ್ಮ ಚಾಮುಂಡಿ ಬೆಟ್ಟದಂತಲ್ಲ, ಹಿಮಾಲಯದಂತೆಯೂ ಅಲ್ಲ, ಇವೆಲ್ಲ ಸಾಗರ ತಳದ ಸೀಳುಗಳಲ್ಲಿ ಜ್ವಾಲಾಮುಖಿಗಳೆದ್ದು ಲಾವಾರಸ ಹೆಪ್ಪುಗಟ್ಟಿ ಮೈದಳೆದ ಶಿಲೆಗಳು. ಸಾಗರ ತಳ ಸಹಸ್ರಾರು ಕಿ.ಮೀ. ಉದ್ದಕ್ಕೂ ಸೀಳುಗಳಾಗಿ ಬಿರಿದಿವೆ, ಹಣ್ಣನ್ನು ಹೋಳುಮಾಡಿದಂತೆ. ಅಂಥ ಛಿದ್ರ ವಲಯವನ್ನು ಭೂಗೋಳದ ಎಲ್ಲ ಭಾಗಗಳಲ್ಲೂ ಈಗ

## ಕೆಲವು ದೈತ್ಯ ಸುನಾಮಿಗಳು

**ನವೆಂಬರ್ ೧, ೧೭೫೫ :** ಲಿಸ್‌ಬನ್ ಮತ್ತು ಪೋರ್ಚುಗಲ್‌ನ ಅನೇಕ ನಗರಗಳನ್ನು ಧ್ವಂಸ ಮಾಡಿದ ಭೂಕಂಪನದಿಂದ ಬೆದರಿದ ನಾಗರಿಕರು ಹಡಗು, ದೋಣಿ, ತೆಪ್ಪಗಳಲ್ಲಿ ಸಮುದ್ರದ ಮೊರೆಹೊಕ್ಕರು. ಆದರೆ ಸಮುದ್ರದಲ್ಲಿ ಅಲೆಗಳೆದ್ದು ಒಮ್ಮೆಲೇ ೬೦,೦೦೦ ಜನ ಬಲಿಯಾದರು.

**ಆಗಸ್ಟ್ ೨೭, ೧೮೮೩ :** ಇಂಡೋನೇಷ್ಯದ ಪುಟ್ಟ ದ್ವೀಪ ಕ್ರಕಟೋವ ಜ್ವಾಲಾಮುಖಿಯಾಗಿ ಸ್ಫೋಟಿಸಿ, ೩೬ ಮೀಟರ್ ಎತ್ತರದ ಅಲೆಗಳನ್ನು ಎಬ್ಬಿಸಿ ೩೬,೦೦೦ ಜನರನ್ನು ಕೊಂದಿತು. ಅದರಿಂದ ತೂರಿಬಂದ ಬೂದಿ ಇಡೀ ಭೂಗೋಳವನ್ನು ಮೂರು ಬಾರಿ ಪ್ರದಕ್ಷಿಣೆ ಹಾಕಿತು. ಎರಡು ತಿಂಗಳು ಸಾಗರಯಾನ ಮಾಡದಂತೆ ಬೂದಿ ಮುಚ್ಚಿದ ನೀರು ನೌಕೆಗಳಿಗೆ ತಡೆಯೊಡ್ಡಿತು. ಜ್ವಾಲಾಮುಖಿಯ ಸ್ಫೋಟ ೪,೫೦೦ ಕಿ.ಮೀ. ದೂರ ಕೇಳಿಸಿತ್ತು.

**ಜೂನ್ ೧೩, ೧೮೯೬ :** ಜಪಾನಿನ ಪೂರ್ವ ತೀರದಲ್ಲಿ ಬಡಿದ ಸುನಾಮಿ ಅಲೆಗಳಿಂದ ೨೭,೦೦೦ ಮಂದಿ ಸತ್ತರು.

**ಜುಲೈ, ೧೯೫೮ :** ಅಲಾಸ್ಕದ ಲಿತುಯಾ ಕೊಲ್ಲಿಯಲ್ಲಿ ಶಿಲಾಪಾತ ಮತ್ತು ಹಿಮಗಡ್ಡೆ ಸೃಷ್ಟಿಸಿದ ಸುನಾಮಿ ಅಲೆಗಳು ಅರ್ಧ ಕಿ.ಮೀ. ಎತ್ತರದ ಅಲೆಗಳನ್ನು ಏಳಿಸಿತ್ತು. ಸತ್ತವರು ಕೇವಲ ಇಬ್ಬರು ಮೀನುಗಾರರು.

**ಮೇ ೨೨, ೧೯೬೦ :** ಚಿಲಿಯ ಸಾಗರ ತೀರದಲ್ಲಿ ೮.೬ ಪರಿಮಾಣದ ಭೂಕಂಪನವಾಗಿ ೨೫ ಮೀಟರ್ ಅಲೆಗಳೆದ್ದು ಚಿಲಿ ಮತ್ತು ಹವಾಯಿ ದ್ವೀಪದ ೧,೫೦೦ ಮಂದಿ ಕೊಚ್ಚಿಹೋದರು.

**ಮಾರ್ಚ್ ೨೭, ೧೯೬೪ :** ಅಲಾಸ್ಕ ತೀರದಲ್ಲಿನ ಭೂಕಂಪನದಿಂದ ಗಂಟೆಗೆ ೬೨೦ ಕಿ.ಮೀ. ವೇಗದಲ್ಲಿ ಚಲಿಸುವ ಸುನಾಮಿ ಅಲೆಗಳೆದ್ದು ೬೭ ಮೀಟರ್ ಎತ್ತರಿಸಿ, ಆ ಭಾಗದ ೧೬೦ ಜನರನ್ನು ಕೊಂದಿತು.

**ಆಗಸ್ಟ್ ೨೩, ೧೯೭೬ :** ನೈಋತ್ಯ ಫಿಲಿಪ್ಪೀನ್ಸ್‌ನಲ್ಲಿ ಸುನಾಮಿ ಅಲೆಗಳಿಗೆ ೮,೦೦೦ ಮಂದಿ ಬಲಿ.

**ಜುಲೈ ೧೭, ೧೯೯೮ :** ಪಾಪುವಾ ನ್ಯೂಗಿನಿಯಲ್ಲಿ ೧೦ ಮೀಟರ್ ಎತ್ತರದ ಸುನಾಮಿಗಳೆದ್ದು, ೨,೨೦೦ ಮಂದಿ ಸತ್ತರು. ಅನೇಕ ದೇಹಗಳು ಮರಗಳಲ್ಲಿ ನೇತಾಡುತ್ತಿದ್ದವು.

**ಡಿಸೆಂಬರ್ ೨೬, ೨೦೦೪ :** ಈಗಿನ ಇಂಡೋನೇಷ್ಯ ಸುನಾಮಿ. ೮.೯ರ ಪರಿಮಾಣದ ಭೂಕಂಪನವಾಗಿ, ೧೦ ಮೀಟರ್ ಎತ್ತರದ ಅಲೆಗಳೆದ್ದು, ಥೈಲೆಂಡ್, ಇಂಡೋನೇಷ್ಯ, ಭಾರತ ಮತ್ತು ಶ್ರೀಲಂಕಾ ದೇಶಗಳಲ್ಲಿ ಒಂದೂವರೆ ಲಕ್ಷಕ್ಕೂ ಹೆಚ್ಚು ಮಂದಿಯನ್ನು ಬಲಿ ತೆಗೆದುಕೊಂಡಿದೆ. ಭಾರತಕ್ಕಾದ ನಷ್ಟ ೫,೩೨೨ ಸಾವಿರ ಕೋಟಿ.

ಗುರುತಿಸಿದ್ದಾರೆ. ಇವು ಸಾಮಾನ್ಯ ಛಿದ್ರ ವಲಯಗಳಲ್ಲ. ಇಡೀ ಖಂಡಗಳನ್ನೇ ಹೊರುವಷ್ಟು ಮಂದವಾಗಿರುವ ಅಂದರೆ ಸುಮಾರು ೧೦೦ ಕಿ.ಮೀ. ದಪ್ಪದ ಭೂಚಿಪ್ಪಿನ ತುಂಡುಗಳು ಇವು. ಇವನ್ನು ಭೂ ಫಲಕ ಎನ್ನುತ್ತಾರೆ. ಗಾತ್ರದಲ್ಲೂ ಇವು ಅಪಸಾಮಾನ್ಯವಾದವು. ನಮ್ಮ ಉಪಖಂಡ ಭಾರತ ಮತ್ತು ಆಸ್ಟ್ರೇಲಿಯ ಖಂಡವನ್ನು ಒಂದೇ ಒಂದು ಭೂಫಲಕ ಹೊತ್ತು ಮೆಲ್ಲನೆ ಸರಿಯುತ್ತಿದೆ ಎಂದು ಈಗ ಗುರುತಿಸಿದ್ದಾರೆ. ಈ ಛಿದ್ರ ವಲಯಗಳು ಅಂಥ ಫಲಕದ ಅಂಚುಗಳು. ಈ ಬಗೆಯ ೧೨ ಮಹಾಫಲಕಗಳು ಖಂಡಗಳನ್ನು ಹೊತ್ತು ಮೆಲ್ಲ ಮೆಲ್ಲನೆ ಎದುರು ಬದುರಾಗೋ ಅಥವಾ ವಿಮುಖವಾಗೋ ವರ್ಷಕ್ಕೆ ಒಂದರಿಂದ ಮೂರುವರೆ ಸೆಂಟಿಮೀಟರುಗಳಷ್ಟು ಸರಿದಾಡುತ್ತಿವೆ. ಏಕೆಂದರೆ ಭೂಮಿಯ ಅಂತರಾಳ ಘನ ಸ್ಥಿತಿಯಲ್ಲಿಲ್ಲ, ಅರೆಪಾಕ ಸ್ಥಿತಿಯಲ್ಲಿದೆ. ಅದರ ಮೇಲೆ ಈ ಶಿಲಾಫಲಕಗಳು ಮೆಲ್ಲ ಮೆಲ್ಲನೆ ಸಾಗುತ್ತಿವೆ. ಒಮ್ಮೊಮ್ಮೆ ಘರ್ಷಿಸುತ್ತವೆ, ಕೆಲವೊಮ್ಮೆ ದೂರ ದೂರ ಸರಿಯುತ್ತವೆ, ಕೆಲವೆಡೆ ಒಂದರ ಅಡಿಯಲ್ಲಿ ಒಂದು ನುಸುಳಲು



*ಶಿಲಾಫಲಕಗಳ ಜಾರಿಕೆಯಿಂದ ಸಾಗರ ತಳದಲ್ಲಿ ಭೂಕಂಪನ ಮತ್ತು ಸುನಾಮಿಯ ಹುಟ್ಟು*



*ಸಾಗರತಳದಲ್ಲಿರಿಸಿದ ಸುನಾಮಿ ಮೀಟರ್ ಮತ್ತು ಸಂಜ್ಞೆಗಳನ್ನು ಉಪಗ್ರಹಗಳಿಗೆ ರವಾನಿಸುವ ಯಂತ್ರ*

ಹವಣಿಸುತ್ತವೆ. ಇಂಥ ಭಾಗದಲ್ಲಿ ಆಳದಲ್ಲಿ ಭೂಕಂಪನವಾಗುತ್ತದೆ. ಖಂಡಗಳನ್ನು ಹೊತ್ತ ಫಲಕಗಳು ಡಿಕ್ಕಿ ಹೊಡೆದರೆ, ಅಂಚಿನಲ್ಲಿ ಹಿಮಾಲಯದಂಥ ಮಹೋನ್ನತ ಪರ್ವತಗಳು ಉದ್ಭವಿಸಬಹುದು. ಒತ್ತಿ ಒತ್ತಿ ಬಂದಂತೆಲ್ಲ ಪರ್ವತವೇ ಮೇಲೇರುತ್ತ ಹೋಗಬಹುದು. ಸಾಗರ ತಳದಲ್ಲಿ ಇಂಥ ಫಲಕಗಳ ಘರ್ಷಣೆಯಾದರೆ ಈಗ ಇಂಡೋನೇಷ್ಯದಲ್ಲಿ ಆದಂತೆ ಭೂಕಂಪನವಾಗಿ ಸುಮಾತ್ರದಲ್ಲಿ ಎದ್ದಂಥ ಹೆಬ್ಬಲೆಗಳೇ ಹುಟ್ಟಬಹುದು. ಜಾವಾ ದ್ವೀಪದ ಪೂರ್ವಕ್ಕೆ ಸಾಗರದಾಳದಲ್ಲಿ ಒಂದು ಕಮರಿ ಇದೆ. ಇದರ ಆಳವೇ ಎರಡು ಕಿ.ಮೀ.ಗಿಂತಲೂ ಮಿಗಿಲು. ಎಲ್ಲೆಲ್ಲಿ ಭೂಫಲಕ ಭೂಗರ್ಭದತ್ತ ನುಸುಳಲು ಪ್ರಯತ್ನಿಸುತ್ತಿದೆಯೋ ಅಂತೆಡೆ ಭೂ ಸೆಳೆತವಾಗಿ ಕಮರಿಗಳಾಗುತ್ತವೆ. ಇಲ್ಲಿ ಏನಾಗಿದೆಯೆಂದರೆ ಭಾರತ ಮತ್ತು ಆಸ್ಟ್ರೇಲಿಯ ಖಂಡವನ್ನು ಹೊತ್ತಿರುವ ಶಿಲಾಫಲಕವೊಂದು ಇಂಡೋನೇಷ್ಯ ಮುಂತಾದ ದ್ವೀಪವನ್ನು ಹೊತ್ತಿರುವ ಯೂರೇಷ್ಯ ಎಂಬ ಶಿಲಾ ಫಲಕದಡಿ ನುಸುಳಲು ಯತ್ನಿಸಿದ್ದರಿಂದಲೇ ಅಲ್ಲಿ ನಲವತ್ತು ಕಿ.ಮೀ. ಆಳದಲ್ಲಿ ಭೂಕಂಪನ ಹುಟ್ಟಿತು. ಸಾಗರದಲ್ಲಿ ಎದ್ದ ಈ ಹೆಬ್ಬಲೆಗಳಿಗೆ ಎಲ್ಲೂ ಅಡೆತಡೆ ಇರದಿದ್ದರಿಂದ ೧೦ ಮೀಟರ್ ಎತ್ತರದ ಅಲೆಗಳು ೭೦೦ ಕಿ.ಮೀ. ವೇಗದಲ್ಲಿ ಗಮಿಸುತ್ತ ನಮ್ಮ ಪೂರ್ವ ಕರಾವಳಿಯನ್ನು ಕೊಚ್ಚಿ ರಣರಂಗಮಾಡಿದವು.

ಪೆಸಿಫಿಕ್ ಸಾಗರದ ಅಂಚಿನಲ್ಲಿ ಎಂದರೆ ದಕ್ಷಿಣ ಅಮೆರಿಕ, ಉತ್ತರ ಅಮೆರಿಕಗಳ ಪಶ್ಚಿಮದ ಅಂಚು ಹಾಯ್ದಂತೆ ಜಪಾನ್, ಫಿಲಿಪ್ಪಿನ್ಸ್ ದ್ವೀಪಗಳೂ ಸೇರಿದಂತೆ ಇಡೀ ಭಾಗವನ್ನು 'ಪೆಸಿಫಿಕ್ ಬೆಂಕಿಯ ವರ್ತುಲ' ಎಂದೇ ಕರೆಯುತ್ತಾರೆ. ಏಕೆಂದರೆ ಅಲ್ಲಿಯೂ ದೊಡ್ಡ ಫಲಕವೊಂದು ಅದರ ಅಂಚಿನುದ್ದಕ್ಕೂ ಜ್ವಾಲಾಮುಖಿಗಳನ್ನು ಏಳಿಸುತ್ತಿದೆ, ಭೂಕಂಪನಗಳನ್ನು ಉಂಟುಮಾಡುತ್ತಿದೆ. ಅದನ್ನು ಸುನಾಮಿಯ ತವರು ಎನ್ನುತ್ತಾರೆ. ೧೯೬೮ರಲ್ಲಿ ಪೆಸಿಫಿಕ್ ಅಂಚಿನಲ್ಲಿರುವ ೨೬ ದೇಶಗಳು ಸುನಾಮಿ ಮುನ್ಸೂಚನೆಗೆ ನೆರವು ಪಡೆಯಲು ಒಂದು ಕೂಟವನ್ನು ಸ್ಥಾಪಿಸಿಕೊಂಡವು. 'ಪೆಸಿಫಿಕ್ ಸಾಗರದ ಸುನಾಮಿ ಎಚ್ಚರಿಕೆಯ ಕೇಂದ್ರ' – ಇದು ಹವಾಯಿ ದ್ವೀಪದ ಹೊನೊಲುಲು ಎಂಬಲ್ಲಿದೆ. ಇನ್ನೊಂದು 'ಅಲಾಸ್ಕ ಸುನಾಮಿ ಎಚ್ಚರಿಕೆಯ ಕೇಂದ್ರ' – ಇದು ಅಲಾಸ್ಕದ ಪಾಮರ್ ಎಂಬಲ್ಲಿದೆ. ಅಲಾಸ್ಕ, ಬ್ರಿಟಿಷ್ ಕೊಲಂಬಿಯ, ವಾಷಿಂಗ್‌ಟನ್, ಒರೆಗಾನ್ ಮತ್ತು ಕ್ಯಾಲಿಫೋರ್ನಿಯ ಭಾಗದಲ್ಲಿ ಸುನಾಮಿ ಮುನ್ಸೂಚನೆ ಕೊಡಲು ಇಲ್ಲಿ ಸೂಕ್ತ ವ್ಯವಸ್ಥೆ ಕಲ್ಪಿಸಲಾಗಿದೆ. ಸುನಾಮಿ ಹುಟ್ಟಲು ಕಾರಣವಾದ ಭೂಕಂಪನಗಳು ಸಾಗರದ ಈ ಭಾಗದಲ್ಲಾದರೆ ಅದನ್ನು ದಾಖಲಿಸಲು ಭೂಕಂಪನ ಮಾಪಕದ ವಿಶೇಷ ಜಾಲವನ್ನೇ ಅಲ್ಲಿ ಸ್ಥಾಪಿಸಲಾಗಿದೆ. ಪೆಸಿಫಿಕ್ ಸಮುದ್ರ ತಳದಲ್ಲಿ ಚಿಲಿ ತೀರಕ್ಕೆ ಹೊಂದಿಕೊಂಡಂತೆ ಹಾಗೂ ಜಪಾನ್ ದ್ವೀಪಕ್ಕೆ ಹೊಂದಿಕೊಂಡಂತೆ ಒಟ್ಟು ೧೫ ಸುನಾಮಿ ಮಾಪಕಗಳನ್ನು ಅಲ್ಲಿ ಇರಿಸಿದ್ದಾರೆ. ಸಾಗರ ತಳದಲ್ಲಿ ಕೆಲವೇ ಮಿಲಿಮೀಟರ್‌ಗಳಷ್ಟು ಬದಲಾವಣೆಯಾದರೂ ಅವು ದಾಖಲೆ ಮಾಡಿಕೊಳ್ಳುತ್ತವೆ, ಜೊತೆಗೆ ಅಲೆಗಳ ಮೇಲಿರಿಸಿರುವ ತೇಲು ಬುರುಡೆಗಳಿಗೆ ಅವು ಸಂಜ್ಞೆ ಕಳಿಸುತ್ತವೆ. ಇವನ್ನು ಟ್ರಾನ್ಸ್‌ಮಿಟರ್‌ಗೆ ಸಂಪರ್ಕಿಸಲಾಗಿದೆ. ಅಲ್ಲಿಂದ ಮಾಹಿತಿ ಉಪಗ್ರಹಗಳಿಗೆ ರವಾನಿಸಲಾಗುತ್ತದೆ. ಅಲಾಸ್ಕ ಹಾಗೂ ಹೊನೊಲುಲು ಕೇಂದ್ರಗಳು ಇದನ್ನು ಗ್ರಹಿಸಿ ಸದಸ್ಯ ರಾಷ್ಟ್ರಗಳಿಗೆ ಎಚ್ಚರಿಕೆಯನ್ನು ನೀಡುತ್ತವೆ. ಸಾಗರ ತಳದಲ್ಲಾದ ಪ್ರತಿ ೭ ಪರಿಮಾಣದ ಭೂಕಂಪನವನ್ನು ಅಪಾಯಕಾರಿ ಎಂದೇ ಪರಿಗಣಿಸಿ ಅದರ ಮೇಲೆ ಸಂಪೂರ್ಣ ನಿಗಾ ಇಟ್ಟು ಸುನಾಮಿಯ ಮುನ್ಸೂಚನೆಯನ್ನು ಕೊಡಲಾಗುತ್ತದೆ. ಅಲೆಗಳ ಮೇಲಿಟ್ಟಿರುವ ಗೇಜ್‌ಗಳಿಗೆ ಮೊದಲ ಅಲೆ ಬಡಿಯುತ್ತಲೇ ತೀರ ಪ್ರದೇಶಗಳನ್ನು ಜನಸಂದಣಿಯಿಂದ ತೆರವು ಮಾಡಲಾಗುತ್ತದೆ. ಇದಕ್ಕಾಗಿಯೇ ಪ್ರತ್ಯೇಕವಾಗಿ ರೇಡಿಯೋ ಸಂಪರ್ಕ ಜಾಲವಿದೆ. ಚಿಲಿ ಬಳಿಯಲ್ಲೇ ಬಹುತೇಕ ಸುನಾಮಿಗಳು

## ಇಂಡೋನೇಷ್ಯ ಸುನಾಮಿ ಎಷ್ಟು ದೈತ್ಯ ?

ಇಂಡೋನೇಷ್ಯದ ಸುನಾಮಿ ಭಾರತ, ಶ್ರೀಲಂಕಾ, ಥೈಲೆಂಡ್ ಮತ್ತು ಇಂಡೋನೇಷ್ಯಗಳಲ್ಲಿ ಮಾಡಿರುವ ಹಾನಿಯನ್ನು ಆಧರಿಸಿ, ಅದರ ಸ್ವರೂಪವನ್ನು ತಜ್ಞರು ಲೆಕ್ಕಹಾಕಿದ್ದಾರೆ. ಈ ಶತಮಾನದ ಅತಿ ದೊಡ್ಡ ಸುನಾಮಿ ಎಂಬ ಅಪಖ್ಯಾತಿ ಇದಕ್ಕಿದೆ. ಭಾರತದ ಪ್ರಮುಖ ಭೂಕಂಪನ ತಜ್ಞರಲ್ಲಿ ಒಬ್ಬರಾದ ಜಿ.ಜಿ. ನೇಗಿ ಎಂಬುವರು ಮಾಡಿರುವ ಲೆಕ್ಕಾಚಾರದ ಪ್ರಕಾರ ಡಿಸೆಂಬರ್ ೨೬ರ ಬೆಳಗ್ಗೆ ೬.೨೯ರಲ್ಲಾದ ಭೂಕಂಪನದಿಂದ ಹುಟ್ಟಿದ ಸುನಾಮಿ ಎರಡನೇ ಮಹಾಯುದ್ಧದಲ್ಲಿ ಅಮೆರಿಕ ಜಪಾನಿನ ಹಿರೋಷಿಮದ ಮೇಲೆ ಹಾಕಿದ ಪರಮಾಣು ಬಾಂಬಿಗಿಂತ ೩೫೦ ಪಟ್ಟು ಶಕ್ತಿಶಾಲಿಯಾಗಿತ್ತು. ಇದರಿಂದ ಬಿಡುಗಡೆಯಾದ ಶಕ್ತಿ ೫ ಮೆಗಾ ಟನ್ನುಗಳಷ್ಟು. ಹಿರೋಷಿಮದ ಮೇಲೆ ಹಾಕಿದ ಬಾಂಬು ೧೫ ಕಿಲೋ ಟನ್ನುಗಳಷ್ಟು ಶಕ್ತಿಯುತವಾಗಿತ್ತು. ಇಂಡೋನೇಷ್ಯದ ಸಾಗರ ತಳದಲ್ಲಿ ಹುಟ್ಟಿದ ಭೂಕಂಪನ ೩೨,೦೦೦ ಹೈಡ್ರೋಜನ್ ಬಾಂಬು ಸ್ಫೋಟಕ್ಕೆ ಸಮನಾದ ಶಕ್ತಿಯನ್ನು ಬಿಡುಗಡೆಮಾಡಿತ್ತು (ಒಂದು ಹೈಡ್ರೋಜನ್ ಬಾಂಬಿನಿಂದ ಒಂದು ಮೆಗಾ ಟನ್ ಶಕ್ತಿ ಬಿಡುಗಡೆಯಾಗುತ್ತದೆ ಎಂದು ಪರಿಗಣಿಸಿದರೆ). ಈ ಪ್ರಮಾಣದ ಶಕ್ತಿ ಬಿಡುಗಡೆಯಾದುದರಿಂದಲೇ ೮.೯ ಪರಿಮಾಣದ ಈ ಭೂಕಂಪನದಿಂದ ಎದ್ದ ಅಲೆಗಳು ೨,೫೦೦ ಕಿ.ಮೀ. ದೂರವಿರುವ ಆಫ್ರಿಕ ಖಂಡದ ಪೂರ್ವ ತೀರಕ್ಕೂ ಬಡಿಯಲು ಸಾಧ್ಯವಾಯಿತು. ಭೂಕಂಪನದ ಪರಿಮಾಣವನ್ನು ರಿಕ್ಟರ್ ಮಾಪನದಲ್ಲಿ ಅಳತೆ ಮಾಡಲಾಗುತ್ತದೆ. ಇದರಲ್ಲಿ ಒಂದು ಸಂಖ್ಯೆ ಹೆಚ್ಚಿದ್ದಷ್ಟೂ ಹಿಂದಿನದಕ್ಕಿಂತ ೩.೨ ಪಟ್ಟು ಹೆಚ್ಚು ಶಕ್ತಿ ಬಿಡುಗಡೆಯಾಗುತ್ತದೆ ಎಂದರ್ಥ. ೬ರ ಪರಿಮಾಣದ ಭೂಕಂಪನ ಒಂದು ಮೆಗಾಟನ್ ಶಕ್ತಿ ಬಿಡುಗಡೆ ಮಾಡುತ್ತದೆ ಎಂದಾದರೆ, ೭ರ ಪರಿಮಾಣದ ಭೂಕಂಪನ ೩.೨ ಮೆಗಾಟನ್ನು ಶಕ್ತಿ ಬಿಡುಗಡೆ ಮಾಡುತ್ತದೆ ಎಂದರ್ಥ. ಇಡೀ ಜಗತ್ತು ಈಗ ಲಭ್ಯವಿರುವ ತೈಲ ಮತ್ತು ಕಲ್ಲಿದ್ದಲನ್ನು ಐದು ವರ್ಷಗಳ ಕಾಲ ಉರಿಸಿ ಉತ್ಪಾದಿಸುವಷ್ಟು ಪ್ರಮಾಣದ ಶಕ್ತಿಯನ್ನು ಇಂಡೋನೇಷ್ಯದ ಭೂಕಂಪನ ಕೆಲವೇ ಸೆಕೆಂಡುಗಳಲ್ಲಿ ಬಿಡುಗಡೆಮಾಡಿದೆ.

ಹುಟ್ಟುವುದರಿಂದ ಅವು ಹವಾಯಿ ದ್ವೀಪ ತಲಪುವ ಹೊತ್ತಿಗೆ ಸುಮಾರು ೧೪ ಗಂಟೆಗಳೇ ಬೇಕು. ಮುನ್ನೆಚ್ಚರಿಕೆ ತೆಗೆದುಕೊಳ್ಳಲು ಇದು ಅತ್ಯಂತ ಬಿಡುವು. ಹೀಗಾಗಿ ಸುನಾಮಿ ಎಚ್ಚರಿಕೆಯ ಕೇಂದ್ರಗಳು ಕೊಡುವ ಬಹುತೇಕ ಮುನ್ಸೂಚನೆಗಳು ಪೆಸಿಫಿಕ್ ಸಾಗರದ ಅಂಚಿನಲ್ಲಿರುವ ದೇಶಗಳ ಜೀವ ಉಳಿಸಲು ನೆರವಾಗಿವೆ.

**ನಮ್ಮಲ್ಲೇಕೆ ಈ ಸೌಲಭ್ಯವಿಲ್ಲ?**

ಭೂಕಂಪನ, ಅತಿವೃಷ್ಟಿ, ಅನಾವೃಷ್ಟಿ, ಭೂಕುಸಿತ, ಚಂಡಮಾರುತಗಳಷ್ಟೇ ಬಹುವಾಗಿ ನಮ್ಮನ್ನು ಕಾಡಿ ಅವಷ್ಟೇ ನೈಸರ್ಗಿಕ ವಿಕೋಪಗಳೆಂದು ಶತಶತಮಾನಗಳಿಂದ ಸಾರ್ವಜನಿಕರೂ, ತಂತ್ರಜ್ಞರೂ ಭಾವಿಸಿದ್ದರು. ಹಿಂದೆಲ್ಲ ಸುನಾಮಿಗಳು ಅಪ್ಪಳಿಸಿದರೂ ಭಾರತದ ಮಟ್ಟಿಗೆ ಸಾವು ನೋವಿನ ಪ್ರಸಂಗಗಳಾಗಿರಲಿಲ್ಲ. ೧೮೮೩ರಲ್ಲಿ ಇದೇ ಇಂಡೋನೇಷ್ಯದ ಕ್ರಕಟೋವ ಎಂಬ ಜ್ವಾಲಾಮುಖಿ ಸ್ಫೋಟಿಸಿ ३೬ ಮೀಟರ್ ಎತ್ತರದ ಅಲೆಗಳನ್ನು ಏಳಿಸಿತ್ತು. ಆದರೆ ಭಾರತದ ತೀರವನ್ನು ಅಪ್ಪಳಿಸುವಷ್ಟರಲ್ಲಿ ಬಹುತೇಕ ಅವು ದುರ್ಬಲವಾಗಿದ್ದವು. ಪಶ್ಚಿಮ ಭಾಗದಲ್ಲಿ ಪಾಕಿಸ್ತಾನದ ಬಳಿ ೧೯೪೫ರಲ್ಲಿ ಸುನಾಮಿ ಎದ್ದರೂ ಅದೂ ಕೂಡ ಅಷ್ಟೇನೂ ದೊಡ್ಡ ಸುದ್ದಿ ಮಾಡಲಿಲ್ಲ. ಹೀಗಾಗಿ ಭಾರತ ಚಂಡಮಾರುತಕ್ಕೆ ಸಿದ್ಧವಾದಷ್ಟು ಸುನಾಮಿಗೆ ಸಿದ್ಧವಾಗಿರಲಿಲ್ಲ. ವಾಸ್ತವವಾಗಿ ಭಾರತದಲ್ಲಿ ಸುಮಾರು ೨೦೦ ಭೂಕಂಪನ ಮಾಪಕ ಕೇಂದ್ರಗಳನ್ನು ತೆರೆಯಲಾಗಿದೆ. ೧೮೯೮ರಲ್ಲೇ ಕಲ್ಕತ್ತಾದ ಆಲಿಪುರದಲ್ಲಿ, ಅದೇ ವರ್ಷ ಮಹಾರಾಷ್ಟ್ರದ ಕೊಲಾಬದಲ್ಲಿ, ಚೆನ್ನೈನಲ್ಲಿ ಅನಂತರ ಮೇಘಾಲಯದ ಷಿಲ್ಲಾಂಗ್‌ನಲ್ಲಿ ಭೂಕಂಪನ ಮಾಪಕ ಕೇಂದ್ರಗಳನ್ನು ಸ್ಥಾಪಿಸಲಾಯಿತು. ೧೯೨೨ರಲ್ಲಿ ಉತ್ತರ ಪ್ರದೇಶದ ಆಗ್ರಾ ಎಂಬಲ್ಲಿ, ಇತ್ತ ದಕ್ಷಿಣ ಭಾರತದಲ್ಲಿ ಹೈದರಾಬಾದ್, ಕೊಡೈಕೆನಾಲ್‌ನಲ್ಲಿ ತಲಾ ಒಂದರಂತೆ ಮತ್ತು ೧೯೬೫ರಲ್ಲಿ ಗೌರಿಬಿದನೂರಿನಲ್ಲಿ ಒಂದು ಭೂಕಂಪನ ಮಾಪಕವನ್ನು ಸ್ಥಾಪಿಸಲಾಯಿತು. ಹಿಮಾಲಯದಲ್ಲಷ್ಟೇ ಅಲ್ಲ, ಅಣೆಕಟ್ಟು ಪ್ರದೇಶದಲ್ಲೂ ಆಗುವ ಭೂಕಂಪನವನ್ನು ದಾಖಲಿಸಲು ನಮ್ಮ ಭೂಕಂಪನ ಮಾಪಕ ಕೇಂದ್ರಗಳು ಸಮರ್ಥವಾಗಿವೆ. ಗೌರಿಬಿದನೂರಿನಲ್ಲಿ ಇರುವ ಕೇಂದ್ರ ವಾಸ್ತವವಾಗಿ ಪರಮಾಣು ಬಾಂಬು ಸ್ಫೋಟನೆಯಾದರೆ ಅದನ್ನು ದಾಖಲಿಸುವ ಉದ್ದೇಶದಿಂದಲೇ ಸ್ಥಾಪಿತವಾಯಿತು. ನಮ್ಮ ದೇಶದ ಬಹುತೇಕ ಭೂಕಂಪನ ಮಾಪಕ ಕೇಂದ್ರಗಳನ್ನು ಪವನ ವಿಜ್ಞಾನ ಇಲಾಖೆ ನಿರ್ವಹಿಸುತ್ತಿದೆ. ಡಿಸೆಂಬರ್ ೨೬ರ ಬೆಳಗ್ಗೆ ೬.೨೯ಕ್ಕೆ ಇಂಡೋನೇಷ್ಯದ ಬಳಿ ಆದ ಭೂಕಂಪನವನ್ನು ನಮ್ಮ ದೇಶದ ಭೂಕಂಪನ ಮಾಪಕಗಳು ದಾಖಲಿಸಿವೆ. ಆದರೆ ಅದು ಸುನಾಮಿ ಏಳಿಸುತ್ತದೆ ಎಂದು ಮನಗಾಣಲಾಗಲಿಲ್ಲ. ವಾಸ್ತವವಾಗಿ ೮.೯ ಪರಿಮಾಣದ ಭೂಕಂಪನ ಸಾಗರ ತಳದಲ್ಲಾದರೆ ಇಂಥ ದೊಡ್ಡ ದುರಂತ ಸಂಭವಿಸುತ್ತದೆಂಬ ಸರಳ ಲೆಕ್ಕಾಚಾರವನ್ನು ನಮ್ಮ ತಂತ್ರಜ್ಞರು ಮಾಡಲಿಲ್ಲ. ಭೂಕಂಪನವಾದ ನಂತರ ಸುನಾಮಿ ಅಲೆಗಳೆದ್ದು ನಮ್ಮ ಕಡಲ ತೀರ ಬಡಿಯಲು ಮೂರು ಗಂಟೆಯ ಕಾಲ ತೆಗೆದುಕೊಂಡಿದೆ. ಎಚ್ಚರಿಕೆ ತೆಗೆದುಕೊಳ್ಳಲು ಸಾಕಷ್ಟು ಅವಕಾಶವಿತ್ತು.

ಸುನಾಮಿ ಹುಟ್ಟುವ ಸ್ಥಳದಲ್ಲಿ ಅವೇನೂ ಪ್ರಾರಂಭದಲ್ಲೇ ದೊಡ್ಡ ಅಲೆಗಳಾಗಿ ಹುಟ್ಟುವುದಿಲ್ಲ. ಕೆಲವೆಡೆ ಎರಡು ಅಥವಾ ಮೂರು ಮೀಟರು ಎತ್ತರವಿರಬಹುದು ಅಷ್ಟೇ. ಸಾಗರದಲ್ಲಿ ನಿತ್ಯ ಗಾಳಿ ಬೀಸಿದಾಗ ಹುಟ್ಟುವ ಅಲೆಗಳು ಕೆಲವೊಮ್ಮೆ ಇಷ್ಟೇ ಎತ್ತರವಿರುತ್ತವೆ. ಹಾಗಾಗಿ ಇವು ಹೆಚ್ಚೇನೂ ಪ್ರಕಟವಾಗುವುದಿಲ್ಲ. ಅಲ್ಲಿ ಹಡಗುಗಳು ಹಾದುಹೋದರೂ ಅಲುಗಾಡಿದ ಅನುಭವವೇನೂ ಆಗುವುದಿಲ್ಲ. ಸಾಗರ ಆಳವಿದ್ದಷ್ಟೂ ಅಲೆಗಳ ವೈಶಾಲ್ಯ ಹೆಚ್ಚುತ್ತದೆ. ಗಂಟೆಗೆ ೭೦೦ ಕಿ.ಮೀ. ವೇಗದಲ್ಲಿ ಅಲೆಗಳು ಚಲಿಸಲು ಸಾಧ್ಯವಾಗುತ್ತದೆ. ತೀರ ಪ್ರದೇಶದತ್ತ ಬಂದಂತೆ ಅವುಗಳ ವೇಗ ಕುಂದುತ್ತದೆ. ನೆಲದೊಡನೆ ಘರ್ಷಿಸುತ್ತವೆ. ಹೀಗಾಗಿ ಅಲೆಗಳ ಎತ್ತರ ಏರುತ್ತದೆ. ನಮ್ಮಲ್ಲೂ ಇಸ್ರೋ ಸಂಸ್ಥೆ ಉಡಾಯಿಸಿರುವ ದೂರಗ್ರಾಹಿ ಉಪಗ್ರಹಗಳು ಈಗಲೂ ಸುತ್ತುತ್ತಿವೆ. ಸಮುದ್ರದ ಮೇಲಿನ ಭೌತಬದಲಾವಣೆ, ಉಷ್ಣತೆ ಮುಂತಾದವನ್ನು ಇವು ಗ್ರಹಿಸುತ್ತವೇ ವಿನಾ ಸುನಾಮಿ ಅಲೆಗಳನ್ನು ಗುರುತಿಸುವ ಸಾಮರ್ಥ್ಯ ಇವಕ್ಕಿಲ್ಲ. ಹೀಗಾಗಿ ಸುಮಾತ್ರದ ಸುನಾಮಿ ಅಲೆಗಳು ನಮ್ಮ ಉಪಗ್ರಹಗಳ ಕಣ್ಣನ್ನೂ ತಪ್ಪಿಸಿದವು. ಪ್ರತಿ ದಿವಸವೂ ೧೨ ಗಂಟೆಗಳ ಅಂತರದಲ್ಲಿ ಚಂದ್ರನ ಗುರುತ್ವಾಕರ್ಷಣೆಯಿಂದ ಹಾಗೂ ಭೂಮಿ ಗಿರಿಕಿ ಹೊಡೆಯುವಾಗ ಭೂಮಿಯ ಕೇಂದ್ರಾಪಗಾಮಿ ಬಲದಿಂದ ಸಾಗರದಲ್ಲಿ ಅಲೆಗಳೇಳುತವೆ. ಚಂದ್ರ ಮತ್ತು ಸೂರ್ಯನ ಸಂಯುಕ್ತ ಗುರುತ್ವಾಕರ್ಷಣೆ ಸಾಗರದಲ್ಲಿ ಗರಿಷ್ಠ ಭರತವನ್ನು ಏಳಿಸುತ್ತದೆ. ಅಂಥ ಅಲೆಗಳು ೨೫ ಮೀಟರ್ ಎತ್ತರವಿರಲೂ ಸಾಧ್ಯ. ಹಾಗಿದ್ದಲ್ಲಿ ಈ ಅಲೆಗಳೂ ಕೂಡ ಸುನಾಮಿ ಅಲೆಗಳಂತೆ ಏಕೆ ಎರಗುವುದಿಲ್ಲ? ಏಕೆಂದರೆ ಈ ಅಲೆಗಳು ೭೦೦ ಕಿ.ಮೀ. ವೇಗದಲ್ಲಿ ಗಮಿಸುವುದಿಲ್ಲ. ಅಲ್ಲದೆ ಶೃಂಗದಿಂದ ಶೃಂಗಕ್ಕೆ ಇವುಗಳ ಅಲೆಗಳ ಉದ್ದ ಕೆಲವು ನೂರು ಮೀ.ಗಳಿರಬಹುದು ಅಷ್ಟೆ. ಆದರೆ ಸುನಾಮಿ ಅಲೆಗಳು ಶೃಂಗದಿಂದ ಶೃಂಗಕ್ಕೆ ೧೦೦ ರಿಂದ ೫೦೦ ಕಿ.ಮೀ. ಉದ್ದವಿರುತ್ತವೆ. ಒಂದರ ಹಿಂದೆ ಒಂದರಂತೆ ಸಾವಿರಾರು ಕಿ.ಮೀ. ಜಾಗ ಆಕ್ರಮಿಸಿ, ಕಡಲ ಅಂಚಿನ ರಚನೆಯನ್ನು ಆಧರಿಸಿ ಗರಿಷ್ಠ ಹಾನಿ ಮಾಡುತ್ತವೆ. ಸುನಾಮಿ ಎಂದರೆ ಜಪಾನೀ ಭಾಷೆಯಲ್ಲಿ 'ಬಂದರಿನ ಅಲೆ' ಎಂದರ್ಥ. ಪೆಸಿಫಿಕ್ ಸಾಗರದಲ್ಲಿ ಏಳುವ ಶೇ.೨೦ ಭಾಗ ಸುನಾಮಿಗಳು ಜಪಾನ್ ಬಳಿಯೇ ಹುಟ್ಟುತ್ತವೆ. ನಮ್ಮ ತಂತ್ರಜ್ಞರು ಇನ್ನಾದರೂ ಎಚ್ಚರಗೊಳ್ಳಬೇಕಾಗಿದೆ. ಈ ನಿಟ್ಟಿನಲ್ಲಿ ಈಗ ಹಿಂದೂ ಮಹಾಸಾಗರದಲ್ಲಿ ವಿಶೇಷವಾಗಿ ಪೂರ್ವ ಕರಾವಳಿಯ ಅಂಚಿನಲ್ಲಿ ಸುನಾಮಿ ಮುನ್ಸೂಚನೆ ಪಡೆಯಲು ಎಲ್ಲ ಆಧುನಿಕ ತಂತ್ರಜ್ಞಾನಗಳನ್ನು ಅಳವಡಿಸಿಕೊಳ್ಳಬೇಕಾಗಿದೆ. ಸುನಾಮಿ ಮೀಟರಿನ ಬೆಲೆ ಪೆಸಿಫಿಕ್ ಸುನಾಮಿ ಎಚ್ಚರಿಕೆ ಕೇಂದ್ರ ವರದಿ ಮಾಡಿರುವಂತೆ ತಲಾ ೨,೫೦,೦೦೦ ಡಾಲರುಗಳಾಗುತ್ತವೆ. ಭಾರತಕ್ಕೆ ಸುನಾಮಿಯಿಂದಾಗಿರುವ ನಷ್ಟದ ಪ್ರಮಾಣ ೫,೩೨೨ ಸಾವಿರ ಕೋಟಿ ರೂಪಾಯಿ! ಪರಿಸ್ಥಿತಿಯ ಗಂಭೀರತೆಗೆ ಈ ಅಂಕಿ ಅಂಶಗಳೇ ಸಾಕು.

**ಟಿ. ಆರ್. ಅನಂತರಾಮು**
ನಂ. ೫೩೪, ೭೦ನೇ ಅಡ್ಡರಸ್ತೆ ೧೪ನೇ ಮುಖ್ಯರಸ್ತೆ
ಕುಮಾರಸ್ವಾಮಿ ಬಡಾವಣೆ, ೧ನೇ ಹಂತ, ಬೆಂಗಳೂರು - ೭೮

# ಕೃಷ್ಣ ಸ್ವಪ್ನ

ತೆಲುಗು ಮೂಲ : ವಿವಿನ ಮೂರ್ತಿ
ಕನ್ನಡ ಅನುವಾದ : ನಗರಗೆರೆ ರಮೇಶ್

ಅಮೆರಿಕದ ಅಧ್ಯಕ್ಷನ ಮಲಗುವ ಕೋಣೆ. ರಾತ್ರಿ ಮೂರು ಘಂಟೆಯಾಗಿತ್ತು; ಎಂಭತ್ತು ವರ್ಷದ ಮುದುಕನಾದ ಅಧ್ಯಕ್ಷ ನಿದ್ದೆ ಮಾತ್ರೆ ನುಂಗಿದ್ದರೂ ನಿದ್ದೆ ಹತ್ತದೆ ಹಾಸಿಗೆಯ ಮೇಲೆ ಹೊರಳಾಡುತ್ತಲೇ ಇದ್ದ.

ಇದ್ದಕ್ಕಿದ್ದ ಹಾಗೆ ಆ ಕೋಣೆಯ ಒಳಕ್ಕೆ ಹೊಸ ಬೆಳಕೊಂದು ತೂರಿಕೊಂಡು ಬಂತು. ತಣ್ಣನೆಯ ಗಾಳಿ ಬೀಸತೊಡಗಿತು. ಅಧ್ಯಕ್ಷ ಕಣ್ಣು ಬಿಟ್ಟು ನೋಡಿದ. ಅವನ ಮುಂದೆ ಒಂದು ಹೊಸ ಆಕಾರ: ಆ ಬೆಳಕೇ ಹೊಸ ರೂಪ ತಾಳಿತೇನೋ ಎಂಬಂತೆ. ತಂಗಾಳಿ ಆ ಆಕಾರದ ಮುಖದ ಮೇಲಿನ ಮಂದಹಾಸವಾಯಿತು. ತಲೆಯ ಮೇಲೆ ನವಿಲುಗರಿ, ಮೈ ಮೇಲೆ ಪೀತಾಂಬರ, ಕೈಯಲ್ಲಿ ಕೊಳಲು, ಎದೆಯ ಮೇಲೆ ಕೌಸ್ತುಭ, ಕತ್ತಿನಲ್ಲಿ ವೈಜಯಂತಿ, ಮೂಗಿನ ತುದಿಯಲ್ಲಿ ನವಮೌಕ್ತಿಕ.

ಈ ವಿಚಿತ್ರ ಆಕಾರವನ್ನು ಕಂಡ ಅಧ್ಯಕ್ಷನ ನಾಲಿಗೆ ಒಣಗಿಬಂತು, ಮಾತೇ ಹೊರಡಲಿಲ್ಲ. ಆದರೆ ಆ ಮಂದಹಾಸ ಮಾತ್ರ ಅವನ ಹೃದಯವನ್ನು ತಟ್ಟಿತು. ಅವನ ಎಂಭತ್ತು ವರ್ಷಗಳ ಆ ದೇಹ ಎಷ್ಟೇ ಔಷಧಿಗಳನ್ನ ಬಳಸಿದರೂ ಕಾಲನ ತುಳಿತಕ್ಕೆ ಸಿಕ್ಕಿತ್ತು; ಅವನ ಹೃದಯ ಸುಖದುಃಖಗಳಿಗೆ ಸರಿಯಾಗಿ ಸ್ಪಂದಿಸುವುದನ್ನೇ ಮರೆತಿತ್ತು; ಅವನ ಬುದ್ಧಿ ಆರೋಗ್ಯಕರ ಚಿಂತನೆ ಎಂದರೇನೆಂಬುದನ್ನು ಮರೆತಿತ್ತು.

ಆದರೂ ಆ ಮಂದಹಾಸ ಅವನಲ್ಲಿ ಏನೋ ಒಂದು ಬಗೆಯ ಆತ್ಮೀಯ ಭಾವನೆಯನ್ನುಂಟುಮಾಡಿತು. ಆ ಆಕಾರ ತನ್ನ ಕಡೆ ಮೆಚ್ಚುಗೆಯ ದೃಷ್ಟಿಯನ್ನು ಬೀರುತ್ತಿದ್ದುದನ್ನು ಕಂಡುಕೊಂಡ. ತನ್ನ ಬುದ್ಧಿ ಮತ್ತು ದೇಹಗಳನ್ನ ವಶಕ್ಕೆ ತೆಗೆದುಕೊಳ್ಳಲು ಯತ್ನಿಸುತ್ತಾ ಸ್ವಲ್ಪ ಅಧೈರ್ಯದಿಂದಲೇ ಕೇಳಿದ :

''ಯಾರು ನೀನು ?''

''ನಾನು ಕೃಷ್ಣ.''

''ಗೊತ್ತಾಗಲಿಲ್ಲ''

''ನಾಳೆ ಭಾರತದ ಪ್ರಧಾನಿಯ ಜತೆ ಮಾತನಾಡೋದಕ್ಕೆ ತಯಾರಾಗ್ತಿದೀಯಲ್ಲ ಈ ಪುಸ್ತಕ ಹಿಡಕೊಂಡು, ಈ ಭಗವದ್ಗೀತೇನ, ಅದರಲ್ಲಿರೋ ಭಗವಂತ ನಾನೇ !''

''ಇಲ್ಲಿಗೆ ಹೇಗೆ ಬಂದೆ ?''

''ನಾನು ಸರ್ವಾಂತರ್ಯಾಮಿ !''

''ಬಂದ ಕಾರಣ ?''

''ನಿನ್ನನ್ನ ಅಭಿನಂದಿಸಬೇಕು ಅಂತ ಬಂದೆ''

''ಯಾತಕ್ಕಾಗಿ ?''

''ನನ್ನ ಕನಸಿಗೆ ರೂಪ ಕೊಟ್ಟವ ನೀನು.''

''ನಿನ್ನ ಕನಸೇ ? ಯಾವುದದು ?''

''ನನ್ನದು ನಾಗರಿಕತೆಯ ಕನಸು - ಸೇತಾರರ, ಜಯಶಾಲಿಗಳ ಕನಸು.''

''ನಿನ್ನ ಕನಸನ್ನು ನಾನು ಸಾಕಾರಗೊಳಿಸಿದ್ದೀನೇನು ? ಅರ್ಥವಾಗಲಿಲ್ಲ, ಸ್ವಲ್ಪ ಬಿಡಿಸಿ ಹೇಳು.''

ಕೃಷ್ಣನು ನಗುತ್ತಲೇ ತನ್ನ ಮಾತು ಮುಂದುವರೆಸಿದ. ಆ ನಗುವಿನಲ್ಲಿ ಮೆಚ್ಚುಗೆ ಇತ್ತು, ಬುದ್ಧಿ ಇತ್ತು, ಬುದ್ಧಿಯನ್ನ ಜಾಗೃತಗೊಳಿಸುವ ಯತ್ನವಿತ್ತು.

''ನೀನು ಈಗ ಜಗತ್ತಿನಲ್ಲಿ ಏಕಮೇವಾದ್ವಿತೀಯ ತಾನೆ !''

''ಹೌದು ! ಈಗಲೇ ಅಲ್ಲ, ಯಾವಾಗಲೇ ಆಗ್ಲಿ, ಜಗತ್ತಿನಲ್ಲಿ ಒಬ್ಬ ಮಾತ್ರ ಜಯಶಾಲಿ ಇರೋದು ಸಾಧ್ಯ !''

''ಇರಾಕ್‌ನ ಸೋಲಿಸಿದ್ದೀ, ಹೌದಾ !''

''ಅದೆಷ್ಟರ ಕೆಲಸ ? ನಮ್ಮ ಹುಡುಗರು ವಿಮಾನಗಳಲ್ಲಿ ಪಿಕ್‌ನಿಕ್‌ಗೆ ಹೋದ ಹಾಗೆ ಹೋಗಿ ಬಾಂಬುಗಳನ್ನ ಉದುರಿಸಿ, ಆ ಸದ್ದಾಮ್‌ನನ್ನ ಹೆದರಿಸಿ ಬಂದಿದ್ದಾರೆ.''

''ನೀನು ಎಂದಾದ್ರೂ ಯುದ್ಧ ಭೂಮಿಗೆ ಹೋಗಿದ್ದೀಯೇನು ?''

''ಇಲ್ಲ''

''ಯಾರಾದರೂ ನಿನ್ನನ್ನ ಎದುರಿಸಿದರೆ ಅವರ ಜತೆ ಹೋರಾಡ್ತೀಯಾ ?''

''ನನ್ನಿಂದಾಗೋಲ್ಲ !''

''ನಿನ್ನನ್ನ ನೀನು ರಕ್ಷಿಸಿಕೊಳ್ತೀಯಾ ?''

''ಆ ಅಗತ್ಯಾನೇ ಬರೋದಿಲ್ಲ. ನನ್ನ ರಕ್ಷಣೆಗೆ ಎಷ್ಟು ಸೈನ್ಯ ಇದೆ ಅನ್ನೋದು ನಿನಗೆ ಗೊತ್ತಿಲ್ಲ !''

ಈ ಮಾತನ್ನ ಒಪ್ಪಿದಂತೆ ಕೃಷ್ಣ ತಲೆಯಾಡಿಸಿದ.

''ನಮ್ಮ ಕಾಲದಲ್ಲಿ ಹೀಗಿರಲಿಲ್ಲ, ನಮ್ಮನ್ನ ನಾವೇ ಕಾಪಾಡಿಕೋಬೇಕಾಗಿತ್ತು. ಬೇರೆಯವರ ಮೇಲಿನ ಯುದ್ಧಕ್ಕೂ ನಾಯಕರಾದ ನಾವೇ ಹೋಗಬೇಕಾಗಿತ್ತು. ಇದೆಲ್ಲಕ್ಕೂ ಮೈಯಲ್ಲಿ ತಾಕತ್ತು ಇರಬೇಕಾಗಿತ್ತು. ಅಷ್ಟೇ ಅಲ್ಲ, ನಮ್ಮ ರಕ್ಷಣೆಗೆ ಬೇಕಾದ ವೇದಾಂತ, ಸಿದ್ಧಾಂತ ಎಲ್ಲಾನೂ ನಾವೇ ಸಿದ್ಧಪಡಿಸಿಕೋಬೇಕಾಗಿತ್ತು.''

''ಅರ್ಥ ಆಗ್ಲಿಲ್ಲ ಪ್ರಭೂ –''

* * *

''ಅಗೋ ಅಲ್ಲಿ ಕಾಣ್ತಿದೆಯಲ್ಲಾ, ಅದೇ ಖಾಂಡವ ವನ !''

''ಆಹಾ ! ಎಷ್ಟು ಸುಂದರವಾಗಿದೆ ! ದಟ್ಟವಾದ ಮರಗಳು, ಎಲ್ಲಿ ನೋಡಿದ್ರೂ ಹಸಿರು, ತಣ್ಣನೆ ವಾತಾವರಣ, ಕೊಳಗಳು, ಸ್ವೇಚ್ಛೆಯಾಗಿ ತಿರುಗಾಡ್ತಿರೋ ಪ್ರಾಣಿಗಳು, ನಿರ್ಭಯವಾಗಿ ಹಾರಾಡೋ ಹಕ್ಕಿಗಳು. ಅರೆ, ಅವರೆಲ್ಲಾ ಯಾರು ? ದೊಡ್ಡ ಹುತ್ತಗಳಿಂದ ಆಚೆಗೆ ಬರ್ತಾ ಇದಾರಲ್ಲಾ, ಆ ಜನ !''

''ಅವರು ನಾಗರಗಳು. ಎಷ್ಟೋ ಕಾಲದಿಂದ ಈ ಕಾಡಿನಲ್ಲೇ ಬದುಕಿದ್ದಾರೆ.''





''ಅಂದ್ರೆ ? ಅಬಾರಿಜಿನ್ಸಾ ?''

''ಹಾಗಂದ್ರೇನು ?''

''ಅನಾಗರಿಕರು. ಇಂಥಾ ಜನ ಎಲ್ಲಿಂದ ಬಂದರೋ, ಯಾವಾಗ ಬಂದರೋ ತಿಳೀದಿದ್ರೆ ಅವರನ್ನ ನಾವು ಅಬಾರಿಜಿನ್ಸ್ ಅಂತ ಕರೀತೀವಿ.''

ಅಧ್ಯಕ್ಷನ ಈ ಮಾತನ್ನ ಕೇಳಿ ಕೃಷ್ಣ ಒಂದು ಸಲ ನಕ್ಕು ಹೇಳತೊಡಗಿದ, ''ನೀವು ನಾಗರಿಕರಲ್ಲಿ ನಾಗರಿಕರು ತಾನೆ! ತುಂಬಾ ಆಕರ್ಷಕವಾದ, ಗೌರವಯುತವಾದ ಪದಗಳನ್ನೇ ಬಳಸ್ತೀರಿ. ಆದರೆ ನೀನು ಹೇಳಿದ್ದು ಮೇಲ್ನೋಟಕ್ಕೆ ಕಾಣೋ ವ್ಯತ್ಯಾಸ ಮಾತ್ರ. ನಿಜವಾದ ವ್ಯತ್ಯಾಸ ಇರೋದು ಆಯುಧಗಳನ್ನ ಬಳಸೋದ್ರಲ್ಲಿ. ಯಾರು ಹೆಚ್ಚು ದೂರದಿಂದ ತನ್ನ ಶತ್ರುವನ್ನ ಕಂಡು ಹಿಡಿದು, ಅವನನ್ನ ನಾಶ ಮಾಡ್ತಾನೋ ಅವನು ಹೆಚ್ಚು ನಾಗರಿಕ. ಅಂಥ ಆಯುಧಗಳನ್ನ ಕಂಡುಹಿಡಿಯೋದರ ಮೇಲೆ ನಿಮ್ಮ ನಾಗರಿಕತೆ ನಿಂತಿದೆ. ಆಗ ನೀನು ಅವರನ್ನ ಹೇಗೆಬೇಕಾದ್ರೂ ಕರೆಯಬಹುದು. ಅನಾಗರಿಕರು, ನರ ರೂಪದ ರಾಕ್ಷಸರು, ನರಮಾಂಸ ಭಕ್ಷಕರು, ಕೋತಿಗಳು, ಕರಡಿಗಳು, ಹಾವುಗಳು, ಗಿಡುಗಗಳು – ಹೀಗೆ ಯಾವುದೇ ಹೆಸರನ್ನಿಟ್ಟು ಕರೆಯಬಹುದು. ಆದರೆ ಮುಖ್ಯವಾದ ವ್ಯತ್ಯಾಸ ಇರೋದು ಮಾತ್ರ ಆಯುಧಗಳ ಬಳಕೆಯಲ್ಲಿ.''

ಅಧ್ಯಕ್ಷನ ಮುಖ ಅರಳಿತು. ''ನಿಜವಾಗಲೂ ನೀನು ದೊಡ್ಡ ಸಿದ್ಧಾಂತಕರ್ತ್ರನೇ ಸರಿ.''

''ಹಾಗೇ ನೋಡ್ತಾ ಇರು. ಆ ಕಾಡಿನಲ್ಲಿ ಏನೇನು ನಡೀತಿದೆ ಅನ್ನೋದನ್ನ ನೋಡು.''

* * *

ಕಾಡೆಲ್ಲಾ ಕದಡಿಹೋಗುತ್ತಿದೆ. ಭುಗಿಲೇಳುತ್ತಿರುವ ಬೆಂಕಿಯ ನಾಲಗೆಯಿಂದ ತಪ್ಪಿಸಿಕೊಳ್ಳಲು ಕಾಡಿನಲ್ಲಿರುವ ಸಮಸ್ತ ಪ್ರಾಣಿಗಳೂ ಶತಪ್ರಯತ್ನ ಮಾಡುತ್ತಿವೆ. ಕೈಗೆ ಸಿಕ್ಕಿದ ಕಲ್ಲು ಬಂಡೆಗಳನ್ನೇ ಬಳಸಿ ಹೋರಾಡುತ್ತಿದ್ದಾರೆ ನಾಗಾಜನ. ಆದರೆ ದೂರದಿಂದ ಬಂದು ತಮ್ಮನ್ನ ತಿವಿಯುತ್ತಿರುವ ಬಾಣಗಳ ಧಾಳಿಗೆ ನಿಲ್ಲಲಾಗುತ್ತಿಲ್ಲ ಅವರಿಗೆ.

ಮರಗಳಿಂದ ಒಣಗಿದ ಕಾಯಿಗಳು ಉದುರುವ ರೀತಿಯಲ್ಲಿ ಕೆಳಗೆ ಬೀಳುತ್ತಿದ್ದಾರೆ ನಾಗಾಗಳು – ಪುರುಷರು, ಸ್ತ್ರೀಯರು, ಮಕ್ಕಳಾದಿಯಾಗಿ ಎಲ್ಲರೂ. ಇವರನ್ನೆಲ್ಲಾ ಹೀಗೆ ಹಾಳುಗೆಡವುತ್ತಿರುವ ಮಹಾವೀರರು ಉಮ್ಮಳಿಸುತ್ತಿರುವ ಉತ್ಸಾಹದಿಂದ ಕೈಗೆ ಸಿಕ್ಕಿದವರ ತಲೆಗಳನ್ನು ತರಿದು ಉರುಳಿಸುತ್ತಿದ್ದಾರೆ.

ಖಾಂಡವದಹನ ಯಾವುದೇ ಅಡೆತಡೆ ಇಲ್ಲದೆ ನಡೆದುಹೋಗುತ್ತಿದೆ. ಮೇಲೇಳುತ್ತಿರುವ ಜ್ವಾಲೆಯ ಬಿಸಿ ಆ ಯೋಧರ ಮೈಯನ್ನೂ ತಟ್ಟುತ್ತಿದೆ. ಹೊಗೆ ಅವರ ಮೂಗು ಕಣ್ಣುಗಳನ್ನು ಒಂದುಮಾಡುತ್ತಿದೆ. ಹೆಣಗಳು ಸುಡುತ್ತಿರುವ ವಾಸನೆ ವಾಕರಿಕೆ ಬರಿಸುತ್ತಿದೆ.

ಆ ಕಾಡಿನ ತುದಿಯಲ್ಲಿ ಒಂದು ಬಂಡೆಯ ಮೇಲೆ ಕುಳಿತುಕೊಂಡು ಅರ್ಜುನ ದಣಿವಾರಿಸಿಕೊಳ್ಳುತ್ತಿದ್ದಾನೆ. ಪಕ್ಕದಲ್ಲಿ ಕೃಷ್ಣ. ತಲೆಗಳನ್ನ ಕಡಿದೂ ಕಡಿದೂ ಅರ್ಜುನನ ಕೈಗಳು ಸೋತುಹೋಗಿವೆ. ಕಾಲುಗಳಲ್ಲಿ ಬಲವೇ ಇಲ್ಲವಾಗಿದೆ. ದೇಹಕ್ಕೆ ವಿಶ್ರಾಂತಿ ಬೇಕು. ಕುಡಿಯಲು ನೀರು ಬೇಕು.

ಕೃಷ್ಣನ ಸ್ಥಿತಿಯೂ ಇದಕ್ಕಿಂತ ಬೇರೆಯಾಗೇನೂ ಇರಲಿಲ್ಲ.

''ಭಾವಾ! ಇಲ್ಲೆಲ್ಲಾದ್ರೂ ನೀರು ಸಿಗುತ್ತೇನೋ ನೋಡೋಣ್ವಾ ?''

''ನಡಿ ನೋಡೋಣ.'' ಕೃಷ್ಣನೂ ಹೊರಟ.

ಕಷ್ಟಪಟ್ಟು ಕಾಲೆಳೆದುಕೊಂಡು ಒಂದು ಝರಿಯ ಹತ್ತಿರ ಬಂದು ನಿಲ್ಲುತ್ತಾರೆ. ಕಲ್ಲು ಬಂಡೆಗಳ ಸಂದಿಗಳಿಂದ ಹರಿಯುತ್ತಿರುವ ನೀರನ್ನು ಕುಡಿಯಲು ಬೊಗಸೆಯಲ್ಲಿ ತುಂಬಿಸಿಕೊಳ್ಳಲು ಬಗ್ಗಿದ ಅರ್ಜುನ ತಕ್ಷಣ ಹಿಂದಕ್ಕೆ ಸರಿದ. ತೇಲಿ ಬರುತ್ತಿರುವ ಹೆಣ ಬಂದು ಅವನ ಕೈಗೆ ಬಡಿದಿತ್ತು. ಮೈ ಜುಮ್ಮೆಂದಿತು ಅರ್ಜುನನಿಗೆ. ಹಾಗೆಯೇ ನೀರಿನ ಕಡೆಗೆ ದಿಟ್ಟಿಸಿ ನೋಡಿದ. ಇನ್ನೂ ಕೆಲವು ಹೆಣಗಳು ಮೇಲಿನಿಂದ ಅವನಿದ್ದೆಡೆಗೆ ತೇಲಿಕೊಂಡು ಬರುತ್ತಿದ್ದುದು ಕಂಡಿತು. ಮುಂದೆ ನೋಡಿದರೆ ಕೆಲವು ಹೆಣಗಳು ಅವನಿಂದ ದೂರ ಹೋಗುತ್ತಿದ್ದದ್ದು ಕಂಡಿತು. ಅಲ್ಲಲ್ಲಿ ದೇಹದ ತುಂಡುಗಳೂ ಕಂಡವು. ಇವೇ ಅಲ್ಲದೆ ಅಲ್ಲಲ್ಲಿ ಬಂಡೆಗಳ ನಡುವೆ ಸಿಕ್ಕಿಹಾಕಿಕೊಂಡ ಹೆಣಗಳು ಇದ್ದಲ್ಲಿಯೇ ಬಂಡೆಗಳಿಗೆ ಅಪ್ಪಳಿಸುತ್ತಿದ್ದವು.

''ಆಗೊಲ್ಲ ಕೃಷ್ಣಾ!... ಈ ನೀರು ಕುಡಿಯಕ್ಕಾಗೊಲ್ಲ''

ಇಬ್ಬರೂ ಒಬ್ಬರ ಮುಖ ಒಬ್ಬರು ನೋಡಿ ಕೊಳ್ಳುತ್ತಾ ನಿಂತರು.

''ಇನ್ನೂ ಸ್ವಲ್ಪ ಮುಂದೆ ಹೋಗೋಣ'' ಕೃಷ್ಣ ಸೂಚಿಸಿದ.

''ಅಲ್ಲಿ ಕೂಡಾ ಇದೇ ನೀರೇ ತಾನೆ !''

ಕೃಷ್ಣ ಉರಿಯುತ್ತಿರುವ ಕಾಡಿನ ಕಡೆ ನೋಟ ಹರಿಸಿದ. ಎಲ್ಲಾದರೂ ಒಂದು ಜೇನುಗೂಡಾದರೂ ಕಾಣುವುದೇನೋ ಎಂದು ನಿಂತಲ್ಲಿಂದಲೇ ಹುಡುಕಿದ. ಸಂಜೆಬಿಸಿಲು ಅಲ್ಲೆಲ್ಲಾ ತುಂಬಿತ್ತು. ಹಸಿರಿನ ಮೇಲೆ ಬೂದಿಯ ಹಾಸಿಗೆ. ಭಯಾನಕ ನಿಶ್ಶಬ್ದ. ಆಗಾಗ ಉರಿಯುತ್ತಿರುವ ಹೆಮ್ಮರಗಳು ಮುರಿದು ಬೀಳುವ ಸದ್ದು. ಯಾವ ವಿಧದ ಪ್ರಾಣಿಯ ಗುರುತೂ ಅಲ್ಲಿರಲಿಲ್ಲ.

''ನಮ್ಮ ಕೆಲಸ ಮುಗಿದ ಹಾಗೇ. ನಡಿ ಹೋಗೋಣ !'' ಕೃಷ್ಣ ಮುಂದೆ ಹೆಜ್ಜೆ ಹಾಕಿದ.

''ಮತ್ತೆ ಬರಬೇಕಾಗುತ್ತೇನು ?'' ಅರ್ಜುನನ ಪ್ರಶ್ನೆ.

''ಬರಲೇಬೇಕಲ್ಲಾ. ಈ ಕಾಡು ಪೂರಾ ಸುಟ್ಟು ಹೋದಮೇಲೆ ನಮ್ಮವರನ್ನೆಲ್ಲ ಇಲ್ಲಿಗೆ ಕರಕೊಂಡು ಬರಬೇಕು. ಇಲ್ಲಿ ಇಂದ್ರಪ್ರಸ್ಥವನ್ನು ಕಟ್ಟಬೇಕು !''

ಅರ್ಜುನ ಬೆಚ್ಚಿಬಿದ್ದ. ಕಾಲಿಗೆ ಏನೋ ಸುತ್ತಿಕೊಂಡ ಹಾಗಾಯಿತು. ಆ ಸ್ಪರ್ಶಕ್ಕೇ ಕೈಯಲ್ಲಿ ಸರಕ್ಕನೆ ಖಡ್ಗ ಸಿದ್ಧವಾಯಿತು.

ತನ್ನ ಕಾಲಿನ ಕಡೆ ನೋಡಿದ. ಅಲ್ಲಿ ಒಂದು ಪುಟ್ಟ ಮಗು, ತನ್ನ ಹಾದಿಗೆ ಅಡ್ಡವಾಗಿ. ಮೈ ತುಂಬೆಲ್ಲಾ ಧೂಳು. ಅದರ ನಡುವೆ ಕಾಣುವ ದೊಡ್ಡ ಹಣೆ. ಒಂದು ವರ್ಷದ ಮಗುವಿರಬಹುದು ಎನಿಸಿತು ಅರ್ಜುನನಿಗೆ. ತನ್ನ ಪುಟ್ಟ ಕೈಗಳಿಂದ ಅರ್ಜುನನ ಕಾಲುಗಳಿಗೆ ಸುತ್ತಿಕೊಳ್ಳಲು ಯತ್ನಿಸುತ್ತಿತ್ತು.

ಅರ್ಜುನನ ಮನಸ್ಸು ಕರಗಿ ನೀರಾಯಿತು.

ಮಗುವಿನ ಮೈ ಬಣ್ಣ ಹಳದಿ, ತಾನು ಗೋಧಿ ಬಣ್ಣದವ. ಅದರದು ಸ್ವಲ್ಪ ದಪ್ಪವೆನಿಸುವ ಮೂಗು. ಪುಟ್ಟ ಕಣ್ಣುಗಳು. ತನಗೂ, ಆ ಮಗುವಿಗೂ ಹೀಗೇ ಹಲವು ವ್ಯತ್ಯಾಸಗಳು. ಆದರೂ ಧೂಳುತುಂಬಿದ, ಹಾಲುಗೆನ್ನೆಯ ಮಗುವಿನ ಮೇಲೆ ಅದೇನೋ ವಾತ್ಸಲ್ಯ. ಮಗುವಿನ ಪುಟಾಣಿ ಕೈಗಳು ತನ್ನನ್ನ ಕರೆಯುತ್ತಿವೆ. ಅದರ ಮುಖದ ಮೇಲೆ ಮುಗ್ಧ ನಗೆ.

ಮಗುವನ್ನು ಎತ್ತಿಕೊಳ್ಳಲು ಕೆಳಕ್ಕೆ ಬಗ್ಗುತ್ತಿದ್ದ ಅರ್ಜುನನ ಬೆನ್ನ ಮೇಲೆ ಚಪ್ಪರಿಸಿದ ಕೃಷ್ಣ.

''ಅರ್ಜುನ ! ಮುಗಿಸಿಬಿಡು.''

ಆ ದನಿಯಲ್ಲಿ ದೃಢತೆ ಇತ್ತು. ಮಾನವ ಸಮುದಾಯವೊಂದರ ಬಗ್ಗೆ ಬದ್ಧತೆ ಇತ್ತು. ಅದರ ಏಳಿಗೆಗಾಗಿ ಬೇಕಿದ್ದ ಕರ್ತವ್ಯ ಪ್ರಜ್ಞೆ ಇತ್ತು.

ಅರ್ಜುನನಿಗೆ ಅರ್ಥವಾಗಲಿಲ್ಲ. ''ಕೃಷ್ಣಾ!'' ಎಂದು ಉದ್ಗರಿಸಲು ಮಾತ್ರ ಸಾಧ್ಯವಾಯಿತು.

''ನಿನಗೆಲ್ಲೋ ಭ್ರಾಂತು. ದೇಹ ಒಂದೇ ರೀತಿ ಇದೆ ಅಂದಮಾತ್ರಕ್ಕೆ ನೀನೂ, ಆ ಮಗು ಒಂದೇ ಅಂತ ಅದು ಹೇಗೆ ಭಾವಿಸ್ತೀಯ ? ಇಬ್ಬರೂ ಹುಟ್ಟಿ, ಇಬ್ಬರೂ ಸಾಯೋದ್ರಿಂದ ನೀನೂ ಹುಲಿ ಒಂದೇ ಆಗ್ತೀರೇನು ? ನೀನು ಈಗ ಅದನ್ನ ಮುಗಿಸದಿದ್ರೆ ಅದು ಮುಂದೆ ನಿನ್ನನ್ನ ತಿಂದುಬಿಡುತ್ತೇ ತಿಳ್ಕೋ !''

ಈ ಮಾತುಗಳಿಂದಲೂ ಅರ್ಜುನನ ಕತ್ತಿ ತನ್ನ ಕೆಲಸವನ್ನ ಮಾಡಲಿಲ್ಲ. ಕೃಷ್ಣ ಅವನ ಬುದ್ಧಿಯ ಒಳಗೆ ತಳ್ಳಲು ಯತ್ನಿಸುತ್ತಿದ್ದ ಚಿಂತನೆ ಅವನೊಳಗಿನ ಮತ್ತೊಂದು ಭಾವನೆಯನ್ನು ಆಚೆಗೆ ಓಡಿಸಲು ಶಕ್ತವಾಗಿರಲಿಲ್ಲ.

''ನಾವು ಬಯಲು ಸೀಮೆಯ ಜನ. ಕಾಡು, ಇಲ್ಲಿನ ಪ್ರಾಣಿಗಳು ನಮಗೆ ದಾರಿ ಮಾಡಿಕೊಟ್ಟು ಅದೃಶ್ಯವಾದರೇನೇ ನಮಗೆ ಇರೋಕೆ ಜಾಗ ಸಿಗೋದು. ಹಾಗೇನೇ ಈ ಕಾಡಿನ ಜನ ಕೂಡ. ಇವರನ್ನೆಲ್ಲ ಇಲ್ಲವಾಗಿಸಿದ್ರೆ ಮಾತ್ರ ನಾವು ಇಲ್ಲಿರೋದು ಸಾಧ್ಯ. ಅರ್ಥ ಆಗ್ತಿದೆ ತಾನೆ !''

ಈ ಮಾತುಗಳೂ ಅರ್ಜುನನ ಮೆದುಳನ್ನು ತಟ್ಟಲಿಲ್ಲ.

''ಅರ್ಜುನಾ ! ಚೆನ್ನಾಗಿ ಯೋಚನೆ ಮಾಡು : ಎಲ್ಲಾ ಪ್ರಾಣಿಗಳ ಪ್ರಮುಖವಾದ ಗುಣ ಅಂದ್ರೆ ಸ್ವಹಿತ ರಕ್ಷಣೆ. ಈ ಸಹಜ ಗುಣವನ್ನ ನಾವು ತುಂಬಾ ಜೋಪಾನವಾಗಿ ಬಳಸಬೇಕು. ಪರಪೀಡನೆ ನಂತರ ಬರುತ್ತೆ. ಸ್ವರಕ್ಷಣೆ ತುಂಬಾ ಮುಖ್ಯ ಅಂತ ನಮ್ಮ ಜನರಿಗೆ ಹೇಳಬೇಕು, ಅವರನ್ನ ನಂಬಿಸಬೇಕು. ಅದೇ ತಮ್ಮ ಕರ್ತವ್ಯ ಅಂತ ತಿಳ್ಕೊಳೋ ರೀತಿ ಮಾಡಬೇಕು. ಆಗ ಎಲ್ಲರೂ ನಿನ್ನ ತಮ್ಮ ನಾಯಕ ಅಂತ ಒಪ್ಕೋತಾರೆ. ಇತರರನ್ನು ನಿರ್ದಾಕ್ಷಿಣ್ಯವಾಗಿ ಸರ್ವನಾಶ ಮಾಡಬೇಕು. ಆವಾಗ ಮಾತ್ರ ನಾವು ಜಯಶಾಲಿಗಳಾಗೋದು ಸಾಧ್ಯ. ಮಹಾವೀರರಾಗೋದೂ ಆಗ್ಲೇನೆ. ನಮ್ಮ ಜನರ ಕಣ್ಣಲ್ಲಿ ನಾವು ರಕ್ಷಕರಾಗ್ತೇವೆ, ಅವರ ನಾಯಕರಾಗ್ತೇವೆ. ಅವರಲ್ಲಿ ಬೇರೆಯವರ ಬಗ್ಗೆ ದ್ವೇಷವನ್ನ ತುಂಬಬೇಕು. ಜನರೆಲ್ಲಾ ಒಂದೇ ಅಂತ ಎಲ್ಲರೂ ಅರ್ಥಮಾಡಿ ಕೊಳ್ಳೋವರೆಗೂ ಈ ರೀತಿಯ ನಾಟಕ ಮುಂದುವರೆ ಯುತ್ತಲೇ ಇರತ್ತೆ. ಅಲ್ಲಿಯವರೆಗೂ ನಮ್ಮಂಥವರು ನಾಯಕರೂ, ಅಜೇಯರೂ ಆಗಿ ಉಳೀಬಹುದು.''

ಅರ್ಜುನ ತನ್ನ ಕತ್ತಿಯನ್ನ ದೂರ ಎಸೆದುಬಿಟ್ಟ.

''ಈ ಎಳೇ ಮಗುವನ್ನ ನಾನು ಕೊಲ್ಲಲಾರೆ. ನನ್ನಿಂದ ಸಾಧ್ಯವೇ ಇಲ್ಲ. ಅದರಲ್ಲೂ ಇದು ನನ್ನ ಶರಣು ಕೋರಿ ಬಂದಿದೆ !''

ಕೃಷ್ಣ ನಕ್ಕು ಹೇಳಿದ, ''ಹುಚ್ಚ! ಮಾತೇ ಬರದ ಆ ಪ್ರಾಣಿ ನಿನ್ನ ಶರಣು ಕೋರಿ ಬಂದಿದೆ ಅನ್ನೋದು

ಅರ್ಥವಿಲ್ಲದ ಮಾತು. ನಿನ್ನ ಜನ ಅಥವಾ ನಿನಗಿಂತ ದೊಡ್ಡವರಾದ ಆ ದೇವತೆಗಳು ಮಾತ್ರ ನಿನ್ನ ಆಶ್ರಯ ಪಡೆಯಬಹುದು. ಈ ಪ್ರಾಣಿ ನಿನ್ನ ಶತ್ರುಗಳಿಗೆ ಸೇರಿದ್ದು. ಅದು ನಿನ್ನ ಆಶ್ರಯ ಪಡೆಯೋಕೆ ಸಾಧ್ಯವೇ ಇಲ್ಲ. ನೀನೇ ಸ್ವಲ್ಪ ಯೋಚನೆ ಮಾಡು.''

ತನ್ನ ಕಾಲುಗಳನ್ನ ಬಳಸಿ ನಿಂತಿದ್ದ ಮಗುವಿನಿಂದ ಬಿಡಿಸಿಕೊಂಡು ಮುಂದೆ ನಡೆದ ಅರ್ಜುನ.

ಕೃಷ್ಣ ಸ್ವಧರ್ಮ ಪಾಲನೆಯನ್ನು ಮಾಡಿ, ರಕ್ತಸಿಕ್ತವಾದ ಕತ್ತಿಯನ್ನ ನೀರಿನಲ್ಲಿ ಅದ್ದಿ ಶುಭ್ರ ಮಾಡಿಕೊಂಡು ಬಂದ.

''ಏನು ಅಷ್ಟು ತೀವ್ರವಾಗಿ ಯೋಚನೆ ಮಾಡ್ತಿದೀಯಾ ?''

– ಒಂದು ಬಂಡೆಯ ಮೇಲೆ ಕುಳಿತು ಚಿಂತಾಮಗ್ನನಾದ ಅರ್ಜುನನಿಗೆ ಕೃಷ್ಣ ಪ್ರಶ್ನೆ ಹಾಕಿದ.

''ರಾಜಭೋಗಗಳಲ್ಲಿ ತಲ್ಲೀನರಾಗೋ ನಾವು ಈ ಹೊಗೆ, ವಾಸನೆ, ಹೆಣಗಳು ಇವುಗಳ ನಡುವೆ ಹೀಗೆ ಕಷ್ಟ ಪಡಲೇಬೇಕೇನು ? ಕೆಟ್ಟದ್ದು, ಒಳ್ಳೆಯದು ಅನ್ನೋ ವ್ಯತ್ಯಾಸಗಳು ಗೊತ್ತಿದ್ರೂ ಸಹ ಹೀಗೆ ಸಿಕ್ಕ ಸಿಕ್ಕವರನ್ನೆಲ್ಲಾ ಕೊಲ್ತಾ ಹೋಗಬೇಕೇನು ? ಇದಕ್ಕೆ ಪರಿಹಾರ ಇಲ್ವೇನು ?'' ಅರ್ಜುನನ ದನಿಯಲ್ಲಿ ಆವೇದನೆ ಸ್ಪಷ್ಟವಾಗಿತ್ತು.

''ತುಂಬಾ ಒಳ್ಳೇ ಪ್ರಶ್ನೆ ಕೇಳಿದೆ'', ಕೃಷ್ಣ ಮೆಚ್ಚುಗೆಯಿಂದ ಅರ್ಜುನನ ಭುಜ ತಟ್ಟಿದ.

''ಅರ್ಜುನಾ ! ನಾನು ಹೇಳೋದನ್ನ ಸರಿಯಾಗಿ ಕೇಳಿಸಿಕೋ : ಕತ್ತು ಕುಯ್ಯುವನೊಬ್ಬ, ಕತ್ತು ಕುಯಿಸುವನೊಬ್ಬ. ಕುಯ್ಯುವನ ಕೈಯಲ್ಲಿ ಕತ್ತಿ, ಕುಯಿಸುವನ ಮಾತಿನಲ್ಲಿ ಜಾಣತನ. ಅವನ ಕೆಲಸವೆಲ್ಲಾ ಕತ್ತು ಕುಯ್ಯುವವನಿಗೆ 'ನೀನು ಈ ಕೆಲಸ ಮಾಡ್ತಾ ಇರು' ಅಂತ ಹೇಳಿ ಒಪ್ಪಿಸೋದು ಮಾತ್ರ. ಅದಕ್ಕೆ ತಕ್ಕ ಸಿದ್ಧಾಂತವನ್ನ ಸೃಷ್ಟಿ ಮಾಡೋದೇ ಅವನಿಗಿರೋ ಒಂದೇ ದಾರಿ. ಸದ್ಯಕ್ಕಂತೂ, ಈ ಯುಗದಲ್ಲಿ, ನಾವಿಬ್ಬರೂ ಕತ್ತಿ ಹಿಡಿಯಲೇಬೇಕು. ತಪ್ಪಿಸೋಕಾಗೊಲ್ಲ; ಯುಗ ಧರ್ಮ.''

ಕೃಷ್ಣನ ಮಾತುಗಳಲ್ಲಿನ ಅರ್ಥವನ್ನು ಹುಡುಕುತ್ತಾ ಅರ್ಜುನ ಕೇಳಿದ, ''ಅಂದರೆ... ಮುಂದಿನ ಯುಗದಲ್ಲಿ ಸ್ಥಿತಿ ಬದಲಾಗುತ್ತೇನು ?''

''ಅದರಲ್ಲಿ ಅನುಮಾನವೇ ಇಲ್ಲ.'' ಕೃಷ್ಣ ಹೇಳಿದ.

''ಇನ್ನು ಮುಂದೆ ನಾನು ಆಯುಧ ಹಿಡಿಯೋದೇ ಇಲ್ಲ. ನಿನ್ನ ಹತ್ತಿರವೇ ಹಿಡಿಸ್ತೀನಿ'' ಒಳಗೇ ಅಂದುಕೊಂಡ ಕೃಷ್ಣ.

ಅರ್ಜುನನಿಗೆ ನಂಬಿಕೆ ಬರಲಿಲ್ಲ.

ಕೃಷ್ಣ ಮತ್ತೆ ಹೇಳಿದ, ''ಯುದ್ಧಭೂಮಿಗೆ ಹೋಗದೇ ಯುದ್ಧಗಳಲ್ಲಿ ಜಯಗಳಿಸೋ ದಿನ ಬಂದೇಬರುತ್ತೆ.''

''ನಿಂದೆಲ್ಲೋ ಕನಸು'' ಅರ್ಜುನನ ಉತ್ತರ.

''ಹೌದು, ಅದು ಇವತ್ತು ಕನಸು, ಭವಿಷ್ಯತ್ತಿನ ವಾಸ್ತವ.''

* * *

''ನೀನು ನನ್ನ ಕನಸನ್ನ ವಾಸ್ತವಗೊಳಿಸಿದ್ದೀಯ. ನೀನೇ ನನ್ನ ವಾರಸುದಾರ'', ಅಮೆರಿಕದ ಅಧ್ಯಕ್ಷನಿಗೆ ಹೀಗೆ ಆಶೀರ್ವಾದ ಮಾಡಿ ಕೃಷ್ಣ ನಿಧಾನವಾಗಿ ಕತ್ತಲಲ್ಲಿ ಕರಗಿಹೋದ.

ಅಧ್ಯಕ್ಷನ ಕಿವಿಯಲ್ಲಿ ನೂರಾರು ಉಪನ್ಯಾಸಗಳು. ಇತಿಹಾಸ ಉದ್ದಕ್ಕೂ ಒಬ್ಬರನ್ನೊಬ್ಬರು ಸಾಯಿಸುವಂತೆ ಹಲವು ಸಾವಿರ ಜನರನ್ನ ಪ್ರೇರೇಪಿಸಿದ ಅಲೆಗ್ಸಾಂಡರ್, ಛೆಂಘಿಜ್ ಖಾನ್, ತಾಮರ್ಲಿನ್, ಹಿಟ್ಲರ್ ಇಂಥವರ ಮಾತುಗಳು ಮತ್ತೆ ಮತ್ತೆ ಅವನ ಕಿವಿಯಲ್ಲಿ ಧ್ವನಿಸಿದವು.

ಅವೆಷ್ಟೋ ಹಳೆಯ ನೆನಪುಗಳ ಕಂಪನಗಳು... ಸಾವಿರಾರು ಜನರ ಆರ್ತನಾದಗಳ ನಡುವೆ ಕೆಲವರ ವಿಕಟಾಟ್ಟಹಾಸ... ಕಲ್ಲು, ಕೋಲು, ಕತ್ತಿ, ಬಾಣ, ತುಪಾಕಿ, ಫಿರಂಗಿ, ಬಾಂಬು, ಟ್ಯಾಂಕು, ಯುದ್ಧ ವಿಮಾನ, ಕ್ಷಿಪಣಿ – ಒಂದಾದ ಮೇಲೆ ಒಂದರಂತೆ ಒಂದರಿಂದ ಮತ್ತೊಂದು ಹುಟ್ಟಿಬರುತ್ತಿದೆ... ಒಂದು ಆಯುಧ ಕಾಣಿಸಿಕೊಂಡ ಮೇಲೆ ಅದರ ಹಿಂದಿನದು ನಿಧಾನವಾಗಿ ಅದೃಶ್ಯ. ಒಬ್ಬರನ್ನ ಇನ್ನೊಬ್ಬರಿಂದ ಬೇರ್ಪಡಿಸಿ, ಒಬ್ಬರ ಹೆಗಲ ಮೇಲೆ ಮತ್ತೊಬ್ಬರ ಸವಾರಿ... ಹೀಗೆ ಸವಾರಿ ಮಾಡುವಂಥವರು ಪರಸ್ಪರ ಅಭಿನಂದನೆ ಸಲ್ಲಿಸಿಕೊಳ್ಳುತ್ತಾ... ಚರಿತ್ರೆಯ ಹಲವು ಪುಟಗಳು... ಮುಂದೆ, ಮುಂದೆ.... ಇನ್ನೂ ಮುಂದೆ.

ಅಧ್ಯಕ್ಷನ ಕಣ್ಣಮುಂದೆ ದೃಶ್ಯಗಳು... ಕಿವಿಯಲ್ಲಿ ಶಬ್ದಗಳು. ಆ ದೃಶ್ಯ ಶ್ರವ್ಯಚಿತ್ರ ಇನ್ನೂ ಅದೆಷ್ಟು ಹೊತ್ತು ಮುಂದುವರೆಯಲಿತ್ತೋ ! ಆದರೆ ಅಷ್ಟರಲ್ಲಿ ಆತನಿಗೆ ನೈಸರ್ಗಿಕ ಬಾಧೆ ತಟ್ಟಿತು. ಏಳಲೇಬೇಕಾಯಿತು. ಎದ್ದು ತನ್ನ ಮುದಿ ಕೈಗಳಿಂದ ಅಲ್ಲಲ್ಲಿ ತಡವಿ ನೀರನ್ನ ಹುಡುಕಿ ಬಾಯಾರಿಕೆ ನೀಗಿಸಿಕೊಂಡದ್ದೇನೋ ಆಯಿತು.

ಗಡಿಯಾರ ಆರು ಗಂಟೆ ತೋರುತ್ತಿತ್ತು. ಮಂಚದಿಂದ ಇಳಿದು, ಹೊಟ್ಟೆ ಸವರಿಕೊಳ್ಳುತ್ತಾ, ಅಲ್ಲಿ ಇಲ್ಲಿ ಶತಪಥ ಹಾಕಿದ. ತಲೆಯಲ್ಲಿ ತುಂಬಿದ್ದ ಯೋಚನೆಗಳನ್ನ ಗಟ್ಟಿಯಾಗಿ ಹಿಡಿದಿಡುವವನಂತೆ ಮುಷ್ಟಿ ಬಿಗಿದ.

ಏನಾದರೂ ಓದಲು ಸಿಗುತ್ತದೇನೋ ಎಂದು ಮೇಜಿನ ಮೇಲಿನ ಪುಸ್ತಕಗಳ ನಡುವೆ, ಮೇಲೆ ಕೈಯಾಡಿಸಿದ. ಬೇರೆ ದೇಶಗಳಲ್ಲಿ ಪ್ರಜಾತಂತ್ರ ಇರಲೇಬೇಕಾದ ಅವಶ್ಯಕತೆಯ ಬಗ್ಗೆ, ಅಲ್ಲಿನ ಮಾನವ ಹಕ್ಕುಗಳ ಬಗ್ಗೆ, ಕಾರ್ಮಿಕರ ಜೀವನಮಟ್ಟದ ಬಗ್ಗೆ ಬೇರೆ ಬೇರೆ ತಜ್ಞರು ತಯಾರು ಮಾಡಿಕೊಟ್ಟಿದ್ದ ಪ್ರಬಂಧಗಳು – ತಾನು ಸಮಾರಂಭಗಳಲ್ಲಿ ಓದಬೇಕಾದಂಥವು – ಆ ಮೇಜಿನ ತುಂಬೆಲ್ಲ ಇದ್ದವು.

ಅವುಗಳನ್ನ ಕೈಯಲ್ಲಿ ಹಿಡಿದು ತನ್ನ ಅಧುನಾತನ ಟಾಯ್‌ಲೆಟ್ ಒಳಕ್ಕೆ ನಡೆದ. ಅಲ್ಲಿ ಅವುಗಳನ್ನೆಲ್ಲ ಓದುತ್ತಿದ್ದರೆ, ಅವನಿಗೆ ವಿಪರೀತ ನಗು, ತಡೆಯಲಾರದಷ್ಟು.

ಆ ನಗು... ಅಲೆ ಅಲೆಯಾಗಿ... ಊರು ಕೇರಿಗಳನ್ನ ದಾಟಿ... ದೇಶ ವಿದೇಶಗಳಲ್ಲಿ ಅಲೆದು... ವಿಶ್ವವನ್ನೇ ಹಿಂದಕ್ಕೆ ಹಾಕಿ... ಭೂಗೋಳವನ್ನೇ ಮುಳುಗಿಸಿ... ಎಲ್ಲೆಲ್ಲಿ ನೋಡಿದರೂ ನಗುವೇ ನಗು.

ಆ ನಗುವಿನೊಳಗಿಂದ ಆಕೃತಿಯೊಂದು ಹೊರಬಿತ್ತು. ನಿಧಾನವಾಗಿ ಅಂಡ ಪಿಂಡ ಬ್ರಹ್ಮಾಂಡಗಳನ್ನ ಆವರಿಸಿತು. ಆ ಆಕೃತಿಗೆ ಸಾವಿರ ಮುಖಗಳು, ಲಕ್ಷಾಂತರ ಕೈಗಳು, ಕೋಟಿಗಟ್ಟಲೆ ಪಾದಗಳು... ಆ ಬೃಹದಾಕಾರದ ಕೆಳಗೆ ಕೋಟ್ಯಂತರ ಜನ ಪುಡಿಪುಡಿ.

ಹಾಗೆ ಪುಡಿಪುಡಿಯಾಗುತ್ತಿದ್ದ ಜನರ ಮೈಯಿಂದ ಸೋರುತ್ತಿದ್ದ ಜೇನನ್ನೆಲ್ಲಾ ಲಕ್ಷಾಂತರ ಬಟ್ಟಲುಗಳಲ್ಲಿ ಹಿಡಿಯುತ್ತಿದ್ದರು, ತಂದು ದೊಡ್ಡ ಡಬರಿಗಳಲ್ಲಿ ಸುರಿಯುತ್ತಿದ್ದರು. ಆ ದೊಡ್ಡ ಪಾತ್ರೆಗಳಿಂದ ಕೊಳವೆಗಳ ಮೂಲಕ ಆ ಆಕೃತಿಯ ಮೈಯೊಳಕ್ಕೆ ಆ ಜೇನೆಲ್ಲ ಹರಿಯುತ್ತಿತ್ತು.

ಈ ಎಲ್ಲ ಕೆಲಸ ಮಾಡುತ್ತಿದ್ದವರು ಮಧ್ಯ ಮಧ್ಯೆ ತಮ್ಮ ಕೈಗಂಟಿದ ಜೇನನ್ನು ನೆಕ್ಕುತ್ತಿದ್ದರು. ಅದರ ಮಾಧುರ್ಯಕ್ಕೆ ತಲೆಬಾಗಿ, ತಮ್ಮ ತಲೆಬುರುಡೆಗಳಿಂದ ಮೆದುಳುಗಳನ್ನ ಆಚೆ ಎಳೆದು ಅವುಗಳನ್ನ ಆ ಮಹಾ ಆಕೃತಿಗೆ ನೈವೇದ್ಯ ಮಾಡುತ್ತಿದ್ದರು.

ವಿವಿಧ ದೇಶಗಳ ನಾಯಕರು; ಭೌತಶಾಸ್ತ್ರಜ್ಞರು; ಆಧ್ಯಾತ್ಮಿಕ ವಿದ್ಯಾಪಾರಂಗತರು; ರಾಜಕೀಯ, ಸಾಮಾಜಿಕ, ಆರ್ಥಿಕ ತಜ್ಞರೇ ಮುಂತಾದ ಮಹಾ ಮಹಾ ವಿದ್ವಾಂಸರು, ಜಗತ್ತನ್ನೇ ನಡುಗಿಸುವ, ನಡೆಸುವ ಸಾಮರ್ಥ್ಯ ಉಳ್ಳವರು, ಆ ಆಕೃತಿಯ ಸುತ್ತ ಸುತ್ತುತ್ತಾ, ಭಜನೆ ಮಾಡುತ್ತಾ ಆನಂದದ ಅಂಚಿಗೆ ತಲುಪಿದ್ದರು. ಆ ಆಕೃತಿಯಿಂದ ಕೆಳಕ್ಕೆ ಸುರಿಯುತ್ತಿದ್ದ ಜೇನಿಗಾಗಿ ತಲೆ ಎತ್ತಿ ನಾಲಗೆಗಳನ್ನ ಆಚೆ ಇಳಿಬಿಟ್ಟಿದ್ದರು.

ಆ ಆಕೃತಿಗೆ ಹೃದಯವಿರಬೇಕಾದ ಜಾಗದಲ್ಲಿ ಒಂದು ದೊಡ್ಡ ರಂಧ್ರವಿತ್ತು. ಅದರೊಳಗಿಂದ ವಿವಿಧ ಬಗೆಯ ಆಯುಧಗಳು, ಪ್ರಯಾಣ ಸಾಧನೆಗಳು, ವಿಶ್ರಾಂತಿ ಧಾಮಗಳು, ವಿನೋದ ಸಾಧನಗಳು, ಸಂಪರ್ಕ ಸಾಧನಗಳು – ಒಂದೇ ಎರಡೇ – ಎಲ್ಲವೂ ಆಚೆಗೆ ಬಂದು ಎಲ್ಲ ಕಡೆಯೂ ಹಾರುತ್ತಿವೆ. ಕೈಕಾಲು ಗಟ್ಟಿಯಾಗಿರುವ ಪ್ರತಿಯೊಬ್ಬನೂ ಹಾರುವ ಆ ವಸ್ತು ಸಂಚಯಕ್ಕಾಗಿ ವಿಚಿತ್ರವಾಗಿ ಕಿರಿಚಾಡುತ್ತಿದ್ದಾನೆ.

ಸ್ವಲ್ಪ ಸಮಯದ ನಂತರ, ಆ ಆಕೃತಿ ಕೃಶವಾಗಿ ಒಂದು ಪುಟ್ಟ ಗುಳಿಗೆಯಾಯಿತು. ಅದು ಅಧ್ಯಕ್ಷನ ಹೊಟ್ಟೆಯೊಳಕ್ಕೆ ಪ್ರವೇಶಿಸಿ ತನ್ನ ಕೆಲಸ ಪ್ರಾರಂಭಿಸಿತು. ನಿಧಾನವಾಗಿ ಅದರ ಪ್ರಭಾವದಿಂದಾಗಿ ಅಧ್ಯಕ್ಷನ ಹೊಟ್ಟೆ ಖಾಲಿಯಾಯಿತು, ಅವನಿಗೆ ನೆಮ್ಮದಿ ಸಿಕ್ಕಿತು. 'ಅಮ್ಮ' ಎಂದು ಉದ್ಗರಿಸಿದ, ತೃಪ್ತಿಯಿಂದ.

ತನ್ನೆಲ್ಲಾ ಅಂಗಗಳನ್ನೂ ಸ್ವಾಧೀನಕ್ಕೆ ತೆಗೆದುಕೊಂಡು ಭಾರ ಕಡಿಮೆಯಾದವನಂತೆ ಅಧ್ಯಕ್ಷನು ವಿಶಾಲವಾದ ಆ ಕೋಣೆಯಿಂದ ಆಚೆ ನಡೆದ.

**ಕನ್ನಡ ಅನುವಾದ : ನಗರಗೆರೆ ರಮೇಶ್**

೩೬೬, ೮ನೇ ಅಡ್ಡರಸ್ತೆ, ೮ನೇ ಮುಖ್ಯರಸ್ತೆ, ಪದ್ಮನಾಭ ನಗರ
ಬೆಂಗಳೂರು - ೫೬೦ ೦೭೦

## ಗಾಜು

ಗಾಜು ವಜ್ರವೆಂದು
ಮೆರೆಯುವಾಗ,
ಮೆರೆಸುವಾಗ,
ಯಾರು ಕೇಳುತ್ತಾರೆ
ವಜ್ರವನ್ನು

ಸಿ.ಪಿ.ಕೆ.
ಮೈಸೂರು

# ಲೌಕಿಕ ಜಗತ್ತಿನ ಅಸ್ತಿತ್ವವನ್ನು ನಿರಾಕರಿಸುವ ಶಂಕರರ ಅದ್ವೈತ ಸಿದ್ಧಾಂತ

ಡಾ|| ಕೆ. ಮೋಹನ್‌ಕೃಷ್ಣ ರೈ

ಶಂಕರರು ಅದ್ವೈತ ಸಿದ್ಧಾಂತವನ್ನು ಪ್ರತಿಪಾದಿಸಿದರು. ಈ ಸಿದ್ಧಾಂತದ ಪ್ರಕಾರ ಬ್ರಹ್ಮವೇ ಸತ್ಯ, ಈ ಬ್ರಹ್ಮವನ್ನು ಬಿಟ್ಟು ಜಗತ್ತಿಗೆ ಪ್ರತ್ಯೇಕ ಅಸ್ತಿತ್ವವಿಲ್ಲ. ಶಂಕರಾಚಾರ್ಯರು ಹೇಳುವ 'ಬ್ರಹ್ಮಕ್ಕಿಂತ ಬೇರೆಯಾಗಿ ಅಥವಾ ಸ್ವತಂತ್ರವಾಗಿ ಜಗತ್ತಿಗೆ ಅಸ್ತಿತ್ವವಿಲ್ಲ,' ಎಂಬ ಮಾತು ಅನೇಕ ರೀತಿಯ ವಾದವಿವಾದಗಳಿಗೆ ಆಸ್ಪದ ಮಾಡಿಕೊಡುತ್ತದೆ. ಅಸ್ತಿತ್ವದಲ್ಲಿರುವುದೆಲ್ಲಾ ಬ್ರಹ್ಮವೇ, ಅದಲ್ಲದೆ ಬೇರೊಂದು ಇಲ್ಲವೇ ಇಲ್ಲ ಎನ್ನುವುದು ಒಂದು ವರ್ಗದ ಸತ್ಯವನ್ನಷ್ಟೇ ಹೇಳುತ್ತದೆ. ಈ ವಾದದ ಪ್ರಕಾರ ಲೌಕಿಕ ಜಗತ್ತು ಪ್ರಾಮುಖ್ಯವಲ್ಲ, ಅಲೌಕಿಕ ಚಿಂತನೆಗಳಿಂದ ಕೂಡಿದ ಜಗತ್ತು ಮಾತ್ರ ಸತ್ಯವನ್ನು ಹೇಳಲು ಸಾಧ್ಯ. ಸ್ವತಂತ್ರವಾಗಿ ಜಗತ್ತಿಗೆ ಅಸ್ತಿತ್ವವಿಲ್ಲ ಎಂಬ ಮಾತನ್ನು ಸಮಾಜದ ಕೆಳವರ್ಗದ ಜನರಿಗೆ ಸ್ವತಂತ್ರವಾಗಿ ಅಸ್ತಿತ್ವವಿಲ್ಲ ಎಂಬುದಾಗಿ ವ್ಯಾಖ್ಯಾನಿಸಬಹುದಾಗಿದೆ. ಕೆಳವರ್ಗದ ಜನರು ಅಸ್ತಿತ್ವವನ್ನು ಕಂಡುಕೊಳ್ಳಬೇಕಾದರೆ ಮೇಲ್ವರ್ಗಗಳನ್ನು ಅವಲಂಬಿಸುವುದು ಅನಿವಾರ್ಯ ಎನ್ನುವ ಶ್ರೇಣೀಕೃತ ಸಮಾಜ ವ್ಯವಸ್ಥೆಯ ಧೋರಣೆಯೂ ಇದರಲ್ಲಿ ಕಂಡುಬರುತ್ತದೆ. ಬ್ರಹ್ಮವು ಪರಿಪೂರ್ಣ, ಪರಿವರ್ತನರಹಿತ, ಅಖಂಡವಾದದ್ದು ಮತ್ತು ಇತರರಿಗೆ ವಹಿಸಲಾಗದ್ದು ಎನ್ನುವಂಥ ತಾರ್ಕಿಕ ಅಂಶಗಳು ಪ್ರಶ್ನಿಸುವ ಹಕ್ಕನ್ನೇ ಕಿತ್ತುಕೊಳ್ಳುತ್ತವೆ.

ಶಂಕರರ ಅದ್ವೈತ ಸಿದ್ಧಾಂತವು ಲೌಕಿಕ ಜಗತ್ತಿನ ಸಾಮಾಜಿಕ ಹಾಗೂ ಆರ್ಥಿಕ ಅಸಮಾನತೆಗಳ ಕುರಿತು ಏನನ್ನೂ ಹೇಳುವುದಿಲ್ಲ. ಆದರೆ ಒಂದು ವರ್ಗದ ಯಜಮಾನಿಕೆಯನ್ನು ಸೂಚಿಸುತ್ತದೆ. ಈ ಸಿದ್ಧಾಂತವು ವೈದಿಕ ಸಿದ್ಧಾಂತಗಳಿಗಿಂತ ಭಿನ್ನವಾಗಿ ಕಂಡುಬರುವುದಿಲ್ಲ. ಶಂಕರರು ದೇಶಾದ್ಯಂತ ಸಂಚರಿಸಿ ಅದ್ವೈತ ಸಿದ್ಧಾಂತವನ್ನು ಪ್ರಚುರ ಪಡಿಸಲು ಧರ್ಮಪೀಠಗಳನ್ನು ಸ್ಥಾಪಿಸಿದರು. ಅದರೊಂದಿಗೆ ತಮ್ಮ ಅನುಯಾಯಿಗಳ ಪಡೆಯೊಂದನ್ನೇ ಸೃಷ್ಟಿಸಿದರು. ಈ ಬೆಳವಣಿಗೆಗಳು ಪರೋಕ್ಷವಾಗಿ ಬ್ರಾಹ್ಮಣ ಹಿಡಿತದ ವೈದಿಕ ಧರ್ಮವು ಸ್ವಚ್ಛಂದವಾಗಿ ವಿಹರಿಸುವಂತೆ ಮಾಡಿದವು. ಜೈನ ಮತ್ತು ಬೌದ್ಧಧರ್ಮಗಳ ಪ್ರಭಾವದಿಂದಾಗಿ ಜನಪ್ರಿಯತೆಯನ್ನು ಕಳೆದುಕೊಳ್ಳುತ್ತಿದ್ದ ವೈದಿಕ ಧರ್ಮಕ್ಕೆ ಶಂಕರರ ಚಿಂತನೆಗಳು ಅನುಕೂಲಕರವಾಗಿ ಪರಿಣಮಿಸಿದವು. ಏಕೆಂದರೆ ಶಂಕರರ ಚಿಂತನೆಗಳು ವೈದಿಕ ಚೌಕಟ್ಟಿನೊಳಗೇ ವ್ಯವಹರಿಸುತ್ತಿದ್ದವು. ವೈದಿಕ ಚೌಕಟ್ಟನ್ನು ಮೀರುವ ಪ್ರಯತ್ನವನ್ನು ಅವು ಎಂದಿಗೂ ಮಾಡಲಿಲ್ಲ. ಶಂಕರರು ತಮ್ಮ ತೀಕ್ಷ್ಣ ಹಾಗೂ ಅಪಾರ ಮೇಧಾವಿತನವನ್ನು ಸಮಾಜದ ಪಿಡುಗುಗಳನ್ನು ನಿವಾರಿಸಲು ಉಪಯೋಗಿಸಲಿಲ್ಲ. ಜೀವನೂ ಬ್ರಹ್ಮನೂ ಪ್ರತ್ಯೇಕರಲ್ಲ; ಆದರೆ ಪ್ರತೀ ಜೀವಾತ್ಮನು ತಾನೇ ಬ್ರಹ್ಮವೆಂಬ ಸಂಗತಿಯನ್ನು ಸಾಧನೆಯಿಂದ ಮನವರಿಕೆ ಮಾಡಿಕೊಳ್ಳಬೇಕು; ಆತ್ಮ ಜ್ಞಾನ ಅಥವಾ ಬ್ರಹ್ಮ ಜ್ಞಾನವನ್ನು ಪಡೆಯಲು ಭಕ್ತಿ ಅಥವಾ ಜ್ಞಾನಮಾರ್ಗಗಳನ್ನು ಅನುಸರಿಸಬಹುದು ಎಂಬ ಶಂಕರರ ಚಿಂತನೆ ಜನಸಾಮಾನ್ಯರಿಗೆ ಹತ್ತಿರವಾಗದೇ ದೂರ ಉಳಿಯಬೇಕಾಯಿತು. ಏಕೆಂದರೆ ಅದು ಜನಸಾಮಾನ್ಯರನ್ನು ದ್ವಂದ್ವದಲ್ಲಿ ಸಿಲುಕಿಸಿತೇ ಹೊರತು ಅವರ ಬದುಕಿಗೆ ಯಾವ ರೀತಿಯಲ್ಲೂ ಸಹಕಾರಿಯಾಗಲಿಲ್ಲ.



ಮಾನವ ತನ್ನ ಬದುಕಿನ ಬಗ್ಗೆ ಸ್ವತಂತ್ರ ನಿರ್ಣಯಗಳನ್ನು ತೆಗೆದುಕೊಳ್ಳದಂತೆ ಮಾಡುವಲ್ಲಿ ಹಾಗೂ ತನ್ನ ಮೇಲೆ ತಾನೇ ವಿಶ್ವಾಸವಿಡದಂತೆ ಮಾಡುವಲ್ಲಿ ಶಂಕರರ ಚಿಂತನೆಗಳು ಯಶಸ್ವಿಯಾದವು. ಇಲ್ಲಿ ಮಾನವ ಎನ್ನುವ ಪದವನ್ನು ಎಚ್ಚರಿಕೆಯಿಂದ ಬಳಸಬೇಕಾಗುತ್ತದೆ. ಏಕೆಂದರೆ ಮಾನವರೆಲ್ಲರೂ ಒಂದೇ ರೀತಿಯ ಬದುಕನ್ನು ನಡೆಸಲು ಸಾಧ್ಯವಿಲ್ಲ. ಅದೇ ರೀತಿ ಪರಸ್ಪರ ಹೊಂದಾಣಿಕೆಯ ಬದುಕೂ ಸಾಧ್ಯವಿಲ್ಲ. ಇಲ್ಲಿ 'ಸಾಧ್ಯವಿಲ್ಲ' ಎನ್ನುವುದನ್ನು ಧರ್ಮವೇ ಸಾಬೀತು ಪಡಿಸಿರುವುದು ವಾಸ್ತವ ಸಂಗತಿ. ಮಾನವನನ್ನು ಜಾತಿ/ವರ್ಗದ ಆಧಾರದ ಮೇಲೆ ವಿಂಗಡಿಸಿದ ಸಮಾಜವು ಆ ವ್ಯವಸ್ಥೆಯ ಮುಂದುವರಿಕೆಗೆ ಸರಿಹೊಂದುವ ನೀತಿ ನಿಯಮಗಳನ್ನು ರೂಪಿಸಿತು. ಅಲೌಕಿಕ ಚಿಂತನೆಗಳನ್ನು ಸೃಷ್ಟಿಸಿ ಲೌಕಿಕ ಬದುಕನ್ನು ಮರೆಯುವಂತೆ ಧಾರ್ಮಿಕ ಚಿಂತನೆಗಳು ಮಾಡಿದವು. ಶಂಕರರು ಪರಸ್ಪರ ವಿಭಿನ್ನವಾಗಿರುವ ಅಥವಾ ಪರಸ್ಪರ ವಿರುದ್ಧವಾಗಿರುವ ಸಂಪ್ರದಾಯಗಳನ್ನು ಒಂದುಗೂಡಿಸುವ, ಹೊಂದಾಣಿಕೆಗೆ ಅಳವಡಿಸುವ ಸಮನ್ವಯ ಸಿದ್ಧಾಂತವನ್ನು ಸಾರಿದರು. ಆದರೆ ಈ ಸಿದ್ಧಾಂತದಿಂದ ಮೋಸ ಹೋಗುವವರು ಸಮಾಜದ ಕೆಳಸ್ತರದ ಅಥವಾ ಅಲಕ್ಷಿತ ವರ್ಗದ ಜನರು. ಈ ಅಲಕ್ಷಿತವರ್ಗದ ಜನರೊಂದಿಗೆ ಅವರ ಗ್ರಾಮದೇವತೆಗಳು, ಅದಕ್ಕೆ ಸಂಬಂಧಿಸಿದ ಆಚರಣೆಗಳು, ಹಾಡುಗಳು, ಕುಣಿತಗಳು ನಿರ್ಲಕ್ಷ್ಯಕ್ಕೆ ಒಳಗಾದವು. ಸಮನ್ವಯ ಸಿದ್ಧಾಂತದ ಪ್ರಕಾರ ಎಲ್ಲವನ್ನೂ ಒಟ್ಟುಗೂಡಿಸಿ ಒಂದು ನಿರ್ದಿಷ್ಟ ಚೌಕಟ್ಟಿನೊಳಗೆ ತರುವ ಪ್ರಯತ್ನಗಳ ಜೊತೆಗೆ ಈ ಸಿದ್ಧಾಂತವನ್ನು ವೈದಿಕ ದೇವರುಗಳ ತೆಕ್ಕೆಯೊಳಗೆ ಗ್ರಾಮದೇವತೆಗಳು ಸೇರಿಕೊಳ್ಳಬೇಕೆನ್ನುವಂಥ ಧೋರಣೆಯ ಹಿನ್ನೆಲೆಯಿಂದಲೂ ನೋಡಬಹುದಾಗಿದೆ. ಶಂಕರರು ಶಿವ, ವಿಷ್ಣು, ಸೂರ್ಯ, ಗಣೇಶ, ಕುಮಾರ, ಶಕ್ತಿ – ಈ ಆರು ದೇವತೆಗಳ ಸಾಮೂಹಿಕ ಆರಾಧನೆಗೆ ಮಹತ್ವ ನೀಡಿದರು. ಇದರಿಂದ ಸಾಮಾಜಿಕ ಐಕ್ಯತೆ ಸಾಧ್ಯವಿದೆ ಎಂಬ ನಂಬಿಕೆಯನ್ನೂ ಅವರು ಹೊಂದಿದ್ದರು.

ದೇವತೆಗಳ ಸಾಮೂಹಿಕ ಆರಾಧನೆಯೊಂದಿಗೆ ಸಾಮಾಜಿಕ ಐಕ್ಯವನ್ನು ಸಾಧಿಸುವ ಶಂಕರರ ಪ್ರಮೇಯ ಕೆಲವೊಂದು ಪ್ರಶ್ನೆಗಳನ್ನು ಹುಟ್ಟು ಹಾಕುತ್ತದೆ. ಗ್ರಾಮದೇವತೆಯಾಗಿದ್ದ ದೇವತೆಯೊಂದು ವೈದಿಕದೇವತೆಯಾಗಿ ಪರಿವರ್ತನೆಗೊಳ್ಳುವುದು ಒಂದು ದೀರ್ಘ ಪ್ರಕ್ರಿಯೆ. ಈ ಪ್ರಕ್ರಿಯೆಯಲ್ಲಿ ಅನೇಕ ಬದಲಾವಣೆಗಳು ಸಂಭವಿಸುತ್ತಿರುತ್ತವೆ. ವೈವಿಧ್ಯತೆ ಇದ್ದರೂ ಪ್ರಬಲ ಸಂಪ್ರದಾಯಗಳು ತಮ್ಮದೇ ಏಕತೆಯನ್ನು ಸಾಧಿಸಲು ಪ್ರಯತ್ನಿಸುತ್ತಿರುತ್ತವೆ. ಗ್ರಾಮದೇವತೆಗಳನ್ನು ವೈದಿಕದೇವತೆಗಳ ರೂಪದಲ್ಲಿ ಕಾಣುವ ಹಾಗೂ ಅದಕ್ಕೆ ಸಂಬಂಧಿಸಿದ ಮಿಥ್‌ಗಳನ್ನು ಸೃಷ್ಟಿಸುವ ಕೆಲಸಗಳೂ ನಡೆಯುತ್ತಿರುತ್ತವೆ. ಗುಡ್ಡಗಾಡಿನ ಹಿನ್ನೆಲೆಯನ್ನು ಹೊಂದಿದ ರುದ್ರ-ಶಿವ ವೈದಿಕ ದೇವತೆಯಾಗಿ ಪರಿವರ್ತನೆ ಹೊಂದಿರುವುದು ಈ ನಿಟ್ಟಿನಲ್ಲಿ ಒಂದು

ಶಂಕರರ ಅದ್ವೈತ ಸಿದ್ಧಾಂತವು ಲೌಕಿಕ ಜಗತ್ತಿನ ಸಾಮಾಜಿಕ ಹಾಗೂ ಆರ್ಥಿಕ ಅಸಮಾನತೆಗಳ ಕುರಿತು ಏನನ್ನೂ ಹೇಳುವುದಿಲ್ಲ. ಆದರೆ ಒಂದು ವರ್ಗದ ಯಜಮಾನಿಕೆಯನ್ನು ಸೂಚಿಸುತ್ತದೆ. ಈ ಸಿದ್ಧಾಂತವು ವೈದಿಕ ಸಿದ್ಧಾಂತಗಳಿಗಿಂತ ಭಿನ್ನವಾಗಿ ಕಂಡುಬರುವುದಿಲ್ಲ. ಶಂಕರರು ದೇಶಾದ್ಯಂತ ಸಂಚರಿಸಿ ಅದ್ವೈತ ಸಿದ್ಧಾಂತವನ್ನು ಪ್ರಚುರಪಡಿಸಲು ಧರ್ಮಪೀಠಗಳನ್ನು ಸ್ಥಾಪಿಸಿದರು. ಅದರೊಂದಿಗೆ ತಮ್ಮ ಅನುಯಾಯಿಗಳ ಪಡೆಯೊಂದನ್ನೇ ಸೃಷ್ಟಿಸಿದರು. ಈ ಬೆಳವಣಿಗೆಗಳು ಪರೋಕ್ಷವಾಗಿ ಬ್ರಾಹ್ಮಣ ಹಿಡಿತದ ವೈದಿಕ ಧರ್ಮವು ಸ್ವಚ್ಛಂದವಾಗಿ ವಿಹರಿಸುವಂತೆ ಮಾಡಿದವು.

ಉದಾಹರಣೆ. ಶಂಕರರು ತಮ್ಮ ಸಾಮೂಹಿಕ ಆರಾಧನೆ ಚಿಂತನೆಯಲ್ಲಿ ಈ ಪರಿವರ್ತನೆಗಳನ್ನು ಗುರುತಿಸಿಕೊಂಡಂತೆ ಕಂಡುಬರುವುದಿಲ್ಲ. ವಿಭಿನ್ನ ಸಾಂಸ್ಕೃತಿಕ ಸ್ತರಗಳಿರುವ ಸಮಾಜದಲ್ಲಿ ಸಾಮೂಹಿಕ ಆರಾಧನೆ ಸಿದ್ಧಾಂತವು ಸಾಮಾಜಿಕ ಐಕ್ಯ ಅಥವಾ ಏಕತೆಯನ್ನು ತರಲು ಸಾಧ್ಯವಿಲ್ಲ. ಏಕೆಂದರೆ ಅಲ್ಲಿ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳು ಬದಲಾವಣೆಗೊಂಡಿರುವುದಿಲ್ಲ. ಹೆಚ್ಚೆಂದರೆ ಅದು ಎಲ್ಲವನ್ನೂ ಒಂದು ಸ್ಥಾಪಿತ ಚೌಕಟ್ಟಿನೊಳಗೆ ತರಲು ಸಾಧ್ಯವಿದೆ. ಈ ಕಾರಣಗಳಿಂದಾಗಿ ಶಂಕರರ ಸಾಮೂಹಿಕ ಆರಾಧನೆ ಕಲ್ಪನೆಯು ಮಾನವನ ಬದುಕನ್ನು ಇನ್ನಷ್ಟು ಸಂಕೀರ್ಣಗೊಳಿಸಬಹುದೇ ವಿನಾ ಸರಳೀಕರಿಸಲು ಸಾಧ್ಯವಿಲ್ಲ.

ಶಂಕರಾಚಾರ್ಯರು ತಮ್ಮ 'ಬ್ರಹ್ಮಸೂತ್ರ ಶಂಕರಭಾಷ್ಯ' ಗ್ರಂಥದಲ್ಲಿ ಸಮಾಜದ ಕೆಳವರ್ಗದ ಜನರ ಬಗೆಗಿನ ತಮ್ಮ ಅಭಿಪ್ರಾಯವನ್ನು ಈ ರೀತಿಯಾಗಿ ವ್ಯಕ್ತಪಡಿಸಿದ್ದಾರೆ: ಶೂದ್ರನಿಗೆ ವಿದ್ಯಾರ್ಜನೆಯ ಅಧಿಕಾರವಿಲ್ಲ. ಬ್ರಹ್ಮಜ್ಞಾನಕ್ಕೆ ಅಧಿಕಾರವಿಲ್ಲ. ವೇದಗಳನ್ನು ಕೇಳುವುದಕ್ಕೂ, ವೇದಗಳನ್ನು ಅಧ್ಯಯನ ಮಾಡುವುದಕ್ಕೂ ಸ್ಮೃತಿಯಿಂದ ಅವನಿಗೆ ಬಹಿಷ್ಕಾರವಿದೆ. ಆದ್ದರಿಂದ ಶೂದ್ರನಾದವನು ವೇದಗಳ ಶಬ್ದಗಳನ್ನು ಕೇಳಿದರೆ ಅವನ ಕಿವಿಗಳಲ್ಲಿ ಕಾಯಿಸಿದ ಸೀಸ ಹಾಕಬೇಕು. ವೇದಗಳನ್ನು ಅಧ್ಯಯನ ಮಾಡಿದರೆ ಅವನ ನಾಲಿಗೆಯನ್ನು ಕತ್ತರಿಸಬೇಕು, ವೇದಗಳನ್ನು ಧಾರಣ ಮಾಡಿದರೆ ಅವನನ್ನು ಕೊಂದುಹಾಕಬೇಕು. ಸಮಾಜದ ಕೆಳವರ್ಗದ ಜನರ ಬಗೆಗೆ ಮನುಸ್ಮೃತಿಯೂ ಇದೇ ರೀತಿಯ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತದೆ. ಇದರಿಂದಾಗಿ ಶಂಕರರು ಅಸಮಾನ ಸಾಮಾಜಿಕ ವ್ಯವಸ್ಥೆಯನ್ನು ಪ್ರಶ್ನಿಸುವಬದಲು ಸಮರ್ಥಿಸುವ ಕೆಲಸವನ್ನು ಮಾಡಿದಂತೆ ಕಂಡುಬರುತ್ತದೆ. ಇದರಿಂದಾಗಿಯೇ ಆ ಕಾಲಕ್ಕೆ ಪುರೋಹಿತಶಾಹಿ ಪ್ರಭುತ್ವ ಪುನರ್ ಸ್ಥಾಪನೆಗೊಳ್ಳುವಂತಾಯಿತು. ಶಂಕರರು ತಮ್ಮ ಸಿದ್ಧಾಂತವನ್ನು ಪ್ರತಿಪಾದಿಸಿರುವುದು ಸಂಸ್ಕೃತ ಭಾಷೆಯಲ್ಲಿ. ಸಂಸ್ಕೃತ ಭಾಷೆಯನ್ನು ದೇವರ ಭಾಷೆ ಎಂಬುದಾಗಿ ಪರಿಗಣಿಸಲಾಗಿತ್ತು. ಅದು ಜನಸಾಮಾನ್ಯರಿಗೆ ಎಟುಕುವಂತೆ ಇರಲಿಲ್ಲ. ಈ ಕಾರಣಗಳಿಂದಾಗಿ ಶಂಕರರು ಸಮಾಜದ ಕೆಳವರ್ಗಗಳಿಂದ ದೂರವೇ ಉಳಿದಿದ್ದರು ಎನ್ನುವುದು ತಿಳಿದುಬರುತ್ತದೆ. ಅವರು ನಡೆಸಿದ ಅಧ್ಯಯನ, ಪ್ರತಿಪಾದಿಸಿದ ತತ್ವಗಳು, ರಚಿಸಿದ ಗ್ರಂಥಗಳೆಲ್ಲವೂ ಧರ್ಮ ಕೇಂದ್ರಿತವಾಗಿದ್ದವು. ಶಂಕರರ ಅದ್ವೈತ ಸಿದ್ಧಾಂತವು ಧರ್ಮದ ತಾತ್ವಿಕ ಚರ್ಚೆಯನ್ನು ತೀಕ್ಷ್ಣಗೊಳಿಸಿ ವೈದಿಕಧರ್ಮವು ವಿಮರ್ಶೆಗೊಳ್ಳುವ ಮೂಲಕ ಹೆಚ್ಚಿನ ಪ್ರಚಾರ ಪಡೆಯುವಲ್ಲಿ ಯಶಸ್ಸು ಗಳಿಸಿತು.

ಡಾ॥ ಕೆ. ಮೋಹನ್‌ಕೃಷ್ಣ ರೈ
ಪ್ರಾಧ್ಯಾಪಕ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ವಿದ್ಯಾರಣ್ಯ - ೫೮೩ ೨೭೬




ನನ್ನಪ್ಪ ಬದುಕ ಕೊಟ್ಟಾತ
ಬದುಕಲು ಕಲಿಸಿದಾತ
ತನ್ನವ್ವ ಅಕ್ಕ-ತಂಗಿಯರು
ನರನರಳಿ ಸತ್ತಂತೆ
ಮಗಳ ಭವಿಷ್ಯ ಸಂಕಟದಲ್ಲಿ ಕರಕಾಗದಿರಲೆಂದು
ಹಣೆ ಬರವ ಬರೆವ ಶೆಟಗೆವ್ವನ
ಹುಗಿದು ಬರಲೆಂದು
ಅಡುಗೆ ಮನೆಯಿಂದ ಹೊರಗೆಳೆದು
ಹೆಗಲಿಗೊಂದು ಪಾಟಿಚೀಲ ಹಾಕಿದ.

ಶಾಲೆಗೆ ಹೋಗುವುದಿಲ್ಲವೆಂದು ಹಠಹಿಡಿದಾಗ,
ಅಕ್ಕಪಕ್ಕದ ಮನೆಯ ನನ್ನೋರಗೆಯ
ಪಾರಿ-ಸೀತೆ-ಸಾವಂತರಿಯರು ಖುರುಪಿ ಹಿಡಿದು
ಉಳ್ಳವರ ಹೊಲದಲ್ಲಿ ಕಸ ಕೆತ್ತಿ ಫಲ ಬಯಸದೆ
ಕೊಟ್ಟಷ್ಟೇ ಮಹಾಪ್ರಸಾದವೆಂದು ನಡೆದರೂ
ಬೀದಿ ಹೆಣವಾದದ್ದು ಕಂಡು ಕಣ್ಣೀರಿಟ್ಟ ಅಪ್ಪ,
ಬುದ್ಧ-ಫುಲೆ-ಬಸವ-ಅಂಬೇಡ್ಕರ್‌ರ
ಕಥೆ ಹೇಳಿ ಹುರಿದುಂಬಿಸುತ್ತಿದ್ದ.

ಅಕ್ಷರಗಳೊಂದಿಗೆ ಆರಳುತ್ತಿದ್ದ ನಾನು,
ಹಳ್ಳಿಯ ಜವಾರಿ ಭಾಷೆ-ವೇಷ ಕಂಡು
ಜನ ನಕ್ಕರು. ಕಾಲೇಜಿಗೆ ಹೋಗುವುದೇ
ಅಪರಾಧವಾಗಿದ್ದ ದಿನಮಾನಗಳಲ್ಲಿ
ಬಂದ ಅಪಮಾನಗಳಿಗೆಲ್ಲ ಅಪ್ಪ
ಅಕ್ಕನ ವಚನವನ್ಹೇಳಿ ಸಂತೈಸುತ್ತಿದ್ದ.

ಬದುಕ ಕಳಕೊಂಡರೂ ಬುದ್ಧಿಬಾರದ
ನಮ್ಮ ಜನ ''ಹುಚ್ಚು ಮಾಸ್ತರ ಮದ್ವಿ ಮಾಡಿ
ಕೊಡೋದು ಬಿಟ್ಟು ಸಾಲಿ ಕಲಿಸ್ತಾನ
ಈವಂಗೇನ್ ಲಾಭ ?''... ಎಂದು ನಕ್ಕಾಗ
ಅಪ್ಪ ನಕ್ಕು ನನ್ನ ಬೆನ್ನು ತಟ್ಟುತ್ತಿದ್ದ.

ಸ್ವಾಭಿಮಾನದ ಬದುಕು ನಮ್ಮದಾಗಬೇಕು
ಅಪ್ಪ-ಅಮ್ಮ, ಅಣ್ಣ-ತಮ್ಮ ದೂರಾದರೂ
ಅತ್ತೆ-ಮಾವ-ಗಂಡ ಹೊರಹಾಕಿದರೂ
ನೀ ಬದುಕಬೇಕು. ಹೊಲ-ನೆಲವಿಲ್ಲದ ನಾವು
ನೌಕರಿ ಮಾಡಬೇಕು.
ಅದು ನಮ್ಮ ಬದುಕನ್ನು ರಕ್ಷಿಸುತ್ತದೆ
ನಿನ್ನಂಥವರಿಗೆ ನೀ ಆಸರೆಯಾಗಬೇಕಾದರೆ
ಅಧಿಕಾರವಿರಬೇಕೆಂದು ಹೇಳುತ್ತಿದ್ದ
ಅಪ್ಪನ ಮಾತುಗಳಿಂದು ಹೊಳೆಯುತ್ತಿವೆ.

ಅಂದು ಹಂಗಿಸಿ ನಕ್ಕವರ ಬಾಯಿಗೆ ಬೀಗ ಬಿದ್ದಿದೆ
''ಖರೆ ಆಸ್ತಿ ಗಳಿಸಿದವರು ಅಂದ್ರ ನೀವ ನೋಡ್ರಿ
ಐದ ಮಂದಿ ಹೆಣ್ಮಕ್ಕಳನ ಓದ್ಸಿ ನೌಕರಿ ಹಿಡಿಸ್ರಿ'' ಎಂದು
ಸಹಪಾಠಿಗಳೆಲ್ಲ ಅಂದಾಗ
ಸಂತೋಷದ ಅಮಲಿನಲ್ಲಿ ಅಪ್ಪ ಮುಗಿಲು ಮುಟ್ಟುತ್ತಿದ್ದ.
ವಕ್ರಬುದ್ಧಿಯ ಊರ ಜನ
''ಏನೋ ಮಾಸ್ತರ ನಮಕ್ಕಿಂತ ಮುಂದ ಹೊಂಟೆಲ್ಲ'' ಎಂದಾಗ,
''ಮತ್ತಕ ಹೋಗಲೇಬೇಕಲ್ರಿ'' ಎಂದು
ಸರಳವಾಗಿ ನಕ್ಕ ಅಪ್ಪ.
ಅಂದು, ಪಿಸ್ತೂಲಿನ ಬಾಯಿಗೆ ಎದೆಕೊಟ್ಟು ಗರ್ಜಿಸಿದ
ಅಪ್ಪನ ಹೋರಾಟ ನನ್ನೊಳಗೆ ಶೆಲೆಯೊಡೆಯುತ್ತದೆ.

ನನ್ನ ಬರಹಕ್ಕೆ-ಬದುಕಿಗೆ ಜೀವಧಾರೆಯಾದ
ನನ್ನಪ್ಪ ಹೋರಾಟದ ಹಾದಿಯಲ್ಲಿ
ಮುಳ್ಳು-ಕಂಟಿಯ ನಡುವೆ
ನಲುಗಿದರೂ ಮನುಷ್ಯನಾಗಿ ನಿಂತ.

ಡಾ॥ ಅನಸೂಯ ಕಾಂಬಳೆ, ಸರಕಾರಿ ಪ್ರಥಮ ದರ್ಜೆ ಮಹಿಳಾ ಕಾಲೇಜು, ಜಮಖಂಡಿ, ಬಾಗಲಕೋಟ ಜಿಲ್ಲೆ

# ಕಥೆ ಮಾತ್ರವಿತ್ತು

**ವೆಂಕಟಾಚಲ**

**ನೇ**ಸರ ತನ್ನ ಕಾಯಕ ಮುಗಿಸಿ ಬೀಡಿಗೆ ಮರಳುವ ಸಮಯ. ಬಿಸಿಲಿನ ಬೇಗೆಯಲ್ಲಿ ಚಳಿಯ ಕೊರತೆ ಇಲ್ಲದ ಆಹ್ಲಾದಕರ ವಾತಾವರಣ. ಎರಡು ಹೆಜ್ಜೆಗಳು ಯಾಂತ್ರಿಕವಾಗಿ ದಾರಿಗುಂಟ ಬಂದು ಒಂದು ಕಡೆ ನಿಲ್ಲುತ್ತವೆ. ಏಕೋ ಏನೋ ಒಂದು ನಿಟ್ಟುಸಿರು. ತಲೆ ಎತ್ತಿ ಕಣ್ಣರಳಿಸಿ ನೋಡಲು ಎದುರುಗಡೆಯ ಸಂಕೀರ್ಣದಲ್ಲಿ ಕಲರವ. ಆಗತಾನೆ ಶಾಲೆಯಿಂದ ಬಂದ ಚಿಣ್ಣರ ದಬಾದುಬಿ ಸಡಗರ ಕೇಕೆ ಮರೆತ ಮನೆಮಾತು. ಅದೊಂದು ಸಾಯಂ ಸಂಭ್ರಮ.

ಸ್ವಲ್ಪ ದೂರದ ದೊಡ್ಡ ಶೆಡ್ಡಿನಿಂದ ಕಬ್ಬಿಣ ಕುಟ್ಟುವಂತ, ಯಾವುದೋ ಯಂತ್ರ ಗಿರಗಿರನೆ ತಿರುಗಿ ಏನೇನೋ ಕರ್ಕಶ ಶಬ್ದ. ಅದರ ಮೇಲ್ಕೊಳವೆಯಿಂದ ಧೂಮ ಹರಿದು ಬಚ್ಚಲುಸೇರುವ ಲೋಹ ಮಿಶ್ರಿತ, ರಾಸಾಯನಿಕ ಬೆರೆತ ಮಲಿನ ದ್ರವ. ಅದು ಹರಿಯುವೆಡೆ ಹಸಿರು ಬಣ್ಣ ಕಳೆದುಕೊಂಡ ಕಪ್ಪು ಕೆಂಪು ಮಿಶ್ರಿತ ಹುಲ್ಲು. ಹತ್ತಿರ ಸುಳಿದಾಡಿದರೆ ಗಬ್ಬುನಾತ.

ಇದನ್ನೆಲ್ಲಾ ನೋಡಿದ ಎರಡು ಕಣ್ಣುಗಳು ಮತ್ತೊಮ್ಮೆ ಅರ್ಧ ನೀಲಿಮದಲ್ಲಿ ಮತ್ತೊಂದು ನಿಟ್ಟುಸಿರು ಬಿಟ್ಟು ಹಣೆಯ ಗೆರೆಗಳಿಂದ ಸಣ್ಣ ಬೆವರೊಡೆದು ಅದೆಲ್ಲಿಗೋ ಜಾರಿತು.

ನಗರಕ್ಕೆ ಸಮೀಪವಿದ್ದ ಒಂದು ಹಳ್ಳಿ. ಅಲ್ಲೊಂದು ಸುಖೀ ಸಂಸಾರ. ಸ್ವಲ್ಪ ಹೆಚ್ಚೆನಿಸುವಷ್ಟು ಭೂಮಿ ಕಾಣಿ ಆಳುಕಾಳು ನಡೆದಿತ್ತು. ಸಮೃದ್ಧ ಜೀವನ. ಮನೆಯ ಯಜಮಾನ ಗತಿಸಿದ್ದ. ಏಕೈಕ ಪುತ್ರ ಯಜಮಾನನಾದ, ವಾಡಿಕೆಯಂತೆ. ಹೊರಗಿನ ವಹಿವಾಟೆಲ್ಲ ಮಗನದಾದರೂ ಮನೆಯ ಯಜಮಾನಿಕೆ ತಾಯಿ ಎಂಬ ಹಿರಿಯ ಹೆಂಗಸಿನದೇ. ಈಗಿನ ಯಜಮಾನನಿಗೆ ಮದುವೆಯಾಯ್ತು. ಮದುವೆಯಾಗಿ ಬಂದ ಏಕೈಕ ಸೊಸೆಯೇ ಕಥಾನಾಯಕಿ ತಂಗಮ್ಮ.

ತಂಗಮ್ಮ ಹೇಳುತ್ತಾರೆ... ''ನಾನು ಈ ಮನೆಗೆ ಸೊಸೆಯಾಗಿ ಬಂದ ಹೊಸತರಲ್ಲಿ ಎಲ್ಲಾ ಹೊಸತು. ಹೊಸ ಜಾಗ, ಹೊಸ ಜನ, ಹೊಸ ಜವಾಬ್ದಾರಿ. ಎಲ್ಲಾ ಗೊಂದಲಮಯ. ಮನೆಯಲ್ಲಿ ಧವಸಧಾನ್ಯ ತುಂಬಿತ್ತು. ಗಂಡಾಳು ಹೆಣ್ಣಾಳುಗಳಿದ್ದರು. ಬಹಳ ಜನಕ್ಕೆ ಅಡಿಗೆ ಜವಾಬ್ದಾರಿ. ತೋಟಕ್ಕೂ ಊಟ ಹೊರುವ ಬುತ್ತಿಕಾಯಕ ತಪ್ಪದೇ ನಡೆಯಬೇಕಿತ್ತು. ಅತ್ತೆ ಯಜಮಾನಿ. ಹೀಗೆ ಮಾಡು ಹಾಗೆ ಮಾಡು ಎಂಬ ಆಕೆಯ ಆಣತಿಯಂತೆ ಎಲ್ಲಾ ಕಲಿತು ಸರಿದೂಗಿಸಿಕೊಂಡು ಹೋಗುತ್ತಿದ್ದೆ. ನನ್ನ ಮೊದಲನೆಯ ಮಗ ಹುಟ್ಟಿದ. ತೌರಿಗೆ ಕಳುಹಿಸಲಿಲ್ಲ. ಎಲ್ಲಾ ಇಲ್ಲೇ ಆಯಿತು. ಎರಡನೇ ಮಗ, ಮೂರನೇ ಹೆರಿಗೆಯಲ್ಲಿ ಮಗಳು, ಎಲ್ಲಾ ಇಲ್ಲೇ. ನಾನು ತೌರಿಗೆ ಹೋದದ್ದೆ ಅಪರೂಪ. ಎಂದಾದರೂ ಹೋದರೆ ಮಕ್ಕಳನ್ನು ಇಲ್ಲೇ ಬಿಟ್ಟು ಒಂಟಿ ಹೋಗಬೇಕಿತ್ತು. ಅದೂ ಒಂದೆರಡು ದಿನದ ಮಟ್ಟಿಗೆ. ನನಗೆ ನನ್ನ ಮಕ್ಕಳನ್ನು ಎತ್ತಿಕೋಬೇಕು, ಮುದ್ದಾಡಬೇಕು, ಅವಕ್ಕೆ ತಿಂಡಿ ಸ್ನಾನ ಎಲ್ಲಾ ಮಾಡಿ ನಲಿಯಬೇಕೆಂಬುದು ಕನಸಾಗೇ ಉಳಿಯಿತು. ಎಳೇ ಮಕ್ಕಳಿಗೆ ಅತ್ತಾಗ ಸ್ತನ್ಯಪಾನ ಮಾಡಿಸಿದರೆ ಮುಗಿಯಿತು. ಅವುಗಳ ಲಾಲನೆ ಪಾಲನೆ ಎಲ್ಲಾ ನನ್ನ ಅತ್ತೆಯದೇ. ನಾನು ಮಕ್ಕಳ ಪಾಲಿಗೊಂದು ಫೀಡಿಂಗ್ ಬಾಟಲು ಅಷ್ಟೆ. ಅಯ್ಯೋ ಈ ಮಕ್ಕಳು ಅವರಮ್ಮನಿಗೆ ತೊಂದರೆ ಕೊಡ್ತಾವೆ, ಕೆಲ್ಸ ಮಾಡೋಕೇ ಬಿಡಲ್ಲ, ಆಳುಕಾಳಿಗೆಲ್ಲಾ ಅಡಿಗೆ ಆಗಬೇಕಲ್ಲ, ಅದಕ್ಕೇ ನಾನೇ ನೋಡ್ಕೋತೀನಿ, ಅನ್ನೋ ಉಡಾಫೆ ಉತ್ತರ. ನಾನು ಮಕ್ಕಳು ಹೆತ್ತು ಬಂಜೆಯಾಗಿದ್ದೆ. ಕರುಳು ಬಳ್ಳಿ ಚಿಗಿತು ಬಾಡಿತ್ತು.

ದಿನಮಾನಗಳು ಕಳೆದವು. ಮಕ್ಕಳು ಬೆಳೆದರು, ಮಗಳಿಗೂ ಮದುವೆ ಯಾಯ್ತು. ಅವರ ಮನೆಯಲ್ಲಿ ತುಂಬಾ ಕಟ್ಟುಪಾಡುಗಳಿರಲಿಲ್ಲ. ವಾರಕ್ಕೋ ತಿಂಗಳಿಗೋ ಮಗಳು ತೌರುಮನೆಗೆ ಬಂದು ಹೋಗುವ ಪರಿಪಾಠವಿತ್ತು. ಮೊದಲಿನಿಂದಲೂ ತಂಗಮ್ಮನ ಅಂಕೆಗೆ ಸಿಕ್ಕಿರಲಿಲ್ಲ ಅಥವಾ ಹೆಣ್ಣು ಮಗು ಅಡುಗೆ ಮನೆ ಕೆಲಸ ಕಲಿಯಲಿ ಅಂತಲೋ ಏನೋ ತಾಯಿಕಡೆ ಬಿಟ್ಟಿದ್ದಳು ಯಜಮಾನಿ ಅಜ್ಜಿ. ಹಾಗಾಗಿ ತಾಯಿಗೂ ಮಗಳಿಗೂ ಎಂಥದೋ ಸೆಳೆತ ಮಮಕಾರ ಪ್ರೀತಿಯ ಒಡಂಬಡಿಕೆ ಇತ್ತು ಅನ್ನುವುದಕ್ಕಿಂತ ಇದ್ದೇ ಇತ್ತು ಅಂಬೋಣ. ಅಜ್ಜಿಗೂ ವಯಸ್ಸಾಯ್ತು, ಎಂದೋ ಒಂದು ದಿನ ಇಹ ತ್ಯಜಿಸಿದಳು. ನನಗೆ ಮನೆಯ ಯಜಮಾನಿ ಪಟ್ಟ ಸಿಕ್ಕೇಬಿಟ್ಟಿತು.

ಹಿರಿಯ ಮಗ ಬೆಳೆದು ಸ್ವಲ್ಪ ವಿದ್ಯಾವಂತನಾಗಿದ್ದ. ನಗರದ ವ್ಯಾಪ್ತಿ ಹಿಗ್ಗತೊಡಗಿತು. ಜಮೀನು ವಹಿವಾಟು ಇಲ್ಲಿಯವರೆಗೂ ಬಂದೇಬಿಟ್ಟಿತು, ಅನಿವಾರ್ಯ ಎಂಬಂತೆ. ಹುಡುಗನಿಗೆ ಮಿತ್ರರು ಸಿಕ್ಕಿದರು. ಕೆಲವು ಜಮೀನು ಮಾರಾಟದ ಮಧ್ಯಸ್ಥಿಕೆಯಲ್ಲಿ ದುಡ್ಡು ಸೇರಿತು. ಕಮೀಷನ್, ಬ್ರೋಕರೇಜ್ ಅನ್ನೋ ಹೆಸರಿನಲ್ಲಿ ದುಡ್ಡು ಸೇರುತ್ತಾ ಸೇರುತ್ತಾ ಕಾಲೇಜು ಬಿಟ್ಟ. ಹಣ್ಣು ಹಂಪಲು ಸಗಟು ವ್ಯಾಪಾರ, ತರಕಾರಿ ವಿಲೇವಾರಿಯಲ್ಲಿ ಏನೋ ಕೈ ಚಳಕ ನಡೆಯುತ್ತಿದೆ ಎಂಬ ಗುಮಾನಿ ತಂದೆಗೆ ಬಂದೇಬಿಟ್ಟಿತು. ಮನೆಗಳ ಬಾಡಿಗೆ ಹಣ ಎಲ್ಲಾ ದುರುಪಯೋಗವಾಗುತ್ತಿದೆ ಅನ್ನುವ ವಾಸನೆ ಮೂಗಿಗೆ ಬಡಿಯಿತು. ಆಗತಾನೆ ಮದುವೆಯೂ ಆಗಿತ್ತು. ಹುಡುಗ ದುಡ್ಡು ಕಾಸು ವ್ಯವಹಾರದಲ್ಲಿ ತಲೆಹಾಕಿ ಒಂದು ಜಬರ್‌ದಸ್ತ್ ಮಾತುಗಾರನಾದ ಹಾಗೂ ಎಲ್ಲಿ ಏನು ಎಂದು ಕ್ಯಾತೆ ತೆಗೆಯುತ್ತಿದ್ದ. ತಂದೆಗೆ ಪ್ರತಿದಿನ ಮಂಡಿ ಕಡೆ ಹೋಗುವ ಜರೂರಿರುತ್ತಿರಲಿಲ್ಲ ಎಂದು ತಿಳಿಯಲು ಬಹಳ ಸಮಯ ಬೇಕಾಗಲಿಲ್ಲ. ಪತ್ತೆದ್ದಾರಿ ಕಾರ್ಯ ಆರಂಭವಾಯ್ತು. ಮಿತ್ರರು ನಿಮ್ಮ ತಂದೆ ಇಂತ ಕಡೆ ಓಡಾಡುತ್ತಾರೆ ಎಂಬ ಸುಳಿವು ಕೊಟ್ಟರು. ಖುದ್ದು ತಾನೇ ಪರಾಂಬರಿಸಿದಾಗ ಸತ್ಯಾಸತ್ಯ ಕಂಡಿತು. ತಂದೆಯ ಕಚ್ಚೆಹರುಕುತನ ಅದರಿಂದ ಪೋಲಾಗುವ ಹಣ ಎಲ್ಲಾ ಗೊತ್ತಾಗಿ ಮನೆಯಲ್ಲಿ ಶೀತಲ ಸಮರ ಆರಂಭಿಸಿಯೇ ಬಿಟ್ಟ. ಹೊಸ ಸೊಸೆಯ ಮುಂದೆ ತನ್ನ ಮಾನಹರಣ ವಾಗುತ್ತಿರುವುದನ್ನರಿತ ತಂದೆ ಮೂಕನಾದ, ಖಿನ್ನನಾದ. ತಂಗಮ್ಮನ ಅವಗಣನೆಗೂ ಪಾತ್ರನಾದ. ಒಂದು ದಿನ ಹಿರಿಯ ಮಗ ತಂದೆಯಿಂದ ತಿಜೋರಿಯ ಬೀಗದ ಕೈಯನ್ನು ತನ್ನ ವಶಕ್ಕೆ ತೆಗೆದುಕೊಂಡು ವಹಿವಾಟನ್ನೆಲ್ಲಾ ತಾನೇ ಮುಂದುವರಿಸಿದ. ಮನೆಯ ವಾತಾವರಣ ಬದಲಾಯಿತು. ತಂಗಮ್ಮನ ಮನಸ್ಸೂ ಬದಲಾಯಿತು.

ನನ್ನ ಮುದ್ದು ಮಗಳು ಹೆರಿಗೆಯಲ್ಲಿ ತೀರಿಕೊಂಡಳು. ಕೂಸನ್ನು ಅವಳ ಅತ್ತೆ ಮನೆಯವರೇ ಉಳಿಸಿಕೊಂಡರು. ಹೀಗೆ ದುಃಖದ ದಿನಗಳು ಉರುಳುತ್ತಿರಲು ನನ್ನ ಎರಡನೇ ಮಗನಿಗೂ ಮದುವೆ ಆಯಿತು. ಮನೆ ಸಾಕಷ್ಟು ದೊಡ್ಡದಾಗೇ



ಇತ್ತು. ಇಬ್ಬರು ಸೊಸೆಯಂದಿರೂ ಅಲ್ಲೇ ನೆಲಸಿದ್ದರು. ವರುಷಗಳು ಹೀಗೇ ಉರುಳಿದವು. ಜೀವನವೂ ಹಾಗಾಗೇ ನಡೆಯುತ್ತಿತ್ತು, ಹೆಚ್ಚಿನ ಏರುಪೇರುಗಳಿಲ್ಲದೆ.

*　　*　　*

ಬಾಡಿಗೆ ಮನೇಲಿ ವಾಸವಾಗಿದ್ದ ಆಕೆಯ ಗೆಳತಿ ಬಂದಾಗ ತೋಟದ ಬಗ್ಗೆ, ತನ್ನ ಆತಂಕಗಳ ಬಗ್ಗೆ ಉದ್ದುದ್ದಾಗಿ ಮನಸ್ಸಿನಲ್ಲಿ ಇದ್ದುದನ್ನೆಲ್ಲಾ ಬಡಬಡಿಸಿದಳು. ತನ್ನ ದುಃಖ ತೋಡಿಕೊಂಡಳು.

ಆಕೆಯ ಹತ್ತಿರ ಸ್ನಾನದ ವಿಷಯ ಪ್ರಸ್ತಾಪ ಮಾಡಿದ ತಂಗಮ್ಮನ ಮನಸ್ಸಿನಲ್ಲಿ ಸ್ನಾನದ ಘಮ ಇನ್ನೂ ಹೊಡೆಯುತ್ತಿತ್ತು. ಸೌದೆಯ ಕೊರಡಲ್ಲಿ ಒಲೆ ಉರಿಸಿದ್ದು. ಆ ಸಣ್ಣ ಹೊಗೆ ಮೂಗು ಕಣ್ಣು ಹೊಕ್ಕು ಮುಖವೆಲ್ಲಾ ಕೆಂಪಾಗಿ ನೀರು ಸುರಿಯುತ್ತಿತ್ತು. ಆ ಸೀಗೆಯ ಘಮ ತಲೆ ಕೂದಲನ್ನು ಒಪ್ಪ ಮಾಡಿತ್ತು. ತೋಟದ ಗಿಡಗಳಲ್ಲಿ ಕೇಳಿದ್ದ ನೆರಳಿನ ಹಾಡು ಅನಾಯಾಸವಾಗಿ ಸ್ನಾನದ ಮನೆಯ ಹಾಡಾಗಿ ತಂಗಮ್ಮ ನಾಚಿಕೆಯಿಂದ ತುಟಿ ಕಚ್ಚಿಕೊಂಡಿದ್ದಳು. ತಂಗಮ್ಮ ಎಂದೂ ಹಾಡಿದ್ದೇ ಇಲ್ಲ, ಆಕೆಯದು ಬರೀ ಬವಣೆ ಹಾಡು. ಮನಸ್ಸಿನಲ್ಲೇ ತಿರುಗಿ ತಿರುಗಿ ಅಲ್ಲೇ ಗಿರಕಿ ಹೊಡೆದು ಸಾಯುತ್ತಿತ್ತು. ಈ ದಿನದ ಸ್ನಾನದಲ್ಲಿ ಅದೆಂತದೋ ಮಜ, ಉಲ್ಲಾಸ. ಕಣ್ಣು ಮೂತಿ ಎಲ್ಲಾ ಹೊಗೆಯಿಂದ ಉರಿ ಉರಿ ಕೆಂಪಾದರೂ ಆಹಾ ಅದೇನು ಉಲ್ಲಾಸ. ಇನ್ನು, ಅಭ್ಯಂಜನ ಸ್ನಾನದ ಗಮ್ಮತ್ತೇ ಬೇರೆ. ಈ ರೀತಿ ಸ್ನಾನದ ಅನುಭವ ಬೇರೆ ರೀತಿಯಲ್ಲಿ ಸಿಗಲಿಕ್ಕೆ ಸಾಧ್ಯವೇ ಇಲ್ಲ ಅಂತ ಬೀಗುತ್ತಿದ್ದಳು. ಎಲ್ಲಾ ಕ್ಷಣಿಕ, ರಾತ್ರಿ ಎಂಟೊಂಬತ್ತು ಗಂಟೆಗೆ ಒಬ್ಬೊಬ್ಬರೇ ಮನೆಯೆಂಬ ಗೂಡಿಗೆ ಮರಳುತ್ತಾ ಎಂದಿನ ದೀಪದ ನೆರಳು ಸರಿದಾಡತೊಡಗಿತು.

'ಅಮ್ಮಾ ಕಾಫಿ ಕೊಡಮ್ಮ, ಎಲ್ಲಿ ಹೊರಟು ಹೋಗಿದ್ದೆ.' ಪಕ್ಕದ ಮನೆಯಿಂದ ಶಬ್ದ. ಇಬ್ಬರು ಗೆಳೆಯರೊಡನೆ ತಂಗಮ್ಮನ ಹಿರಿಯಮಗನ ಸೇರ್ಪಡೆ. ಹರಟೆಗೆ ಸ್ಫೂರ್ತಿ. ಒಬ್ಬೊಬ್ಬರದೂ ಒಂದೊಂದು ಮಾತು. ಅದು ಅನುಭವವೋ, ಎಲ್ಲೋ ಏನೋ ಕೇಳಿದ ಮಾತೋ ಅನ್ನುವ ಅನುಮಾನದಲ್ಲಿ ಒಣ ಚರ್ಚೆ ಸಾಗಿತ್ತು. ಕಾಫಿ ಬಂತು. ತಂಗಮ್ಮನ ಹಿರೇಮಗ 'ಏನ್ ಆಂಟಿ ಚೆನ್ನಾಗಿದ್ದೀರಾ ? ಮನೆಯಲ್ಲಿ ನಮ್ಮ ಅಮ್ಮ ಇದ್ದಾರಾ ?' ಅಂದಾಗ, ಆಂಟಿ 'ಹೂ ಅಲ್ಲೇ ಇಲ್ದೆ ಇನ್ನೆಲ್ಲಿ ಹೋಗ್ತೀವಿ ನಾವು ? ಅದ್ಸರಿ ಈಗ ಸ್ವಲ್ಪ ಹೊತ್ತಿಗೆ ಮುಂಚೆ ನಿನ್ನ ಅಮ್ಮ ಯಾರಿಗೋ ಭಿಕ್ಷೆ ಕೊಟ್ಟರು. ಅದಕ್ಕೆ ಆ ಭಿಕ್ಷುಕ ತಂಗಮ್ಮನನ್ನು ಅಮ್ಮ ಅಂದಳು. ಏನು ಹಂಗಂದ್ರೆ ಅಂತ ಗೊತ್ತಾಗಲಿಲ್ಲ. ತಂಗಮ್ಮನನ್ನು ಕೇಳಿದೆ, ಏನು ಅದು ಗೊಣಗಿದ್ದಾ ಬೈದದ್ದಾ ಅಂತ.' (ತಂಗಮ್ಮ ಉತ್ತರಿಸಲಿಲ್ಲ, ಆಕೆಯ ಮುಖದಲ್ಲಿ ವಿಷಾದವಿತ್ತಾ ಉಹುಂ, ಬೇಜಾರಿತ್ತಾ ಗೊತ್ತಿಲ್ಲ, ನಗು ಮೂಡಿತ್ತಾ, ಕಾಣ್ತಾ ಇರಲಿಲ್ಲ, ಏನೋ ಒಂದು ಥರಾ ನಿರ್ಲಿಪ್ತತೆ ಇತ್ತು ಅನಿಸಿತ್ತು. ಇದು ಆಂಟಿಯ ಸ್ವಗತ). ಆಂಟಿ ತಂಗಮ್ಮಾನ ಅಮ್ಮ ಅಂದರೆ ಚಿನ್ನದಂಥ ಅಮ್ಮ ಚಿನ್ನದಂಥ ಹೆಂಗಸು ಅಂತ ಅಷ್ಟೆ ನೋಡಿ. ನಮ್ಮ ಮನೆಮಾತು ಕನ್ನಡ ಮಿಶ್ರ ತೆಲುಗು. ನಿಮ್ಮ ಮನೆಮಾತು ಕೊಂಕಣಿ ಅಂತ ಹೇಳಿದ್ದಿರಿ. ಅದು ನೆಪಮಾತ್ರಕ್ಕೆ. ನಮ್ಮಲ್ಲಿ ನೂರಾರು ಭಾಷೆಗಳು. ಒಬ್ಬರ ಮಾತು ಮತ್ತೊಬ್ಬರಿಗೆ ಅರ್ಥವಾಗೋದಿಲ್ಲ. ಆದ್ದರಿಂದಲೇ ಏನೋ ಒಬ್ಬರನ್ನೊಬ್ಬರು ಸುಲಭವಾಗಿ ಅರ್ಥಮಾಡಿಕೊಳ್ಳುವುದಿಲ್ಲ ಅಥವಾ ಅರ್ಥವಾಗೋದಿಲ್ಲ. "ಭಾಷೆ ಗೊಂದಲಗಳು ನಮ್ಮ ದೇಶದ ದುರಂತ, ಹೌದಪ್ಪ," ಎಂದು ಆಂಟಿ ಒಳನಡೆದರು. ಈ ಕಡೆ ಆ ಮಿತ್ರರ ಚರ್ಚೆ ಮುಂದುವರಿಯಿತು. "ಬಿ.ಡಿ.ಎ.ನಲ್ಲಿ ಒಂದೇ ಸೈಟನ್ನು ಇಬ್ಬಿಬ್ಬರಿಗೆ ಅಲಾಟ್ ಮಾಡಿದ್ದಾರಂತೆ. ಅದಿರಲಯ್ಯ, ನಮ್ಮ ಊರಲ್ಲಿ ಬಾರ್ಕೂರು ಸಾಲೆ ಕೇರಿಯಲ್ಲಿ ನಮ್ಮ ಚಿಕ್ಕಪ್ಪನ ಮನೆ ಮಟಾಶ್. ನಮ್ಮ ಚಿಕ್ಕಪ್ಪನ ದಾಯಾದಿಗಳು ಯಾರೋ ಅವರ ಮನೆಯನ್ನು ಕೆಡವಿ ಬೇರೆ ಮನೆ ಮಾಡಿದ್ದಾರಂತೆ. ಅದಕ್ಕೆ ಫಾರಂ ನಂ.ಒಂಬತ್ತು ಹತ್ತು ಪಡೆದಿದ್ದಾರಂತೆ. ಲಂಚ ಕೊಟ್ಟು, ಈಗ ಅದನ್ನು ಸರಿಮಾಡಿಸುವುದಕ್ಕೆ ಎ.ಸಿ, ಡಿ.ಸಿ. ಅವರಿಗೆ ಸಾಧ್ಯವಂತೆ. ಈಗ ಅಲ್ಲೆಲ್ಲಾ ಸುತ್ತೋದಕ್ಕೆ ಖರ್ಚು ಅಂದರೆ ಮತ್ತೆ ಲಂಚ, ಸಮಯವೆಲ್ಲಾ ಹಾಳು. ಅಲ್ಲಯ್ಯ, ಈ ರೆವಿನ್ಯೂನವರಿಗೆ ನೀನು ಆ ಜರ್ಮನಿಯ **ದಿ ಪ್ಯಾಸೇಜ್** ಸಿನಿಮಾ ನೋಡಿದೆಯಲ್ಲಾ, ಅಲ್ಲಿ ನೋಡು, ಯಾವ ರೀತಿ ಬೆರಳು ಕತ್ತರಿಸುತ್ತಾರೆ, ಪೆಟ್ರೋಲೋ ಸೀಮೆಎಣ್ಣೆನೋ ಹಾಕಿ ಆ ಸಿಗಾರ್ ನಿಂದಲೇ ಯಾವ ರೀತಿ ಸುಡುತ್ತಾರೆ. ಅಬ್ಬಬ್ಬಾ, ಏನು ಭಯಂಕರ! ಅದೊಂದೇ ಅಲ್ಲಯ್ಯಾ, ಗಲ್ಫ್ ದೇಶಗಳಲ್ಲಿ ಶಿಕ್ಷೆಯ ಪ್ರಮಾಣ ವಿಪರೀತವಂತೆ. ಅಲ್ಲಿ ಝೀರೋ ಪರ್ಸೆಂಟ್ ಕ್ರೈಂ ಅಂತೆ. ಐ ಫಾರ್ ಐ, ಟೂತ್ ಫಾರ್ ಟೂತ್ ಅಂತೆ. ಇಂತಹ ದೇಶಗಳನ್ನು ನೋಡಿಯಾದರೂ ನಾವು ಕಲಿಯಬೇಡವೇನಯ್ಯ ? ನಾವು ಕಲಿಯೋದರಲ್ಲಿ ತುಂಬಾ ತುಂಬಾ ನಿಧಾನ. ಅದೇ ಕೆಟ್ಟದ್ದನ್ನು ಕಲಿಯೋದರಲ್ಲಿ ಪ್ರಪಂಚಾನೇ ಮೀರಿಸ್ತೀವಿ ಅಲ್ವೇನಯ್ಯ? ನೋಡು, ನಮ್ಮ ಬಾರ್ಕೂರು ಹತ್ತಿರ ನಮ್ಮ ಸಂಬಂಧಿಯೊಬ್ಬರು ಯಾವುದೋ ಒಂದು ಮುದುಕಿಯನ್ನು ಆಫೀಸಿಗೆ ಕರೆದುಕೊಂಡು ಹೋಗಿ, ಆಕೆನೇ ತನ್ನ ಅಜ್ಜಿ ಅಂತ ತೋರಿಸಿ, ಮೊದಲೇ ಎಲ್ಲಾ ಸಿದ್ಧತೆಗಳನ್ನು ಮಾಡಿಕೊಂಡು, ಎಲ್ಲಾ ಚರಾಸ್ತಿಯನ್ನು ತನ್ನ ಪಾಲಿಗೆ ರಿಜಿಸ್ಟರ್ ಮಾಡಿಸಿಕೊಂಡಿದ್ದಾನೆ. ಒರಿಜಿನಲ್ ಅಜ್ಜಿ ಯಾರ ಮನೆಯಲ್ಲೋ ಒಂದು ವಾರದ ನಂತರ ಢಮಾರ್. ಇಬ್ಬರು ಮುದುಕಿಯರೂ ಹೆಬ್ಬೆಟ್ಟಿನವರೇ. ಆದ್ದರಿಂದ ವ್ಯವಹಾರ ಸಲೀಸು. ಯಾವ ನೆಂಟರಿಗೂ ಇದರ ಸುಳಿವಿಲ್ಲ. ದುಡ್ಡು ಕೊಟ್ಟು ಮೊಕ್ಕಾಂ ಪತ್ರ ಪಡೆದಿದ್ದಾರೆ. ಎಷ್ಟೋ ವರುಷಗಳ ನಂತರ ಬೆಳಕಿಗೆ ಬಂದರೂ ಅದಕ್ಕಾಗಿ ಬಡಿದಾಟ. ಖರ್ಚು ವಿಪರೀತ. ಎಲ್ಲಾ ಆಯಿತು ಅಂದರೂ ಯಾರಿಗೂ ಶಿಕ್ಷೆಯಿಲ್ಲ. ಎಲ್ಲಾ ಕಡೆ ಇದರ ಮುಂದುವರಿಕೆ. ಏನೇನೋ ಸಬೂಬು. ಶಿಕ್ಷೆಯ ಸುಳಿವೇ ಇಲ್ಲ. ಮೊನ್ನೆ ಒಂದು ತಮಾಷೆ ಗೊತ್ತಾ? ಒಬ್ಬ ಕಳ್ಳ ಕಳ್ಳತನಕ್ಕೆ ಹೋಗಿ ಸಿಕ್ಕಿ ಹಾಕಿಕೊಂಡಿದ್ದಾನೆ. ಒಡವೆ ಅದೋ ಇದೋ ಗಂಟು ಕಟ್ಟಿಕೊಂಡಿದ್ದಾನೆ. ಮನೆಯವರು ಚೆನ್ನಾಗಿ ಬಾರಿಸಿ ಪೊಲೀಸಿಗೆ ಕೊಟ್ಟಿದ್ದಾರೆ. ಕಳ್ಳ ಕೊನೇಗೆ ಹೇಳಿಕೆ ಕೊಟ್ಟಿದ್ದೇನು ಗೊತ್ತಾ? ಅವರ ಮನೆ ಹೆಣ್ಣುಮಗಳು ನನ್ನನ್ನು ಪ್ರೀತಿಸಿದ್ದಾಳೆ. ಜಾತಿ ಗೊಂದಲದಿಂದ ನಾವು ಬೇರೆ ಕಡೆ ಹೋಗಿ ಬದುಕುತ್ತೇವೆ. ಅದಕ್ಕೆ ನಾವು ಒಡವೇ ವಸ್ತು ಸಾಗಿಸುತ್ತಿದ್ದೇವೆ. ಹಿಂದೇನೂ ನಾವು ರಾತ್ರಿ ಸಂಧಿಸುತ್ತಾ ಇದ್ದೆವು, ಎಂಬ ಹೇಳಿಕೆ. ಕಳ್ಳನಿಗೆ ನಲವತ್ತೈದು ವರುಷ, ಹುಡುಗಿಗೆ ಹನ್ನೆರಡು ವರ್ಷ. ಪ್ರಪಂಚ ತಿಳಿಯದ ಅಮಾಯಕ ಹುಡುಗಿ. ಈ ಘಟನೆಯ ಹಿಂದೆ ಯಾರ ಕೈ ಬಾಯಿ ಕೆಲಸ ಮಾಡಿದೆ, ಊಹಿಸಿ. ನಾವು ಏನಾಗುತ್ತಿದ್ದೇವೆ, ದೇಶ ಯಾವ ಕಡೆ ಸಾಗುತ್ತಿದೆ ಅಂತ ಯೋಚಿಸಿದರೆ ತಲೆ ಕೆಡುತ್ತೆ. ಈ ತಮಾಷೆ ನೊಡ್ರಯ್ಯ, ಒಂದು ಜಮೀನಿಗೆ ಕನ್ವರ್ಷನ್ ಫೀಸಿಗೆ ಉಂಡೆ ನಾಮ ತಿಕ್ಕಿ ದುಡ್ಡು ಇವರವರಲ್ಲೇ ಹಂಚಿಕೆಯಾಗಿ ಸೈಟು ವಿಂಗಡಿಸಿ ಮಾರಿಕೊಂಡಿದ್ದಾರೆ. ಕೆಲವು ಹಳ್ಳಿ ಮುಗ್ಧರಿಗೆ, ಈ ರೆಕಾರ್ಡು ತರಬೇಕು ಆ ರೆಕಾರ್ಡು ತರಬೇಕು, ಅದಕ್ಕೆಲ್ಲಾ ಖರ್ಚು ಅವರೇ ಮಾಡ್ತಾರೆ. ನೀವು ಇಲ್ಲಿ ರುಜು ಹಾಕಿ. ಪರ್ಮಿಷನ್ ಬಂದ್ಮೇಲೆ ರಿಜಿಸ್ಟ್ರೇಷನ್, ಆಗ ನಿಮಗೆ ದುಡ್ಡು, ಈಗ ಬೇಕಾದರೆ ಸ್ವಲ್ಪ ಅಡ್ವಾನ್ಸ್ ತೆಗೆದುಕೊಳ್ಳಿ ಎಂಬ ನಾನಾ ತರಹದ ಪೂಸಿ ಮಾಡಿ ಬ್ರೋಕರುಗಳು ರಿಜಿಸ್ಟ್ರೇಷನ್ ಮಾಡಿಸಿಬಿಟ್ಟಿದ್ದಾರೆ, ಯಾವಯಾವುದೋ ದೊಡ್ಡ ಕಂಪನಿಗಳ ಪರವಾಗಿ. ಈ ಜನಕ್ಕೆ ಇನ್ನೂ ಬಂದಿಲ್ಲ ಪರ್‌ಮಿಷನ್. ಬರುತ್ತೆ ಅಂತ ದಿನದೂಡಿ ಅವರಿಗೆ ಗೊತ್ತಾಗುವ ವೇಳೆಗೆ ಸತ್ಯದಿಂದ ವಂಚಿತರಾಗಿ ಎಷ್ಟೋ ಜನಕ್ಕೆ ಹೃದಯಾಘಾತ. ಇನ್ನು, ಕೆರೆ, ಗೋಮಾಳ, ಕೊನೆಗೆ ಸ್ಮಶಾನ ಎಲ್ಲವೂ ಮಾರಾಟ. ಈ ಮೋಸಾಟಕ್ಕೆ ಕೊನೆಯೇ ಇಲ್ಲ. ಇದು ತಿಳುವಳಿಕೆ ಇಲ್ಲದವರ ಕಥೆಯಾದರೆ, ತಿಳುವಳಿಕೆ ಇದೆ ಎಂದು ತಿಳಿದವರ ಪಾಡು ನಾಯಿ ಪಾಡು. ಈ ರಾಜಕೀಯ ಪುಢಾರಿಗಳಿಗೆ ಎಲ್ಲಿಂದ ಬರುತ್ತೆ ದುಡ್ಡು? ಎಲ್ಲಾ ಜನರಿಗೆ ಮೋಸ ಮಾಡಿದ ದುಡ್ಡೇ! ದೇಶದ ವ್ಯವಸ್ಥೆಯೇ ಹಾಳಾಗಿದೆ.

## ಮಹಾಸತಿ



**ಚಂ**ದಿರನ ತೋರಿ, ಮೊಗೆ
ಮೊಗೆದು ಕುಡಿಸುವಳು ತಾರೆ,
ಕಂದ ಬುಧನಿಗೆ
ರಜಸತ್ವಗಳ ಧಾರೆ ;
ಸರಿ, ಆದರೆ...
ಅವಳ ಮುಖವೇಕೆ ಓರೆ ?
ಧ್ಯಾನ ಭಂಗವಾಗಬಾರದು ನೋಡಿ,
ತನ್ನ ಪತಿಗೆ-
ಬೃಹಸ್ಪತಿಗೆ !

* ಬೃಹಸ್ಪತಿ ಋಷಿಯ ಹೆಂಡತಿ ತಾರೆ, ಚಂದ್ರನನ್ನು ಮೋಹಿಸಿ ಬುಧನನ್ನು ಪಡೆಯುತ್ತಾಳೆನ್ನುವುದು ಪುರಾಣ ಪ್ರಸಿದ್ಧ ವಿಚಾರ.

**ಅಲಕ ತೀರ್ಥಹಳ್ಳಿ**, ಅಲಕ, ನಂ. ೮೨, ತ್ಯಾಗರಾಜ ರಸ್ತೆ,
ಸೀಬಿನಕೆರೆ ಅಂಚೆ, ತೀರ್ಥಹಳ್ಳಿ - ೫೭೭ ೪೩೨

ಅಲ್ರಯ್ಯ, ಈ ಆ್ಯಸಿಡ್ ಎರಚುವುದು ಅಂದರೆ ಏನು ? ಎಷ್ಟು ಯಾತನಾಮಯ ದೃಶ್ಯ ! ಒಂದುವೇಳೆ ಕುರೂಪಿ ಹೆಂಗಸರೂ ದಕ್ಕದ ಗಂಡಸರಿಗೆ ಇದೇ ರೀತಿ ಆ್ಯಸಿಡ್ ಹಾಕಿದರೆ ಸಮಾಜದ ಗತಿಯೇನು ? ಆ್ಯಸಿಡ್ ಹಾಕಿ ಜೈಲಿಗೆ ಹೋದ ವ್ಯಕ್ತಿ ಮತ್ತೆ ಬೇಲ್ ಮೇಲೆ ಜೈಲಿಂದ ವಾಪಸ್. ಭ್ರಷ್ಟಾಚಾರಿಗಳು, ಕೊಲೆಗಡುಕರು ಎಲ್ಲಾ ದುಡ್ಡಿದ್ದವರು, ರೆಸಾರ್ಟ್‌ಗಳಲ್ಲಿ ಅನ್ಯಾಯ ಮಾಡುವವರು, ರಾಜಕಾರಣಿಗಳು, ಅವರ ಚೇಲಾಗಳು... ಹೀಗೇ ಇನ್ನೂ ಅನೇಕರು ಶಿಕ್ಷೆಗೇ ಸಿಕ್ಕದೆ ನುಸುಳಿಕೊಂಡರೆ ಇದೆಂತಾ ವ್ಯವಸ್ಥೆ. ಇನ್ನು ಸೀಮೆಎಣ್ಣೆ, ಕೊನೆಗೆ ಸೌದೆಒಲೆ. ಎಲ್ಲಂದರಲ್ಲಿ ಸುಡಲ್ಪಟ್ಟವರಿಗೆ ನ್ಯಾಯ ಸಿಗೋದಾದರೂ ಹೇಗೆ ? ಯಾವಾಗ ? ಎಷ್ಟೋ ಜನಕ್ಕೆ ಅವರು ಸತ್ತೇಹೋದರೂ ಸಿಗದ ನ್ಯಾಯದ ವ್ಯವಸ್ಥೆ! ಅಬ್ಬಾ ಎಷ್ಟು ಬೇಜಾಗರುತ್ತೆ!''

ನೋಡ್ರಪ್ಪಾ, ಮನುಷ್ಯನ ಆಯುಪ್ರಮಾಣ ನಿಮಗೆ ಗೊತ್ತಿದೆ. ಈ ದೇಶದಲ್ಲಿ ನಮಗೆಲ್ಲಾ ಉದ್ಯೋಗ ಇಲ್ಲ. ಫ್ಯಾಕ್ಟರಿಗಳು ಮುಚ್ಚಿಹೋಗ್ತಾ ಇವೆ. ಇಲ್ಲಿ ಒಳಸಂಚುಗಳು. ಬೇರೆ ಯಾರಿಗೂ ನೆಮ್ಮದಿಯಿಲ್ಲ. ಇಲ್ಲಿ ಹೀಗೇ ನರಳಿ ನರಳಿ, ಯೋಚನೆ ಮಾಡಿ ಮಾಡಿ ಹೀಗೆ ಸಾಯೋದಕ್ಕಿಂತ, ಈಗ ಪಾಸ್‌ಪೋರ್ಟ್ ಸರಳೀಕರಣ ಮಾಡಿದ್ದಾರಂತೆ. ಸ್ವಚ್ಛ ಗಾಳಿ, ೨೪ ಗಂಟೆ ವಿದ್ಯುತ್, ನೀರು, ಒಳ್ಳೆ ರಸ್ತೆ, ಕುಡಿಯುವ ನೀರು, ಝೀರೋ ಪರ್ಸೆಂಟ್ ಕ್ರೈಂ, ನೆಮ್ಮದಿ ಜೀವನ ಇದನ್ನೆಲ್ಲಾ ಸ್ವಲ್ಪ ಸಮಯವಾದರೂ ಅನುಭವಿಸಿ ಸಾಯೋಣ. ಈ ಕೆಟ್ಟ ವ್ಯವಸ್ಥೆಯನ್ನು ಸರಿ ಮಾಡೋದಕ್ಕೆ ಸಾಧ್ಯವೇ ಇಲ್ಲ ಅನ್ನುವ ಮಟ್ಟಕ್ಕೆ ಕೆಟ್ಟಿದೆ. ಭ್ರಷ್ಟಾಚಾರ ಮಿತಿ ಮೀರಿದೆ. ಅಲ್ಲಾ, ನಮ್ಮ ದೇಶದ ನೇತಾರರೇ ಹೇಳ್ತಾರೆ, ಭ್ರಷ್ಟಾಚಾರ ಯಾವ ದೇಶದಲ್ಲಿಲ್ಲ, ಎಲ್ಲಾ ಕಡೆ ಇದೆ ಇದಕ್ಕೆ ನಾವೇನು ಹೊರತಲ್ಲ ಅಂತ. ಈ ರೀತಿ ಹೇಳಿಕೆ ಕೊಟ್ರೆ ಪರಿಣಾಮ ಏನು ಎಂಬ ಜ್ಞಾನವೇ ಇಲ್ಲ. ಎಷ್ಟು ಮಾತಾಡಿದ್ರು ಅಷ್ಟೆ. ಏನ್ರಪ್ಪಾ, ನಾಳೇನೇ ಪಾಸ್‌ಪೋರ್ಟ್ ಅರ್ಜಿ ಗುಜರಾಯಿಸೋಣವೇ ? ಎಂದಿತು ಒಂದು ಕೂಗು.

ಮತ್ತೊಂದು ಕೂಗು ನಿಧಾನವಾಗಿ, ಅಲ್ರಯ್ಯ ಎಲ್ಲರೂ ಪಲಾಯನವಾದ ಅನುಸರಿಸಿದರೆ ಈ ದೇಶದ ವ್ಯವಸ್ಥೆ ಸುಧಾರಿಸುವವರು ಯಾರು ? ಇಲ್ಲಿ ಹುಟ್ಟಿದ್ದಕ್ಕೆ ಒಂದು ಚೂರು ವ್ಯವಸ್ಥೆಯನ್ನು ಸುಧಾರಿಸುವುದಕ್ಕೆ ಪ್ರಯತ್ನನಾದ್ರೂ ಬೇಡವೇ ? ಒಂದು ಸಂಘ ಮಾಡೋಣ. ಒಂದು ಚೂರುಪಾರು ಭ್ರಷ್ಟಾಚಾರದ ಭೂತವನ್ನು ಓಡಿಸಲು ಪ್ರಯತ್ನ ಮಾಡೋಣ. ಇದರ ಬಗ್ಗೆ ಚಿಂತನೆ ಮಾಡೋಣ. ನಮ್ಮ ನಮ್ಮ ಚಿಂತನೆಗೆ, ಯಾವ ಭ್ರಷ್ಟಾಚಾರವೂ ಅಡ್ಡಿ ಇಲ್ಲವಲ್ಲ. ಭಗತ್‌ಸಿಂಗ್, ಸುಭಾಷ್, ಗಾಂಧಿ, ಇತ್ಯಾದಿ ಎಷ್ಟೋ ಎಷ್ಟೋ ಜನ ಈ ದೇಶಕ್ಕಾಗಿ ತ್ಯಾಗ ಮಾಡಲಿಲ್ಲವಾ ? ಅವರ ಬಲಿದಾನ ತ್ಯಾಗದ ಫಲವೇ ಅಲ್ಲವೇ ಈ ದೇಶ ?

ಅಯ್ಯೋ ಬೆಪ್ಪೆ, ತ್ಯಾಗವಂತೆ ? ಬಲಿದಾನವಂತೆ ? ಅವರ ಹೆಸರುಗಳು ಪಠ್ಯಪುಸ್ತಕ ಚರಿತ್ರೆಯಲ್ಲಿ ಉಳಿದೇ ಇಲ್ಲ. ಅಲ್ಲೂ ರಾಜಕೀಯ, ಸ್ವಾರ್ಥ, ಭ್ರಷ್ಟಾಚಾರ ನೆನಪಿಲ್ಲವೇ ಮಿತ್ರಾ ?

* * *

ತಂಗಮ್ಮನ ಸಂಸಾರ ಎರಡಾಯಿತು. ಮಕ್ಕಳು ಪಾಲು ಪಡೆದು ಬೇರೆ ಬೇರೆ ಬಿಡಾರದಲ್ಲಿ ನೆಲಸಿದರು. ಹಿರಿಯ ಮಗ ಈಗಿರುವ ಮನೆಯಲ್ಲೇ ಉಳಿದರೆ ಕಿರಿಯವನಿಗೆ ಹಿಂಬದಿಯ ಭಾಗ ಸ್ವಲ್ಪ ಬದಲಾವಣೆಗಳೊಂದಿಗೆ ವಾಸದ ಮನೆಯಾಯ್ತು. ಹಿರಿಯ ಮಗ ಅಪ್ಪ ಅಮ್ಮ ಇಬ್ಬರೂ ಇಲ್ಲಿರುವುದು ಬೇಡ, ಅಪ್ಪ ಕಿರಿಯಮಗನ ಜತೆ ಇರಲಿ ಎಂದು ಕ್ಯಾತೆ ತೆಗೆದ. ಅಪ್ಪನ ಹಿಂದಿನ ಕಚ್ಚೆಹರುಕತನ ಅವನಿಗೆ ಇಷ್ಟವಾಗಿರಲಿಲ್ಲ. ಹಿಂದಿನ ದೊಡ್ಡ ಸಂಸಾರ, ಅದರಲ್ಲಿನ ಬದುಕು, ಅಪ್ಪ ಅಮ್ಮ ಎಲ್ಲಾ ಒಡೆದು, ಎರಡು ಭಾಗವಾಯ್ತು. ಕ್ರಮೇಣ ಮನಸ್ಸುಗಳೂ ಒಡೆದವು. ತಂಗಮ್ಮ ಆಕೆಯ ಯಜಮಾನರು ಮೂಲೆಗುಂಪಾದರು. ಹಾಗೇ ಪರಾವಲಂಬಿಗಳೂ ಪರಕೀಯರೂ ಆದರು. ಜೀವನ ನೌಕೆ ಬಿರುಗಾಳಿಗೆ ಸಿಕ್ಕಿ ಎತ್ತೆತ್ತಲೋ ಸಾಗುತ್ತಿತ್ತು. ಅಯ್ಯೋ ಬದುಕೇ ಇಷ್ಟೇನಾ, ನಿನ್ನ ಗಮ್ಮತ್ತು ಅನಾಯಾಸವಾಗಿ ಶಿವ ಶಿವಾ ! ಎಂದು ದುಃಖಿಸಿದಳು ತಂಗಮ್ಮ.

ತಂಗಮ್ಮನಿಗೆ ಹಿರಿಸೊಸೆಯ ಮೂದಲಿಕೆ ಅತಿಯಾಯ್ತು. ತಮ್ಮ ಆಗಾಗ ಬರುತ್ತಿದ್ದುದೇ ತಂಗಮ್ಮನಿಗೊಂದು ಸಮಾಧಾನ. ಮಾವ ಎಂಬ ಅಭಿಮಾನ ತಂಗಮ್ಮನ ಮಕ್ಕಳಿಗೂ ಇತ್ತು. ಈ ಮಾವನಿಗೆ ಅಂಟಣ್ಣ ಎಂಬ ಓರಗೆಯ ಮಿತ್ರನಿದ್ದ. ತಂಗಮ್ಮನಿಗೆ ಅಂಟಣ್ಣನೂ ಮತ್ತೊಬ್ಬ ತಮ್ಮನಂತೆ ಆಪ್ತನಂತೆ. ಈಕೆಯ ಸಂಸಾರದ ಸಡಗರ, ನಂತರದ ಬಿರುಕುಗಳನ್ನೆಲ್ಲಾ ನೋಡಿದ್ದ ಜೀವ.

ಒಮ್ಮೆ ತಂಗಮ್ಮ ಕೈಚೀಲ ಹಿಡಿದು ಪೇಟೆಯಲ್ಲಿ ನಡೆದಿದ್ದ ಸಮಯ. ಕೆಲವು ವರುಷಗಳಿಂದ ಅಂಟಣ್ಣ ದೂರವೇ ಉಳಿದಿದ್ದ. ಬೇಗೆಗಳು ಅಂಟಣ್ಣನನ್ನು ಬಿಟ್ಟಿರಲಿಲ್ಲ. ತಂಗಮ್ಮನ ತಲೆ ಬೆಳ್ಳಗಾಗಿತ್ತು. ಎಲ್ಲೋ ಅಲ್ಲೊಂದು ಇಲ್ಲೊಂದು ಕಪ್ಪು ಕೂದಲು ಕಂಡೂ ಕಾಣದಂತಿದ್ದವು. ಈ ಕಂಡೂ ಕಾಣದ ಕಪ್ಪು ಕೂದಲಿನಷ್ಟೆ ಸುಖ ಈಕೆಗೆ ಬದುಕಿನಲ್ಲಿ ದಕ್ಕಿರಬೇಕು ಅಂದುಕೊಂಡ. ಮುಖದಲ್ಲಿ ಸುಕ್ಕಿನ ನೆರಿಗೆಗಳು ಕುಣಿದಾಡುತ್ತಿದ್ದವು. ಅಂಟಣ್ಣನ ತಲೆಯೂ ಬೋಳಾಗಿತ್ತು. ಹೀಗೆ ಇಬ್ಬರೂ ನಡೆದು ಒಂದು ಮನೆಯ ಮುಂದೆ ನಿಂತರು. ಮನೆಯ ಒಡತಿ ತಂಗಮ್ಮನ ತಮ್ಮನ ಮಗಳೇ ಆಗಿದ್ದಳು. ಈಕೆ ಈಕೆಯ ಗಂಡ ಸಂಭಾವಿತರಾಗಿ ತಂಗಮ್ಮನಿಗೆ ಆಸರೆಯಾಗಿದ್ದರು. ಬದುಕು ನಡೆಸಿದ ದಾರಿ ಎಲ್ಲಾ ಹೇಳಿ ಕಣ್ಣೀರಾದಳು. ತಂಗಮ್ಮನ ಹಿರಿಯ ಮಗ ಎಲ್ಲಾ ಆಸ್ತಿಯನ್ನು ಸಮಪಾಲು ಮಾಡಿಕೊಂಡಿದ್ದ. ತಂದೆ ತಾಯಿಯ ಹೆಸರಿನಲ್ಲಿ ಏನೂ ಉಳಿಸಿರಲಿಲ್ಲ. ಆ ವಿಷಯ ಬಂದಾಗ ಇವರ ನಂತರ ಮತ್ತೆ ರಿಜಿಸ್ಟ್ರೇಷನ್ ಖರ್ಚು ಎಲ್ಲಾ ಆಗುತ್ತೆ, ಆದ್ದರಿಂದ ತಂದೆ ತಾಯಿಯ ಹೆಸರಿನಲ್ಲಿ ಯಾವ ಆಸ್ತಿಯೂ ಇರಲಿಲ್ಲ. ಯಜಮಾನರು ಹೇಗಿದ್ದಾರೆ ಎಲ್ಲಿದ್ದಾರೆ ಅಂದರೆ ಅಲ್ಲೇ ಕಿರಿಯ ಮಗನ ಜೊತೆ ಇದ್ದಾರೆ, ಒಬ್ಬರನ್ನೊಬ್ಬರು ನೋಡಲು ವಯೋಮಾನ ದೃಷ್ಟಿ ಕೈ ಕೊಡುತ್ತೆ, ಖರ್ಚಿಗೆ ಕಾಸು ಕೊಡುವವರು ಇಲ್ಲ, ಮುದುಕರಿಗೇನು ಖರ್ಚಿರುತ್ತೆ ಸುಮ್ನಿರಿ ಅನ್ನುವ ಉಡಾಫೆ ಉತ್ತರ. ತಂಗಮ್ಮನ ದುಃಖದ ಕಟ್ಟೆ ಒಡೆದಿತ್ತು. ಅತ್ತೆ ಆ ತಾತನನ್ನು ಒಳಗೆ ಕರೆಯುತ್ತೆ ಎಂಬ ಮಾತು ಕೇಳಿದಾಗ ಮುಖದ ಸುಕ್ಕುಗಳೇ ಸಮುದ್ರದ ತೆರೆಗಳಾಗಿ ಒದ್ದೆ ಒದ್ದೆಯಾಗಿದ್ದವು.

ಅಂಟಣ್ಣ ತಂಗಮ್ಮನ ಓರಗೆಯವ, ತಂಗಮ್ಮನ ಸ್ನೇಹಿತ, ಮೇಲಾಗಿ ಆಪ್ತ. ಹೀಗಾಗಿ ತಂಗಮ್ಮನ ಬದುಕನ್ನು ಓದಿಕೊಂಡಿದ್ದ. ತಂಗಮ್ಮನ ಕಥೆಯನ್ನು ಒಂದು ಬೆಳದಿಂಗಳ ರಾತ್ರಿಯಲ್ಲಿ ಹೇಳುತ್ತಿದ್ದಾಗ ಒಂದು ಕಪ್ಪು ಮೋಡ ಚಂದ್ರನಿಗೆ ಅಡ್ಡಬಂದು ಕತ್ತಲಾಗಿತ್ತು. ಕಥೆ ಮಾತಾಡುತ್ತಿತ್ತು ಅಂತ ಕೇಳುಗರಿಗೆ ಅನ್ನಿಸಿತ್ತು. ಎಷ್ಟಾದರೂ ಕಥೆಯಲ್ಲವೇ ? ಕಥೆಯಾಗೇ ಕಾಡಿತ್ತು. ತಂಗಮ್ಮನ ಬದುಕು ಬವಣೆ ತಿರುವುಗಳು ಎಲ್ಲಾ ಕಾಡುಹಾದಿಯ ನಡಿಗೆಯಂತೆ ನಡೆದೇ ಇತ್ತು. ಆ ಬೆಳದಿಂಗಳಲ್ಲಿ ಅಂಟಣ್ಣನ ಮುಖದ ಸುಕ್ಕು ಗೆರೆಗಳು ಗತಿಶೀಲವಾಗಿದ್ದವು. ಒಂದೊಂದು ಗೆರೆಯೂ ಕಥೆಗಳ ಉಗ್ರಾಣ. ತಂಗಮ್ಮ ಕಥೆಯಾಗಿ ಕಾಡಿ ಆ ಕಥಾನಾಯಕಿಯೇ ಕಥೆ ಹೇಳುತ್ತಿದ್ದಂತೆ ಭಾಸವಾಗುತ್ತಿತ್ತೇ ಹೊರತು ಉತ್ಪ್ರೇಕ್ಷೆಯಾಗಲಿ ಬಣ್ಣದ ಮಾತುಗಳಾಗಲಿ, ಬೆರಗಾಗಲಿ, ನಿರೂಪಣಾ ಕೌಶಲ್ಯವಾಗಲಿ, ಯಾವುದೂ ಇರದೇ, ಕಥೆ ಕಥೆಯಾಗಿ ಸರಳವಾಗಿ, ಸರಾಗವಾಗಿ ಮಾತಾಡಿದಂತಿತ್ತು.

ವೆಂಕಟಾಚಲ
ದೊಡ್ಡ ಭಜನ ಮಂದಿರ ರಸ್ತೆ, ಸರ್ಜಾಪುರ - ೫೬೨ ೧೨೫, ಬೆಂಗಳೂರು ಜಿಲ್ಲೆ




# ಪತ್ರಿಕಾ ಬೆಲೆ ಸಮರ

**ಸು**ಮಾರು ೧೬೦ ವರ್ಷಗಳ ಭವ್ಯ ಇತಿಹಾಸ ಹೊಂದಿರುವ ಕನ್ನಡ ಪತ್ರಿಕೋದ್ಯಮದಲ್ಲಿ ಇತ್ತೀಚಿನ ದಿನಗಳಲ್ಲಿ ಕ್ರಾಂತಿಕಾರಿ ಬದಲಾವಣೆಗಳಾಗುತ್ತಿವೆ. ಈ ಪ್ರಕ್ರಿಯೆಯ ರೂವಾರಿ ಐದು ವರ್ಷಗಳ ಹಿಂದೆ ಹುಟ್ಟಿಕೊಂಡ ವಿಜಯ ಕರ್ನಾಟಕ ಪತ್ರಿಕೆ. ಬೆಲೆ ಇಳಿಕೆಯ ಮೂಲಕ ಅದು ಸಾರಿದ ಬೆಲೆ ಸಮರ ತಣ್ಣಗಾಗುತ್ತಿದೆ ಎನ್ನುವಷ್ಟರಲ್ಲೇ ಇತ್ತೀಚೆಗೆ ಸೂರ್ಯೋದಯ ದಿನಪತ್ರಿಕೆ ಕಾಣಿಸಿಕೊಂಡಿದೆ. ಈ ಬೆಲೆ ಸಮರದಲ್ಲಿ ಕನ್ನಡಪ್ರಭ ಹಿಂದೆಬಿದ್ದಿಲ್ಲ. ಈ ಬೆಲೆ ಸಮರದ ಒಳಿತು ಕೆಡುಕುಗಳನ್ನು ಚರ್ಚಿಸುವುದು ಈಗ ಪ್ರಸ್ತುತ ಎನಿಸುತ್ತದೆ.

ವಿಶ್ವದ ಪತ್ರಿಕಾ ಕ್ಷೇತ್ರದಲ್ಲಿ ಬೆಲೆ ಸಮರ ಆರಂಭಿಸಿದವನು ಮಾಧ್ಯಮ ದೊರೆ ಎನಿಸಿದ ರೂಪರ್ಟ್ ಮುರ್ಡೋಕ್ ಎಂಬಾತ. ಇಂಗ್ಲೆಂಡ್‌ನಲ್ಲಿ ಅತ್ಯಂತ ಹೆಚ್ಚು ಪ್ರಸಾರ ಹೊಂದಿದ್ದ 'ದಿ ಡೈಲಿ ಟೆಲಿಗ್ರಾಫ್' ಪತ್ರಿಕೆಗೆ ಸ್ಪರ್ಧೆ ಒಡ್ಡಲು ಮುರ್ಡೋಕ್ ೧೯೯೩ರ ಸೆಪ್ಟೆಂಬರ್‌ನಲ್ಲಿ ತನ್ನ ಪತ್ರಿಕೆ 'ದಿ ಟೈಮ್ಸ್'ನ ಬೆಲೆಯನ್ನು ೪೫ ಪೆನ್ಸ್‌ನಿಂದ ೩೦ ಪೆನ್ಸ್‌ಗೆ ಇಳಿಸಿದ. ಇದರಿಂದ ದಿ ಟೈಮ್ಸ್ ಪ್ರಸಾರ ಒಂದೇ ತಿಂಗಳಲ್ಲಿ ೩.೪೫ ಲಕ್ಷದಿಂದ ೫.೧೭ ಲಕ್ಷಕ್ಕೇರಿತು. ಪ್ರತಿಸ್ಪರ್ಧಿಯಾದ 'ದಿ ಡೈಲಿ ಟೆಲಿಗ್ರಾಫ್'ನ ಪ್ರಸಾರ ೧೩ ಲಕ್ಷದಿಂದ ೯.೯೩ ಲಕ್ಷಕ್ಕೆ ಕುಸಿಯಿತು. ಅಲ್ಲದೆ ಆ ಪತ್ರಿಕೆಗೆ ಬರುತ್ತಿದ್ದ ಜಾಹೀರಾತು ಕೂಡಾ ಕಡಿಮೆಯಾಯಿತು. ಇದರಿಂದಾಗಿ ಆ ಪತ್ರಿಕೆ ತನ್ನ ಬೆಲೆಯನ್ನು ೪೮ ಪೆನ್ಸ್‌ನಿಂದ ೩೦ ಪೆನ್ಸ್‌ಗೆ ಇಳಿಸಬೇಕಾಯಿತು. ಆಗ ಮುರ್ಡೋಕ್ ತನ್ನ ಪತ್ರಿಕೆ ಬೆಲೆಯನ್ನು ೩೦ ಪೆನ್ಸ್‌ನಿಂದ ೨೦ ಪೆನ್ಸ್‌ಗೆ ಇಳಿಸಿದ. ಪತ್ರಿಕಾ ಮಾರುಕಟ್ಟೆಯಲ್ಲಿ ಸ್ಪರ್ಧೆ ಪ್ರಾರಂಭವಾಗಿ ಓದುಗ ಗ್ರಾಹಕರನ್ನು ಆಕರ್ಷಿಸಲು ಇವರಂತೆ ಇತರ ಪತ್ರಿಕೆಗಳು ಕೂಡಾ ತಮ್ಮ ಬೆಲೆ ಇಳಿಸಿದವು. ದಿ ಇಂಡಿಪೆಂಡೆಂಟ್, ದಿ ಗಾರ್ಡಿಯನ್, ದಿ ಅಬ್ಸರ್ವರ್ ಮುಂತಾದ ಹೆಚ್ಚು ಪ್ರಸಾರವುಳ್ಳ ಪತ್ರಿಕೆಗಳು ನಷ್ಟ ಅನುಭವಿಸಿದವು. ಮುರ್ಡೋಕ್‌ಗೆ ತನ್ನದೇ ಆದ ಇತರ ಉದ್ಯಮಗಳ ನೆರವು ಇದ್ದ ಕಾರಣ ಪತ್ರಿಕೆಯನ್ನು ಉಚಿತವಾಗಿ ಹಂಚುವಷ್ಟು ಸಮರ್ಥನಾಗಿದ್ದ.

ಇಂಗ್ಲೆಂಡ್‌ನಲ್ಲಿ ಶುರುವಾದ ಬೆಲೆ ಸಮರದ ಬಿರುಗಾಳಿ ಭಾರತಕ್ಕೂ ತಟ್ಟಿತು. ಅದನ್ನು ಭಾರತದಲ್ಲಿ ಸ್ವಾಗತಿಸಿದವರು ಟೈಂಸ್ ಆಫ್ ಇಂಡಿಯಾ ಪತ್ರಿಕಾ ಬಳಗದ ಮಾಲೀಕ ಸಮೀರ್ ಜೈನ್. ಆತ ಎಕನಾಮಿಕ್ ಟೈಮ್ಸ್‌ನ ಪ್ರಸಾರ ಹೆಚ್ಚಿಸಲು ೪.೫೦ ರೂಪಾಯಿ ಇದ್ದ ಪತ್ರಿಕೆಯ ಬೆಲೆಯನ್ನು ಬುಧವಾರದಂದು ೨ ರೂಪಾಯಿಗೆ ಇಳಿಸಿ, ಉಳಿದ ದಿನಗಳಂದು ೫ ರೂಪಾಯಿಗೆ ಏರಿಸಿದರು. ಬೆಲೆ ಕಡಿಮೆ ಇದ್ದ ದಿನ ಪತ್ರಿಕೆಯ ಪ್ರಸಾರ ೧.೩೦ ಲಕ್ಷದಿಂದ ೨ ಲಕ್ಷಕ್ಕೆ ಏರಿದರೆ ಉಳಿದ ದಿನಗಳಂದು ಪ್ರಸಾರ ಸಹಜವಾಗಿಯೇ ಕಡಿಮೆಯಾಯಿತು. ನಂತರ ಆಹ್ವಾನ ಬೆಲೆಯನ್ನು ಶುಕ್ರವಾರದ ಸಂಚಿಕೆಗೂ ನೀಡಲಾಯಿತು. ಕೊನೆಗೆ ಶನಿವಾರ, ಭಾನುವಾರ ಹೊರತುಪಡಿಸಿ, ಮಿಕ್ಕೆಲ್ಲ ದಿನಗಳ ಸಂಚಿಕೆಗಳನ್ನು ಆಹ್ವಾನ ಬೆಲೆಗಳಿಂದ ಓದುಗರನ್ನು ಆಕರ್ಷಿಸುವ ಪ್ರಯತ್ನ ನಡೆಯಿತು. ೧೦ ರೂಪಾಯಿ ಇಟ್ಟಿದ್ದ ಎರಡು ದಿನ ಮಾತ್ರ ಪ್ರಸಾರ ಕಡಿಮೆಯಾಯಿತು.

> ಪತ್ರಿಕೆ ಬೆಲೆ ಇಳಿಸುವುದರಿಂದ ಅದರ ಪ್ರಸರಣ ಹೆಚ್ಚಬಹುದು. ಹೆಚ್ಚು ಓದುಗರು ಪ್ರತಿಗಳನ್ನು ಖರೀದಿಸ ಬಹುದು. ಯಾವುದೋ ಒಂದು ಪತ್ರಿಕೆ ಖರೀದಿಸುತ್ತಿದ್ದವರು ಎರಡು ಅಥವಾ ಮೂರು ಪತ್ರಿಕೆಗಳನ್ನು ಖರೀದಿಸಬಹುದು. ಪತ್ರಿಕೆ ಓದುವ ಹವ್ಯಾಸವೂ ಬೆಳೆಯಬಹುದು. ಆದರೆ ಈ ಸೀಮಿತ ಉದ್ದೇಶಕ್ಕಾಗಿ ಪತ್ರಿಕೆಯ ಗುಣಮಟ್ಟದಲ್ಲಿ ರಾಜಿ ಮಾಡಿಕೊಂಡರೆ, ಅನಾರೋಗ್ಯಕರ ವಿಧಾನದ ಮೂಲಕ ಜಾಹೀರಾತು ಸಂಗ್ರಹಿಸಿದರೆ ಅದರ ಕೆಟ್ಟ ಪರಿಣಾಮ ಉಂಟಾಗುವುದು ಪತ್ರಿಕಾ ಸಂಸ್ಕೃತಿಯ ಮೇಲೆ.
>
> ■
>
> **ಸತೀಶ್‌ಕುಮಾರ್ ಅಂಡಿಂಜೆ**

ಈ ಪ್ರಯೋಗವನ್ನು ಇತರ ಪತ್ರಿಕೆಗಳೂ ಪ್ರಾರಂಭಿಸಿದವು. ಹಿಂದೂಸ್ತಾನ್ ಟೈಮ್ಸ್ ಪತ್ರಿಕೆಯನ್ನು ಮುಳುಗಿಸುವ ಉದ್ದೇಶದಿಂದ ಟೈಮ್ಸ್ ಆಫ್ ಇಂಡಿಯಾ ಪತ್ರಿಕೆಯ ಬೆಲೆಯನ್ನು ಶುಕ್ರವಾರ ಹೊರತುಪಡಿಸಿ, ಮಿಕ್ಕೆಲ್ಲ ದಿವಸಗಳು ೨.೪೦ ರೂಪಾಯಿಯಿಂದ ೧.೫೦ ರೂಪಾಯಿಗೆ ಇಳಿಸಲಾಯಿತು. ಶುಕ್ರವಾರ ೬ ರೂಪಾಯಿಗೇರಿಸಿ, ಮೂರು ವಾರದಲ್ಲಿ ೨.೯೦ ರೂಪಾಯಿಗಿಳಿಸಲಾಯಿತು. ಇದು ನಿರೀಕ್ಷಿತ ಪರಿಣಾಮ ನೀಡಿತು. ಇದರಿಂದ ಆರಂಭದಲ್ಲಿ ಪ್ರಸಾರ ೨೦,೦೦೦ ಹೆಚ್ಚಾಯಿತು. ಇದಕ್ಕೆ ಪ್ರತಿಸ್ಪರ್ಧಿಯಾಗಿ ಹಿಂದೂಸ್ತಾನ್ ಟೈಮ್ಸ್ ಶುಕ್ರವಾರ ೩ ರೂಪಾಯಿಗೇರಿಸಿ, ಉಳಿದ ದಿನ ೧.೫೦ ರೂಪಾಯಿಗಿಳಿಸಿತು.

ಪತ್ರಿಕೆಗಳ ನಡುವಿನ ಈ ಸ್ಪರ್ಧೆ ಪತ್ರಿಕಾ ಕ್ಷೇತ್ರದಲ್ಲಿ ಅಲ್ಲೋಲ ಕಲ್ಲೋಲ ಉಂಟುಮಾಡಿತು. ಇತರ ಆಂಗ್ಲ ದೈನಿಕಗಳೂ ತಮ್ಮ ಬೆಲೆ ಇಳಿಸಿದವು. ಇದು ಪತ್ರಿಕಾ ಏಜೆಂಟರ ಮತ್ತು ಹಂಚುವವರ ಮೇಲೆ ಗಂಭೀರ ಪರಿಣಾಮ ಬೀರಿತು. ಕಮಿಶನ್ ಕಡಿಮೆಯಾಗಿ ಅವರಲ್ಲಿ ಅಸಮಾಧಾನ ಉಂಟಾಯಿತು. ಆದರೆ ಪತ್ರಿಕೆಗಳು ಮೊದಲಿನ ದರಲ್ಲೇ ಕಮಿಶನ್ ನೀಡುವ ಭರವಸೆ ನೀಡಿದವು. ಇದು ಕಮಿಶನ್ ಎಂದೂ ಹೆಚ್ಚಾಗಲ್ಲ ಎಂಬ ನಿರಾಶೆಗೆ ಎಡೆಮಾಡಿಕೊಟ್ಟಿತು. ಇದರಿಂದ ಆಯಾ ಪತ್ರಿಕೆಗಳೇ ಸ್ವತಃ ವಿತರಣಾ ಕಾರ್ಯದಲ್ಲಿ ತೊಡಗಿಕೊಂಡವು.

ಪಯೋನಿರ್ ಪತ್ರಿಕೆ ತನ್ನ ಬೆಲೆಯನ್ನು ೨ ರೂಪಾಯಿಗೆ ಇಳಿಸಿತು. ಆದರೆ ಲಾಭ ಪಡೆಯಲಿಲ್ಲ. ಜಾಹೀರಾತೂ ಸಿಗಲಿಲ್ಲ. ಕೊನೆಗೆ ತನ್ನ ಬೆಲೆಯನ್ನು ೫೦ ಪೈಸೆಗೆ ಇಳಿಸಿತು. ಇದರಿಂದಾಗಿ ಕೆಲವು ಪತ್ರಿಕೆಗಳು ತಮ್ಮ ಬಾಗಿಲು ಮುಚ್ಚಬೇಕಾಯಿತು. ತಮ್ಮ ಅಸ್ತಿತ್ವಕ್ಕೆ ಜಾಹೀರಾತೇ ಅತೀ ಮುಖ್ಯವೆಂದು ಪರಿಗಣಿಸಿದ ಕೆಲವು ಪತ್ರಿಕೆಗಳು ಅನಾರೋಗ್ಯಕರ ವಿಧಾನದ ಮೂಲಕ ಜಾಹೀರಾತು ಪಡೆದವು. ಅನುಕೂಲಕ್ಕೆ ತಕ್ಕಂತೆ ಜಾಹೀರಾತು ದರ ವಿಧಿಸಿದವು. ಸರಕಾರಿ ಜಾಹೀರಾತಿಗೊಂದು ದರ ಖಾಸಗಿ ಜಾಹೀರಾತಿಗೊಂದು ದರ ವಿಧಿಸಿ ವಂಚನೆಗೆ ಕೈಹಾಕಿದವು. ಆದರೆ ಇದು ಆರೋಗ್ಯಕರ ಸ್ಪರ್ಧೆಯಲ್ಲವೆಂದು ಮನಗಂಡು ಒಂದೇ ವರ್ಷದಲ್ಲಿ ಬೆಲೆ ಇಳಿಸಿದ ಪತ್ರಿಕೆಗಳೆಲ್ಲವೂ ಮತ್ತೆ ಏರಿಸಿದವು.

ಕನ್ನಡದಲ್ಲಿ ೧೯೯೯ರಲ್ಲಿ ಆರಂಭಗೊಂಡ ವಿಜಯ ಕರ್ನಾಟಕ ಪತ್ರಿಕೆ ತನ್ನ ಪ್ರಸಾರ ಹೆಚ್ಚಿಸಿ ನೆಲೆಯೂರುವ ಉದ್ದೇಶದಿಂದ ಬೆಲೆಯನ್ನು ೧.೫೦ ರೂಪಾಯಿಗೆ ಇಳಿಸಿತು. ಆದರೆ ಗುಣಮಟ್ಟದಲ್ಲಿ ಯಾವುದೇ ರಾಜಿ ಮಾಡಲಿಲ್ಲ. ಅದಕ್ಕೆ ಪ್ರತಿಸ್ಪರ್ಧಿಯಾಗಿ ಇತರ ಪತ್ರಿಕೆಗಳೂ ತಮ್ಮ ಬೆಲೆಯನ್ನು ೧.೫೦ ರೂಪಾಯಿಗೆ ಇಳಿಸಿದವು. ಇದು ಸಣ್ಣ ಪತ್ರಿಕೆಗಳ ಮೇಲೆ ಭಾರಿ ಆಘಾತವಾಗಿ ಪರಿಣಮಿಸಿತು. ವಿಜಯ ಕರ್ನಾಟಕ ತನ್ನ ಗುಣಮಟ್ಟ ಹೆಚ್ಚಿಸುವ ಉದ್ದೇಶದಿಂದ ಪತ್ರಿಕೆಯಲ್ಲಿ ಹೊಸ ಪ್ರಯೋಗಗಳನ್ನು ಮಾಡಿತು. ಹೊಸ ಅಂಕಣಗಳು, ಪುರವಣಿಗಳನ್ನು ಪ್ರಕಟಿಸಿತು. ಜಾಹೀರಾತು ದರ ಕಡಿಮೆ ಮಾಡಿತು. ಹೆಚ್ಚು ಜನರನ್ನು ತಲುಪುವ ಉದ್ದೇಶದಿಂದ ಹೆಚ್ಚು ಆವೃತ್ತಿಗಳನ್ನು ಆರಂಭಿಸಿತು. ಇದನ್ನೇ ಇತರ ಪತ್ರಿಕೆಗಳೂ ಆರಂಭಿಸಿದವು. ಜನವಾಹಿನಿಯಂತಹ ಪತ್ರಿಕೆಗಳು ಈ ಸ್ಪರ್ಧೆಯ ಪ್ರವಾಹದಲ್ಲಿ ಈಜಲಾರದೆ ಮುಳುಗಿ ಹೋದವು. ಸಣ್ಣ ಮತ್ತು ಮಧ್ಯಮ ಪತ್ರಿಕೆಗಳು ಹಾಹಾಕಾರ ಎಬ್ಬಿಸಿದವು.

ಒಂದೆರಡು ವರ್ಷಗಳಲ್ಲೇ ಬೆಲೆ ಇಳಿಸಿದ ಪತ್ರಿಕೆಗಳು ಮತ್ತೆ ೨ ರೂಪಾಯಿಗೆ ಏರಿಸಿದವು. ಆದರೆ ಇತ್ತೀಚೆಗೆ ಕಾಣಿಸಿಕೊಂಡ ಸೂರ್ಯೋದಯ ಪತ್ರಿಕೆಗೆ ಸ್ಪರ್ಧೆ ಒಡ್ಡುವ ಉದ್ದೇಶದಿಂದ ಕನ್ನಡಪ್ರಭ ತನ್ನ ಬೆಲೆಯನ್ನು ಒಂದು ರೂಪಾಯಿಗೆ ಇಳಿಸಿತು. ಆಗ ಇತರ ಪತ್ರಿಕೆಗಳಿಗೆ ತಮ್ಮ ಬೆಲೆ ಇಳಿಸುವುದು

ಅನಿವಾರ್ಯವಾಯಿತು. ಇದರಿಂದಾಗಿ ಇಂದು ಕನ್ನಡ ಪತ್ರಿಕಾ ಪ್ರಪಂಚದಲ್ಲಿ ಒಂದು ರೀತಿಯ ಅನಾರೋಗ್ಯಕರ ಸ್ಪರ್ಧೆ ಕಂಡುಬರುತ್ತಿದೆ.

ನಾಲ್ಕು ಪುಟದ ಒಂದು ಪತ್ರಿಕೆಯ ಮುದ್ರಣ ಕಾಗದ ವೆಚ್ಚ ೬೦ ಪೈಸೆಯಾದರೆ, ಮುದ್ರಣ ವೆಚ್ಚ ೮೦ ಪೈಸೆ. ಹಾಗಾದರೆ ೧೬ ಪುಟಗಳ ಒಂದು ಪತ್ರಿಕೆಯ ಮುದ್ರಣ ಹಾಗೂ ಮುದ್ರಣ ಕಾಗದದ ಒಟ್ಟು ವೆಚ್ಚವೇ ೬.೮೦ ರೂಪಾಯಿಯಾಗುತ್ತದೆ. ಅದರ ಜೊತೆಗೆ ಸಿಬ್ಬಂದಿ ಹಾಗೂ ಸಾಗಾಟ ವೆಚ್ಚ ಬೇರೆ. ಒಟ್ಟಾರೆ ಸುಮಾರು ೮ ರೂಪಾಯಿ ವೆಚ್ಚವಾಗಬಹುದು. ಅಷ್ಟು ವೆಚ್ಚ ಪತ್ರಿಕೆಯನ್ನು ಒಂದು ರೂಪಾಯಿಗೆ ನೀಡಿದರೆ ಕಮಿಶನ್ ಕಳೆದು ಪತ್ರಿಕೆಗೆ ಸಿಗುವುದು ೬೦ ಪೈಸೆ. ಹಾಗಾದರೆ ಉಳಿದ ೭.೨೦ ರೂಪಾಯಿ ಬರುವುದಾದರೂ ಎಲ್ಲಿಂದ? ಈ ನಷ್ಟವನ್ನು ತುಂಬಲು ಪತ್ರಿಕೆಗಳು ಜಾಹೀರಾತುಗಳನ್ನು ಅವಲಂಬಿಸದೇ ಅನ್ಯಮಾರ್ಗವಿಲ್ಲ.

ಜಾಹೀರಾತುಗಾರರು ಕೂಡಾ ಪತ್ರಿಕೆಯ ಪ್ರಸಾರ ನೋಡಿಯೇ ವ್ಯವಹರಿಸುತ್ತಾರೆ. ಉತ್ತಮ ಪ್ರಸಾರವಿದ್ದರೆ ಹೆಚ್ಚು ಜಾಹೀರಾತು ಸಿಗುವ ಸಾಧ್ಯತೆ ಇರುತ್ತದೆ. ಅದಕ್ಕಾಗಿ ಕೆಲವು ಪತ್ರಿಕೆಗಳು ಮೊದಲು ಬೆಲೆ ಇಳಿಸಿ, ಪತ್ರಿಕೆಯ ಪ್ರಸಾರ ಹೆಚ್ಚಿಸುವ ಉದ್ದೇಶವಿಟ್ಟುಕೊಳ್ಳುತ್ತವೆ. ಪ್ರಸಾರವು ಹೆಚ್ಚಾದ ಹಾಗೆ ಜಾಹೀರಾತು ಕೂಡ ಹೆಚ್ಚಾಗಿ ದೊರಕುವುದನ್ನು ನಿರೀಕ್ಷಿಸಬಹುದು. ಜಾಹೀರಾತು ದೊರಕಿದ ನಂತರ ಕ್ರಮೇಣ ನಿಧಾನವಾಗಿ ಪತ್ರಿಕೆಯ ಬೆಲೆ ಹೆಚ್ಚಿಸುವ ಪರಿಪಾಠವೂ ಇದೆ. ಬೆಲೆ ಇಳಿಕೆಯಿಂದ ಆರಂಭದಲ್ಲಿ ನಷ್ಟವಾದರೂ, ಮುಂದೆ ಲಾಭವಾಗುತ್ತದೆ ಎಂಬ ದೂರದ ಕನಸು ಮಾಲೀಕರದು. ಆದರೆ ಇದು ಅನೈತಿಕವೆಂದೆನಿಸಿದರೂ ಇಂತಹ ಹೀನಕೃತ್ಯವನ್ನು ಮುಂದುವರೆಸಿಕೊಂಡೇ ಹೋಗುತ್ತಾರೆ.

ಪತ್ರಿಕೆಗಳು ಮಾಹಿತಿ, ಶಿಕ್ಷಣ ನೀಡುವುದರ ಜೊತೆಗೆ ಸಮಾಜದಲ್ಲಿ ವಿವಿಧ ಅಭಿಪ್ರಾಯಗಳನ್ನು ಬಿಂಬಿಸುವ ಕನ್ನಡಿಯಂತಿರಬೇಕು. ಆದರೆ ಪತ್ರಿಕೆಗಳು ಸಂಪೂರ್ಣವಾಗಿ ಜಾಹೀರಾತನ್ನೇ ಅವಲಂಬಿಸಿದಾಗ, ಜಾಹೀರಾತುದಾರರ ತಾಳಕ್ಕೆ ತಕ್ಕಂತೆ ಕುಣಿಯಬೇಕಾಗುತ್ತದೆ. ಅವರಿಗೆ ಬೇಕಾದ ಸುದ್ದಿ ಮತ್ತು ಅಭಿಪ್ರಾಯಗಳನ್ನೇ ಪ್ರಕಟಿಸಬೇಕಾಗುತ್ತದೆ. ಸಾಮಾನ್ಯ ಜನರ ಅಭಿಪ್ರಾಯಗಳಿಗೆ ಅವಕಾಶವಿಲ್ಲದಂತಾಗುತ್ತದೆ. ಇದರಿಂದಾಗಿ ಅವರ ಬಾಯಿ ಮುಚ್ಚಿಸಿದಂತಾಗುತ್ತದೆ. ಜನರ ಅಭಿಪ್ರಾಯಗಳನ್ನಾಧರಿಸಿ ಪ್ರಜಾಪ್ರಭುತ್ವ ಮುನ್ನಡೆಯುವುದು ಸರಿಯಾದ ಕ್ರಮ.

ಅತ್ಯಂತ ಹೆಚ್ಚು ಪ್ರಸಾರದ ಪತ್ರಿಕೆಯ ಅಭಿಪ್ರಾಯ, ನಿಲುವು ಸರಕಾರದ ಧೋರಣೆಯ ಮೇಲೂ ಪರಿಣಾಮ ಬೀರುತ್ತದೆ. ಸ್ವಾತಂತ್ರ್ಯದ ನಂತರದ ದಿನಗಳಲ್ಲಿ ಪತ್ರಿಕಾ ವೃತ್ತಿಯೆಂದರೆ ಅದೊಂದು ಸಮಾಜ ಸೇವೆ ಎಂಬ ಕಲ್ಪನೆಯಿತ್ತು. ಅದೀಗ ಒಂದು ಉದ್ಯಮವಾಗಿ ಮಾರ್ಪಟ್ಟಿದೆ. ಪತ್ರಿಕೆ ಇತರ ವಸ್ತುಗಳಂತೆ ಗ್ರಾಹಕ ವಸ್ತುವಾಗಿ ಬಿಟ್ಟಿದೆ. ಪತ್ರಿಕೆಯ ಸಂಪಾದಕನಿಗೂ ಮ್ಯಾನೇಜರ್‌ಗೂ ವ್ಯತ್ಯಾಸ ಇಲ್ಲದಂತಾಗಿದೆ. ಇದರ ಪರಿಣಾಮವೇ ಬೆಲೆ ಸಮರ ಹುಟ್ಟಿಕೊಳ್ಳಲು ಕಾರಣವಾಗಿದೆ. ಜನರನ್ನು ತಿದ್ದುವ ತಿಳುವಳಿಕೆ ನೀಡುವ, ಅವರಲ್ಲಿ ಸರಿಯಾದ ಅಭಿಪ್ರಾಯ ಮೂಡಿಸುವ ಮಹೋನ್ನತ ಸಂವಹನ ಸಾಧನವಾಗಿರುವ ಪತ್ರಿಕೆ ಗ್ರಾಹಕ ವಸ್ತುವಾದರೆ ಜನರಿಗೆ ದೊರಕಬೇಕಾದ ಜ್ಞಾನ ಹಾಗೂ ಪ್ರಸನ್ನತೆಯ ಮೂಲಗಳ ಬಾಗಿಲು ಮುಚ್ಚಿಸಿದಂತೆಯೇ.

ಪತ್ರಿಕೆ ಬೆಲೆ ಇಳಿಸುವುದರಿಂದ ಅದರ ಪ್ರಸರಣ ಹೆಚ್ಚಾಗಬಹುದು. ಹೆಚ್ಚು ಓದುಗರು ಪ್ರತಿಗಳನ್ನು ಖರೀದಿಸಬಹುದು. ಯಾವುದೋ ಒಂದು ಪತ್ರಿಕೆ ಖರೀದಿಸುತ್ತಿದ್ದವರು ಎರಡು ಅಥವಾ ಮೂರು ಪತ್ರಿಕೆಗಳನ್ನು ಖರೀದಿಸಬಹುದು. ಪತ್ರಿಕೆ ಓದುವ ಹವ್ಯಾಸವೂ ಬೆಳೆಯಬಹುದು. ಆದರೆ ಈ ಸೀಮಿತ ಉದ್ದೇಶಕ್ಕಾಗಿ ಪತ್ರಿಕೆಯ ಗುಣಮಟ್ಟದಲ್ಲಿ ರಾಜಿ ಮಾಡಿಕೊಂಡರೆ, ಅನಾರೋಗ್ಯಕರ ವಿಧಾನದ ಮೂಲಕ ಜಾಹೀರಾತು ಸಂಗ್ರಹಿಸಿದರೆ ಅದರ ಕೆಟ್ಟ ಪರಿಣಾಮ ಉಂಟಾಗುವುದು ಪತ್ರಿಕಾ ಸಂಸ್ಕೃತಿಯ ಮೇಲೆ.

**ಸತೀಶ್‌ಕುಮಾರ್ ಅಂಡಿಂಜೆ**
ಉಪನ್ಯಾಸಕರು, ಪತ್ರಿಕೋದ್ಯಮ ಮತ್ತು ಸಮೂಹ ಸಂವಹನ ವಿಭಾಗ
ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ - ೫೭೭ ೪೫೧

# ಇತಿಹಾಸದ ಅಧ್ಯಯನ

ಡಾ|| ಜಿ. ರಾಮಕೃಷ್ಣ

ಆರ್. ಎಸ್. ಶರ್ಮಾ ಮೊದಲಾದ ಇತಿಹಾಸ ತಜ್ಞರನ್ನು ಭಯೋತ್ಪಾದಕರೆಂದು ಬಣ್ಣಿಸಿದ್ದ ಮುರಳಿ ಮನೋಹರ ಜೋಶಿ ಈಗ ಕೇಂದ್ರದಲ್ಲಿ ಶಿಕ್ಷಣ ಸಚಿವನಾಗಿಲ್ಲ. ಆದರೆ ಆತ ಹುಟ್ಟಿಹಾಕಿದ ವಿಷಬೀಜ ಇನ್ನೂ ಜೀವಂತವಾಗಿದೆ. ಇತಿಹಾಸವನ್ನು ಉಪಹಾಸಕ್ಕೆ ಈಡುಮಾಡುವುದು ಒಂದು ಸಂಪ್ರದಾಯವಾಗಿ ಕಳೆದ ನಾಲ್ಕೈದು ದಶಕಗಳಲ್ಲಿ ನಮ್ಮಲ್ಲಿ ಬೆಳೆದುಬಂದಿದೆ. ವಾಸ್ತವಿಕ ಘಟನೆಗಳ ಅವಲೋಕನ ಮತ್ತು ವಿಶ್ಲೇಷಣೆಯ ಜಾಗದಲ್ಲಿ, ಪ್ರಸ್ತುತ ರಾಜಕೀಯದಲ್ಲಿ ಫಲ ನೀಡಬಹುದಾದ ಸಂದರ್ಭವನ್ನು ಸೃಷ್ಟಿಸಿಕೊಳ್ಳಲು ಇತಿಹಾಸವನ್ನು ಮನಸ್ವೀ ಬದಲಾಯಿಸಿಬಿಡುವ ಕ್ರಮವನ್ನು ಜೋಶಿ ಪುಷ್ಟೀಕರಿಸಿದ್ದು ಒಂದು ದುರಂತ. ಇತಿಹಾಸದ ಸ್ವರೂಪ, ಆಯಾಮ, ಇತಿಮಿತಿಗಳು, ಅಧ್ಯಯನ ಪದ್ಧತಿ, ಅಧ್ಯಯನ ಸಾಮಗ್ರಿ ಮುಂತಾದುವನ್ನು ಪರಿಚಯಿಸುವ ಅನೇಕ ಗ್ರಂಥಗಳಿವೆ. ಆದರೆ ಅವು ಜೋಶಿ ಕ್ರಮಕ್ಕೆ ಒಗ್ಗುವಂಥವಲ್ಲ. ಗಾರ್ಡನ್ ಚೈಲ್ಡ್, ಇ. ಎಚ್. ಕಾರ್, ಡಿ. ಡಿ. ಕೋಸಾಂಬಿ ಮುಂತಾದವರ ಕೃತಿಗಳು ಮೌಲಿಕವಾದುವೆಂದು ಜೋಶಿ ಸಂಪ್ರದಾಯದವರು ಪರಿಗಣಿಸುವುದಿಲ್ಲ.

ಇತಿಹಾಸ ರಚಿಸುವುದರ ಉದ್ದೇಶವೇನಾಗಿತ್ತೆಂದು ವಿವರಿಸುತ್ತಾ ಪ್ರಾಚೀನ ಗ್ರೀಸಿನ ಹೆರೊಡೋಟಸ್ ಹೇಳುತ್ತಾನೆ, ಗ್ರೀಕರ ಹಾಗೂ ಬರ್ಬರರ ನಡುವಿನ ಯುದ್ಧದಲ್ಲಿ ಜರುಗಿದ ಘಟನೆಗಳನ್ನು ದಾಖಲಿಸುವುದು ಮತ್ತು ಅವರಿಬ್ಬರೂ ಪರಸ್ಪರ ಕಾದಾಡಲು ಕಾರಣವೇನಿತ್ತೆಂಬುದನ್ನು ಗುರುತಿಸುವುದು, ಎಂದು. ಅವನು ಇನ್ನೆಷ್ಟು ವಸ್ತುನಿಷ್ಠನಾಗಿರಬಹುದೆಂದು ಭ್ರಮಿಸುವ ಅಗತ್ಯವಿಲ್ಲ. ಏಕೆಂದರೆ, ಆರಂಭದಲ್ಲೇ ಅವನು ಪರ್ಷಿಯಾದವರನ್ನು ಬರ್ಬರರೆಂದೂ ಗ್ರೀಕರನ್ನು ನಾಗರಿಕರೆಂದೂ ವರ್ಣಿಸಿದ್ದಾನೆ. ತಾನು ಗ್ರೀಸಿನವನಾದ್ದ ರಿಂದ ಗ್ರೀಕರು ನಾಗರಿಕರು; ಇತರರು ಬರ್ಬರರು! ನಿಜಕ್ಕೂ ನೋಡಿದರೆ ಇತಿಹಾಸದ ಕೆಲಸವು ಸಮಾಜದ ವಿಕಾಸದ ಹಾದಿಯನ್ನು ಗುರುತಿಸುವುದೇ ಆಗಿದೆ. ವರ್ತಮಾನದ ಸಂಗತಿಗಳ ಬಗೆಗಿನ ಅಂತರ್ದೃಷ್ಟಿಯು ಭೂತಕಾಲದ ಘಟನೆಗಳನ್ನು ವೀಕ್ಷಿಸಲು ದಾರಿ ದೀಪವಾಗುತ್ತದೆ ಮತ್ತು ಆಗ ಸದೃಢವಾದ ಇತಿಹಾಸದ ರಚನೆಯಾಗ ಬಲ್ಲದೆಂದು ಕಾರ್ ವ್ಯಾಖ್ಯಾನಿಸಿದ್ದಾನೆ. ಅದನ್ನು ಬೇರೆ ರೀತಿಯಲ್ಲೂ ಹೇಳಬಹುದು : ವರ್ತಮಾನಕ್ಕೆ ಸ್ಪಂದಿಸುವ ವಿಧಾನವು ಭೂತಕಾಲ ವನ್ನು ಒಬ್ಬ ಇತಿಹಾಸಕಾರ ಹೇಗೆ ಅರ್ಥೈಸಬಹುದೆಂಬುದಕ್ಕೆ ಸೂಚಕವಾಗುತ್ತದೆ. ಉದಾಹರಣೆಗೆ, ಇಂದು ಮೀಸಲಾತಿಯನ್ನು ವಿರೋಧಿಸುವ ವ್ಯಕ್ತಿ ಸಾಮಾನ್ಯವಾಗಿ ಹಿಂದೆ ವರ್ಣ ವಿಭಜನೆಯು ಸಮಾಜಕ್ಕೆ ಮಾರಕವಾಗಿದ್ದಿತೆಂದು ಭಾವಿಸುವುದಿಲ್ಲ ಅಥವಾ ಇಂದು ಜಾಗತೀಕರಣವನ್ನು ವಿರೋಧಿಸುವ ವ್ಯಕ್ತಿ ಹಿಂದೆ ವಸಾಹತುಶಾಹಿ ದೌರ್ಜನ್ಯಗಳ ವಿರುದ್ಧ ಹೋರಾಡಿದ್ದವರನ್ನು ಸಾಮಾನ್ಯವಾಗಿ ಶ್ಲಾಘಿಸಿ ಆದರ್ಶಮೂರ್ತಿಗಳನ್ನಾಗಿಸುತ್ತಾನೆ. ಆದರೆ ಯಾವುದು ಪ್ರಿಯವೋ ಅದೇ ಇತಿಹಾಸವೆನಿಸುವುದಿಲ್ಲ. ಸ್ವಕಪೋಲಕಲ್ಪಿತವಾದ ಅಂಶಗಳಾಗಲಿ, ನಮಗೆ ರುಚಿಕರವೆಂದು ತೋರುವ ಅಂಶಗಳಾಗಲಿ ಇತಿಹಾಸದ ಘಟನೆಗಳ ನಿರೂಪಣೆಗೆ ಸಾಧನಗಳಲ್ಲ. ವೈಯಕ್ತಿಕ ಭಾವನೆಗಳ ಪ್ರತಿಫಲನಗಳನ್ನು ಇತಿಹಾಸ ದಲ್ಲಿ ಕಾಣಹೊರಟರೆ ವಿರೋಧಗಳ ಸರಮಾಲೆ ನಮ್ಮ ಕಣ್ಣು ಕುಕ್ಕುತ್ತದೆ. ಏಕೆಂದರೆ ಒಬ್ಬೊಬ್ಬನೂ ತನ್ನ ಭಾವನೆಗಳ ಪ್ರತಿಫಲನಗಳನ್ನೇ ಅರಸಿ, ಆರೋಪಿಸಿ, ಅದನ್ನೇ ಸತ್ಯವೆಂದು ಪ್ರತಿಪಾದಿಸುವ ಅಪಾಯವುಂಟು.

ಕಾಲಾನುಕ್ರಮವಾಗಿ ಉತ್ಪಾದನಾ ಸಂಬಂಧಗಳು ಹೇಗೆ ಬೆಳೆದುಬಂದುವೆಂದು ಗುರುತಿಸದಿರುವುದು ಇತಿಹಾಸವಾಗುವುದಿಲ್ಲ. ರಾಜಕೀಯ ಚರಿತ್ರೆ, ಹಲವು ಸಂತತಿಗಳು ಪ್ರಭುತ್ವದಲ್ಲಿ ಪಾಲ್ಗೊಂಡದ್ದು, ಇವೆಲ್ಲವೂ ಇತಿಹಾಸದ ಭಾಗವೇ; ಇತಿಹಾಸವನ್ನು ನಿರೂಪಿಸಲು ಅವು ಸಾಮಗ್ರಿ ಒದಗಿಸುತ್ತವೆ. ಆದರೆ ಅದಷ್ಟೇ ಇತಿಹಾಸವಲ್ಲ. ಒಂದು ಮಾನವ ಜನಾಂಗವು ವಿಕಸಿಸಿದ್ದು ಮತ್ತು ಅದು ಒಂದು ಸಂಸ್ಕೃತಿಯನ್ನು ಬೆಳೆಸಿದ್ದು ಮೂಲತಃ ಇತಿಹಾಸದ ಸಾಮಗ್ರಿಯಾಗುತ್ತದೆ. ಇಂದಿನ ಅಗತ್ಯ ಅಥವಾ ಆಕಾಂಕ್ಷೆಗಳಿಗೆ ಸಮರ್ಥನೆ ಒದಗಿಸಿಕೊಳ್ಳಲು ಬಳಸಲಾಗುವ ಇತಿಹಾಸದ ಪ್ರಮೇಯಗಳು ಯಥಾವತ್ತಾದುವೇ, ಅಲ್ಲವೇ, ಎಂಬುದನ್ನು ತಿಳಿಯುವುದು ಅಸಾಧ್ಯವಲ್ಲ. ಏಕೆಂದರೆ, ಚರಿತ್ರೆಯ ದಾಖಲೆಗಳು ಗುಟ್ಟಾದುವೇನೂ ಅಲ್ಲ ಮತ್ತು ದಾಖಲೆಗಳಿಲ್ಲದೆ ಚರಿತ್ರೆ ಇಲ್ಲ. ಅವು ಲಿಖಿತ ಮತ್ತು ಮೌಖಿಕ ಪರಂಪರೆಗಳೆರಡನ್ನೂ ಒಳಗೊಳ್ಳುತ್ತವೆ. ಶಾಸನಗಳು, ಉತ್ಖನನಗಳ ಕೊಡುಗೆಗಳು, ಸಾಹಿತ್ಯದಿಂದ ಸಂಗ್ರಹಗೊಂಡ ಮಾಹಿತಿಗಳು ಒಂದು ಬಗೆಯವಾದರೆ ಪುರಾಣ, ಜಾನಪದ ಮುಂತಾದುವು ಇನ್ನೊಂದು ಬಗೆಯವು. ಎರಡೂ ಇತಿಹಾಸಕ್ಕೆ ಆಕರಗಳೇ; ಆದರೆ ಯಾವುದರಲ್ಲಿ ಎಷ್ಟನ್ನು ಸ್ವೀಕರಿಸಬೇಕೆಂಬುದನ್ನು ಇತಿಹಾಸಕಾರನ ಶಿಸ್ತು ನಿಗದಿಗೊಳಿಸುತ್ತದೆ. ಒಂದು ಉದಾಹರಣೆಯನ್ನು ನೋಡುವುದಾದರೆ, ಪುರಾಣದ ಮಿಥಕಗಳಲ್ಲಿ ಇತಿಹಾಸದ ಅಂಶಗಳಿವೆ; ಅವೇ ಇತಿಹಾಸವಲ್ಲ. ಪುರಾಣವನ್ನು ಇತಿಹಾಸವೆಂಬಂತೆ ಗ್ರಹಿಸುವುದು ಅವಿವೇಕವಾದರೆ, ಸಾಹಿತ್ಯವನ್ನು ಪುರಾಣವೆಂಬಂತೆ ಸ್ವೀಕರಿಸುವುದು ಬಾಲಿಶತನವಾಗುತ್ತದೆ. ಹೀಗಿರುವಾಗ, ದಾಖಲೆಗಳನ್ನು ತುಂಡರಿಸುವ ಕ್ರಮವಾಗಲಿ, ದಾಖಲೆಗಳನ್ನೇ ಸೃಷ್ಟಿಸಿಬಿಡುವ ಚಮತ್ಕಾರವಾಗಲಿ ಇತಿಹಾಸದ ಪದ್ಧತಿಗೆ ಹೊರತಾದುವೆಂದು ಧಾರಾಳವಾಗಿ ಹೇಳಬಹುದು. ಇರುವ ದಾಖಲೆಗಳ ಮರುಪರೀಕ್ಷೆ ಅಥವಾ ನೂತನ ಅರ್ಥೈಸುವಿಕೆ ಸಾಧ್ಯ; ಆದರೆ ಅದು ಸ್ವೇಚ್ಛಾಚಾರದ ಅರ್ಥೈಸುವಿಕೆ ಆಗಬಾರದು. ವೈಜ್ಞಾನಿಕ ಪದ್ಧತಿಯಲ್ಲಿರುವಂತೆ ಇತಿಹಾಸದ ಪದ್ಧತಿಯಲ್ಲಿ ಕೂಡ ಪರಿಚ್ಛಿನ್ನವಾದ ದೃಷ್ಟಿಗೆ ಆದ್ಯತೆ ಇದೆ. ಖ್ಯಾತ ಇತಿಹಾಸಕಾರರಾಗಿದ್ದ ಕೆ. ಎ. ನೀಲಕಂಠ ಶಾಸ್ತ್ರಿಗಳು ಭಾರತೀಯ ಇತಿಹಾಸ ಸಮಾವೇಶದ ಅಧ್ಯಕ್ಷರಾಗಿ ಒಮ್ಮೆ ನೀಡಿದ್ದ ಎಚ್ಚರವನ್ನು ಗಮನಿಸಬೇಕು. ಅವರ ಮಾತಿನ ಸಾರಾಂಶ ಇದು. ಹತ್ತು-ಹದಿನೈದು ಶತಮಾನಗಳ ಹಿಂದಿನ ತಾಮ್ರ ಶಾಸನವೊಂದು ದೊರೆಯಿತೆಂದು ಭಾವಿಸೋಣ; ಅದರಲ್ಲಿ ಅರಮನೆಯೊಂದರ ವಿವರಣೆ ಇದೆಯೆಂದಿಟ್ಟುಕೊಳ್ಳೋಣ; ಅದರ ಪ್ರಕಾರ ಅರಮನೆಗೆ ಚಿನ್ನದ ಬಾಗಿಲುಗಳಿದ್ದುವೆಂದು ತಿಳಿದುಬರುತ್ತದೆಯೆಂದು ಭಾವಿಸೋಣ. ಇಂದಿನ ಇತಿಹಾಸಕಾರ ಅದರಿಂದ ಸ್ಫುಟವಾಗಿ ತೀರ್ಮಾನಿಸಬಹುದಾದ್ದೇನು ? ಶಾಸ್ತ್ರಿಗಳು ಹೇಳುತ್ತಾರೆ, ಎರಡು ತೀರ್ಮಾನಗಳು ಮಾತ್ರ ಖಚಿತವಾಗಿ ಸಾಧ್ಯ: (ಅ) ಆಗಿನ ಕಾಲದ ಅರಮನೆಗಳಿಗೆ ಬಾಗಿಲುಗಳಿರುತ್ತಿದ್ದುವು; ಮತ್ತು (ಆ) ಆ ಕಾಲದಲ್ಲಿ ಚಿನ್ನವೆಂಬ ಖನಿಜದ ಪರಿಚಯವಿತ್ತು. ಅದನ್ನು ಬಿಟ್ಟು ನಿಜಕ್ಕೂ ಚಿನ್ನದ ಬಾಗಿಲುಗಳೇ ಇದ್ದುವೆಂಬ ವಾದ ಹೂಡಿದರೆ ಇತಿಹಾಸಕಾರನು ತನ್ನ ಶಿಸ್ತಿನ ಪರಿಧಿಯನ್ನು ಮೀರಿ ಹೋಗಿದ್ದಾನೆಂದರ್ಥ.

ಕಳೆದ ಶತಮಾನದಲ್ಲಿ ನಡೆದ ಇತಿಹಾಸದ ಅಧ್ಯಯನವು ನಮ್ಮ ದೇಶದ ಸಮಕಾಲೀನ ಸಂದರ್ಭ ಗಳಿಗೆ ಅನುಗುಣವಾಗಿ ಮತ್ತು ಪ್ರತಿಕ್ರಿಯೆಯಾಗಿ ನಡೆದಿದೆ. ಇದಕ್ಕೆ ಕೆಲವು ಅಪವಾದಗಳಿರಬಹುದು. ಘೋಷಾಲ್, ಜಯಸ್ವಾಲ್, ರಾನಡೆ, ತಿಲಕ್, ಡಾಂಗೆ ಮುಂತಾದವರು ಮಿಲ್, ಮೆಕಾಲೆ, ಸ್ಮಿತ್ ಮೊದಲಾದ ಆಂಗ್ಲ ಚರಿತ್ರಕಾರರಿಗೆ ಪ್ರತಿಯಾಗಿ ಭಾರತದ ಬಗ್ಗೆ ಸಮರ್ಥನೆ ನೀಡುವ

ಕಾಲಾನುಕ್ರಮವಾಗಿ ಉತ್ಪಾದನಾ ಸಂಬಂಧಗಳು ಹೇಗೆ ಬೆಳೆದುಬಂದುವೆಂದು ಗುರುತಿಸದಿರುವುದು ಇತಿಹಾಸವಾಗುವುದಿಲ್ಲ. ರಾಜಕೀಯ ಚರಿತ್ರೆ, ಹಲವು ಸಂತತಿಗಳು ಪ್ರಭುತ್ವದಲ್ಲಿ ಪಾಲ್ಗೊಂಡದ್ದು, ಇವೆಲ್ಲವೂ ಇತಿಹಾಸದ ಭಾಗವೇ; ಇತಿಹಾಸವನ್ನು ನಿರೂಪಿಸಲು ಅವು ಸಾಮಗ್ರಿ ಒದಗಿಸುತ್ತವೆ. ಆದರೆ ಅದಷ್ಟೇ ಇತಿಹಾಸವಲ್ಲ. ಒಂದು ಮಾನವ ಜನಾಂಗವು ವಿಕಸಿಸಿದ್ದು ಮತ್ತು ಅದು ಒಂದು ಸಂಸ್ಕೃತಿಯನ್ನು ಬೆಳೆಸಿದ್ದು ಮೂಲತಃ ಇತಿಹಾಸದ ಸಾಮಗ್ರಿಯಾಗುತ್ತದೆ.

ಅವಶ್ಯಕತೆಯಿದ್ದುದು ಆರಂಭದ ಕಾಲದ ಒಂದು ವಾಸ್ತವಿಕ ಸನ್ನಿವೇಶ. ಬ್ರಿಟಿಷರು ಭಾರತದಲ್ಲಿ ವಸಾಹತನ್ನು ಸ್ಥಾಪಿಸಿ ಭಾರತಕ್ಕೆ ಗಣನೀಯವಾದ ಸಹಾಯ ಮಾಡಿದರೆಂಬ ನಿಟ್ಟಿನಲ್ಲಿ ಮಿಲ್ ಮೊದಲಾದವರು ಚರಿತ್ರೆ ಬರೆದಿದ್ದರು. ತಮ್ಮ ವಸಾಹತುಶಾಹಿ ದಬ್ಬಾಳಿಕೆಗೆ ಇದೊಂದು ರೀತಿಯ ಸಮರ್ಥನೆಯಾಗಿತ್ತು. ಭಾರತದ ಪ್ರಾಚೀನ ಸಮಾಜವು ಅಸ್ತವ್ಯಸ್ತವಾಗಿತ್ತು, ಅಂದಿನ ಸಾಂಘಿಕ ಸಂಸ್ಥೆಗಳು ಅಪಕ್ವವಾಗಿದ್ದುವು, ರಾಷ್ಟ್ರೀಯತೆಯ ಕಲ್ಪನೆ ಇರಲಿಲ್ಲ, ಕೇಂದ್ರೀಯ ಆಡಳಿತವಿರಲಿಲ್ಲ; ಅವಕ್ಕೆಲ್ಲಾ ಬ್ರಿಟಿಷರು ಪರ್ಯಾಯ ಕಲ್ಪಿಸಿಕೊಟ್ಟಿದ್ದಾರೆಂಬ ಉದ್ಧಟತನ ಮಿಲ್ ವಾದದಲ್ಲಿತ್ತು. ಸ್ವಾತಂತ್ರ್ಯ ಹೋರಾಟದ ಭಾಗವಾಗಿ ಈ ವಾದಕ್ಕೆ ಪ್ರಬಲವಾದ ಉತ್ತರ ನೀಡುವುದು ಬೌದ್ಧಿಕ ವಲಯದ ಜವಾಬ್ದಾರಿಯಾಗಿತ್ತು. ಘೋಷಾಲ್ ಮುಂತಾದ ಚರಿತ್ರಕಾರರು ಅದನ್ನು ನಿರ್ವಹಿಸಲು ಪ್ರಾಚೀನ ಭಾರತದ ಭವ್ಯತೆಯನ್ನು ಕೊಂಡಾಡಲು ಮುಂದಾದರು. ನಮ್ಮ ಸಮಾಜಕ್ಕೆ ನಿಗದಿತ ಸ್ವರೂಪವಿತ್ತು, ನಿಷ್ಕೃಷ್ಟವಾದ ಸಂಸ್ಥೆಗಳಿದ್ದವು, ಸಾಮ್ರಾಜ್ಯಗಳು ಕೇಂದ್ರೀಯ ಆಡಳಿತದಿಂದಲೇ ಸುಭದ್ರವಾಗಿದ್ದವು, ಋಗ್ವೇದ ಕಾಲದ ಗಣಸಂಘಗಳು ಪ್ರಜಾಪ್ರಭುತ್ವವನ್ನು ಅಳವಡಿಸಿಕೊಂಡಿದ್ದುವು, ರಾಷ್ಟ್ರೀಯತೆಯು ಸಾಕಾರಗೊಂಡಿತ್ತು ಮುಂತಾಗಿ ಇವರು ವಾದಿಸಿದರು. ಅಂದರೆ, ಬ್ರಿಟಿಷರು ಭಾರತಕ್ಕೆ ನೀಡಬಹುದಾದ ಬಳುವಳಿ ಯಾವುದೂ ಇಲ್ಲವೆಂದು ಹೇಳುತ್ತಾ ವಸಾಹತುಶಾಹಿ ವಿರೋಧದ ಸಂಘರ್ಷಕ್ಕೆ ಒಂದು ತಾತ್ವಿಕ ಬುನಾದಿಯನ್ನು ರಚಿಸಿಕೊಡುವುದು ಇವರ ಕೊಡುಗೆಯಾಯಿತು. ಭೂತಕಾಲದ ವೈಭವೀಕರಣವನ್ನು ಕೈಬಿಟ್ಟು ಸ್ವಲ್ಪ ಹೆಚ್ಚಿನ ವಸ್ತುನಿಷ್ಠತೆಯನ್ನು ಮೈಗೂಡಿಸಿಕೊಂಡಿದ್ದು ನಮ್ಮ ದೇಶವು ರಾಜಕೀಯ ಸ್ವಾತಂತ್ರ್ಯ ಪಡೆದ ನಂತರವೇ ಎನ್ನಬಹುದು. ವರ್ಣ ವ್ಯವಸ್ಥೆಯ ದುಷ್ಟ ಪರಿಣಾಮ, ಊಳಿಗಮಾನ್ಯ ಪದ್ಧತಿಯ ನಿರಂತರ ಪಿಡುಗು, ಆಂತರಿಕ ಬಿಕ್ಕಟ್ಟುಗಳು, ಪರಕೀಯರ ಪ್ರವೇಶಕ್ಕೆ ಪ್ರತಿರೋಧ ಒಡ್ಡದ ವಿಭಜಿತ ಸಮಾಜ ಮುಂತಾದ ಪ್ರಶ್ನೆಗಳನ್ನು ಆಳವಾಗಿ ಶೋಧಿಸಲು ಸ್ವಾತಂತ್ರ್ಯೋತ್ತರ ಕಾಲದ ಚರಿತ್ರಕಾರರು ವಿವಿಧ ದೃಷ್ಟಿಕೋನಗಳಿಂದ ಯತ್ನಿಸಿದ್ದಾರೆ. ಇದರಲ್ಲಿ ಕೆಲವರಿಗೆ ಮತೀಯ ಅಂಶಗಳು ಪ್ರಮುಖವಾದರೆ, ಇನ್ನು ಬೇರೆಯವರಿಗೆ ಇತರ ಅಂಶಗಳು ಮುಖ್ಯವೆನಿಸಿವೆ. ಭಾರತದ ಇತಿಹಾಸದ ಎಲ್ಲ ಕಪ್ಪುಚುಕ್ಕೆಗಳಿಗೂ ಪರಕೀಯ ದುರಾಕ್ರಮಣಕಾರರನ್ನು ದೂಷಿಸುವಾಗ ಅಂತಹ ಆಕ್ರಮಣಗಳನ್ನು ತಡೆಗಟ್ಟಲು ಅಡ್ಡಿ ಎಲ್ಲಿಂದ ಮತ್ತು ಹೇಗೆ ಬಂದಿತೆಂಬ ಮೂಲಭೂತ ಪ್ರಶ್ನೆಯನ್ನು ಕೆಲವು ಚರಿತ್ರಕಾರರು ಎದುರಿಸಲು ಇಷ್ಟಪಡುವುದಿಲ್ಲ. ಭಾರತವು ಸೊಗಸಾಗಿತ್ತು, ಪರಕೀಯರು ಬಂದು ಹಾಳುಗೆಡವಿದರು, ಎಂದು ಹೇಳುವುದರಲ್ಲಿ ತೃಪ್ತಿ ಹೊಂದುವುದು ಇತಿಹಾಸವನ್ನು ಭಾಗಶಃ ಮಾತ್ರ ನಿರೂಪಿಸಿದಂತಾಗುತ್ತದೆ. ನಮ್ಮ ಸಾಮಾಜಿಕ-ಆರ್ಥಿಕ ವ್ಯವಸ್ಥೆಯು ಸಮಾಜದ ಬಹುಭಾಗದ ಜನರನ್ನು ನಮ್ಮ ದೇಶದಲ್ಲೇ ಪರಕೀಯರನ್ನಾಗಿಸಿತ್ತೆಂಬ ಕಹಿ ಸತ್ಯವು ಕೆಲವರಿಗೆ ರುಚಿಸುವುದಿಲ್ಲ. ಸಮಕಾಲೀನ ಸಂದರ್ಭದಲ್ಲಿ ಹಿಂದಿನ ಆ ಪರಕೀಯರ ಸಂತತಿಯವರೆಂದು ಹೆಸರಿಸುತ್ತಾ ಕೆಲವು ವಿಭಾಗಗಳನ್ನು ದ್ವೇಷಕ್ಕೆ ಗುರಿಮಾಡುವ ರಾಜಕಾರಣ ಸಹ ಇದರಲ್ಲಿದೆ. ಮತೀಯ ದೃಷ್ಟಿಯಿಂದ ಇತಿಹಾಸ ರಚನೆ ಆರಂಭವಾಗುವುದು ಮತ್ತು ಮುನ್ನಡೆಯುವುದು ಹೀಗೆ. ವೇದದಲ್ಲಿ ಆಧುನಿಕ ಜ್ಞಾನವೆಲ್ಲಾ ಅಡಗಿದೆಯೆಂದು ಹೇಳುವುದು ಒಂದು ರೀತಿಯ ವೈಭವೀಕರಣವಾದರೆ, ಆಕ್ರಮಣಗಳು ನಮ್ಮ ವೈಭವವನ್ನು ನುಚ್ಚುನೂರು ಮಾಡಿದುವೆಂಬುದು ಇನ್ನೊಂದು ರೀತಿಯ ಗೊಡ್ಡು ಸಮರ್ಥನೆಯಾಗುತ್ತದೆ. ಆಯುಧಗಳನ್ನು ತಯಾರಿಸಲು ಬೇಕಾದ ತಂತ್ರಜ್ಞಾನ ವಿದ್ದಾಗ್ಯೂ ನಾವೇಕೆ ನಮ್ಮ ದೇವಸ್ಥಾನಗಳನ್ನು ರಕ್ಷಿಸಿಕೊಳ್ಳಲು ಅಶಕ್ತರಾದೆವು? ಈ ಪ್ರಶ್ನೆಯನ್ನು ಹಾಕಿಕೊಳ್ಳದೆ ಇತಿಹಾಸ ರಚನೆ ಮಾಡಹೊರಡುವುದು ಮೂರ್ಖತನ. ಆದರೆ ಮೂರ್ಖತನದಲ್ಲಿ ವಿಜೃಂಭಿಸಲು ಒಂದು ಕಾರಣವಿದೆ. ಅದೇನೆಂದರೆ, ಆ ಪ್ರಶ್ನೆಯು ನಮ್ಮನ್ನು ನೇರವಾಗಿ ಉತ್ಪಾದನಾ ಸಂಬಂಧಗಳತ್ತ ಕರೆದೊಯ್ಯುತ್ತದೆ. ದೇವಸ್ಥಾನದೊಳಕ್ಕೆ ಯಾರಿಗೆ ಪ್ರವೇಶವಿರಲಿಲ್ಲವೋ ಅವರು ಆಯುಧ ಹಿಡಿದು ಆಕ್ರಮಣ ಮಾಡಿದವರನ್ನು ಹಿಮ್ಮೆಟ್ಟಿಸಬೇಕಾಗಿತ್ತೆ? ಹಾಗೆಂದು ಹೇಳಿದ ಮಾತ್ರಕ್ಕೆ ಪರಕೀಯರು ಎಸಗಿದ ಧ್ವಂಸಕೃತ್ಯಗಳನ್ನು ಸಮರ್ಥಿಸಬೇಕು ಅಥವಾ ನಗಣ್ಯವೆಂದು ಬಿಟ್ಟುಬಿಡಬೇಕು ಅಥವಾ ಅಂದಿನ ಅನಿವಾರ್ಯತೆಯೆಂದು ಹತಾಶರಾಗಬೇಕು ಎಂದಲ್ಲ. ಇಂದಿನ ಜಾಗತೀಕರಣದ ಕೆಟ್ಟ ಪರಿಣಾಮಗಳಿಗೆ ನಾವು ಪರಕೀಯರನ್ನು ದೂಷಿಸಿ ತೆಪ್ಪಗೆ ಕುಳಿತುಕೊಳ್ಳುತ್ತೇವೆಯೆ? ಜಾಗತೀಕರಣ ಪ್ರಕ್ರಿಯೆಗೆ ಆಧಾರ ಸ್ತಂಭವಾಗಿ ನಿಲ್ಲುವ ನರಸಿಂಹರಾವ್ - ವಾಜಪೇಯಿ - ಮನಮೋಹನ ಸಿಂಗರನ್ನೂ ನಾವು ವಿರೋಧಿಸುವುದು ಸಹಜವಲ್ಲವೆ? ಇದೇ ರೀತಿಯ ವಿಶ್ಲೇಷಣೆಯು ಮಧ್ಯಕಾಲೀನ ಭಾರತದ ಇತಿಹಾಸದ ಸಂದರ್ಭದಲ್ಲೂ ಪ್ರಸ್ತುತವಾಗುತ್ತದೆ.

> **ಕಳೆದ ಶತಮಾನದಲ್ಲಿ ನಡೆದ ಇತಿಹಾಸದ ಅಧ್ಯಯನವು ನಮ್ಮ ದೇಶದ ಸಮಕಾಲೀನ ಸಂದರ್ಭಗಳಿಗೆ ಅನುಗುಣವಾಗಿ ಮತ್ತು ಪ್ರತಿಕ್ರಿಯೆಯಾಗಿ ನಡೆದಿದೆ. ಇದಕ್ಕೆ ಕೆಲವು ಅಪವಾದಗಳಿರಬಹುದು. ಘೋಷಾಲ್, ಜಯಸ್ವಾಲ್, ರಾನಡೆ, ತಿಲಕ್, ಡಾಂಗೆ ಮುಂತಾದವರು ಮಿಲ್, ಮೆಕಾಲೆ, ಸ್ಮಿತ್ ಮೊದಲಾದ ಆಂಗ್ಲ ಚರಿತ್ರಕಾರರಿಗೆ ಪ್ರತಿಯಾಗಿ ಭಾರತದ ಬಗ್ಗೆ ಸಮರ್ಥನೆ ನೀಡುವ ಅವಶ್ಯಕತೆಯಿದ್ದುದು ಆರಂಭದ ಕಾಲದ ಒಂದು ವಾಸ್ತವಿಕ ಸನ್ನಿವೇಶ.**

ಪ್ರಾಚೀನ ಭಾರತದ ಚರಿತ್ರೆಯಲ್ಲೂ ಕೆಲವು ಪ್ರಶ್ನೆಗಳು ಕಠಿಣವಾಗಿ ತೋರುತ್ತವೆ. ಹರಪ್ಪ ನಾಗರಿಕತೆಯು ಪತನವಾದದ್ದೇಕೆ ಎಂಬುದಕ್ಕಿಂತಲೂ ಒಮ್ಮೆ ಪತನಗೊಂಡದ್ದು ಪುನರ್ರಚನೆಗೊಳ್ಳಲು ಎರಡು ಸಾವಿರ ವರ್ಷಗಳ ಅವಧಿ ಏಕೆ ಬೇಕಾಯಿತು ಎಂಬುದು ಹೆಚ್ಚು ಮುಖ್ಯವಾದ ಪ್ರಶ್ನೆ. ಋಗ್ವೇದದ ಆರ್ಯರಿಗೂ ಹರಪ್ಪ ಸಂಸ್ಕೃತಿಯ ನಿರ್ಮಾಪಕರಿಗೂ ಐಕ್ಯತೆ ಕಲ್ಪಿಸುವಾಗ ಈ ಪ್ರಶ್ನೆಯನ್ನು ಹಾಕಿಕೊಳ್ಳಲೇಬೇಕು. ಎರಡೂ ಸಂಸ್ಕೃತಿಯ ಪ್ರವರ್ತಕರು ಒಬ್ಬರೇ ಆಗಿದ್ದರೆ ನಗರೀಕರಣವು ಅಲ್ಪಕಾಲದಲ್ಲೇ ಮತ್ತೆ ಅಸ್ತಿತ್ವಕ್ಕೆ ಬರಬೇಕಾಗಿತ್ತು. ಏಕೆಂದರೆ, ಅದಕ್ಕೆ ಬೇಕಾದ ಸಾಮಗ್ರಿಗಳಿದ್ದವು ಮತ್ತು ತಾಂತ್ರಿಕ ಕೌಶಲ್ಯವಿತ್ತು. ಆದರೆ ಹರಪ್ಪ ಪತನದ ನಂತರದ ಅಶೋಕನ ಕಾಲದವರೆಗೆ ಮತ್ತೆ ನಗರೀಕರಣದ ಸೂಚನೆ ಇಲ್ಲ. ಲಾತೂರಿನಲ್ಲಿ ಭೂಕಂಪದಿಂದ ಉಂಟಾದ ಧ್ವಂಸವನ್ನು ಹತ್ತು ವರ್ಷಗಳಲ್ಲಿ ನಾವು ತುಂಬಿಕೊಂಡಿರುವುದಾದರೆ ಹರಪ್ಪದ ಜನರು ನೂರು ವರ್ಷಗಳಲ್ಲಾದರೂ ಏಕೆ ಮತ್ತೆ ತಮ್ಮ ನಾಗರಿಕತೆಯ ಆವಿರ್ಭಾವವನ್ನು ಮಾಡಿಕೊಳ್ಳಲಾಗಲಿಲ್ಲ? ಋಗ್ವೇದದ ಆರ್ಯರು ಮತ್ತು ಹರಪ್ಪದ ನಿರ್ಮಾಪಕರು ಬೇರೆಬೇರೆ ಎಂಬುದು ಇದರಿಂದ ತಿಳಿದುಬರಬೇಕು. ಆದರೆ ಮುರಳಿ ಮನೋಹರ ಜೋಶಿ ಸಂಪ್ರದಾಯದ ಚರಿತ್ರಕಾರರು ಪುಟಗಟ್ಟಲೆ ಅಸಂಬದ್ಧವಾದ ಲೇಖನಗಳನ್ನು ಬರೆದು ತಮ್ಮ ಅಪ್ರೌಢಿಮೆಯನ್ನು ಬಹಿರಂಗಗೊಳಿಸಿಕೊಳ್ಳುತ್ತಿದ್ದಾರೆ. ಅಂತೆಯೇ ವರ್ಣ ವ್ಯವಸ್ಥೆಯು ಕೇವಲ ದುಡಿಮೆಯ ವಿಭಜನೆಯಾಗಿದ್ದಿತೆಂದು ಹೇಳುವಾಗ ಸಹ ಕೆಲವು ಪ್ರಶ್ನೆಗಳನ್ನು ಎದುರಿಸಬೇಕಾಗುತ್ತದೆ. ದುಡಿಮೆಯ ವಿಭಜನೆಯಾದಾಗ ಕಸುಬುಗಳು ವಂಶ ಪಾರಂಪರ್ಯವಾಗಬೇಕಾಗಿಲ್ಲ, ಆದರೆ ಜಾತಿ ವ್ಯವಸ್ಥೆಯಲ್ಲಿ ಇದೇ ಪ್ರಮುಖ ಲಕ್ಷಣವಾಯಿತು. ಹಾಗಿದ್ದರೆ ವರ್ಣ ವ್ಯವಸ್ಥೆಗೆ ಬೇರೇನೋ ಕಾರಣವಾಗಿರಬೇಕಲ್ಲವೆ?

ಇಂತಹ ನೂರಾರು ಪ್ರಶ್ನೆಗಳು ನಮ್ಮ ಇತಿಹಾಸದ ಸಂದರ್ಭದಲ್ಲಿ ಎದ್ದುನಿಲ್ಲುತ್ತವೆ. ಭಾವೋದ್ರೇಕವಿಲ್ಲದೆ ಅವನ್ನು ವಿಶ್ಲೇಷಿಸಿಕೊಳ್ಳುವುದು ಆರೋಗ್ಯಕರ. ಭಾರತದ ಬಗೆಗಿನ ಹೆಮ್ಮೆ, ಅಭಿಮಾನ, ಯಾವುದನ್ನೂ ಕಡಿಮೆ ಮಾಡಿಕೊಳ್ಳದೆ ಆ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಲು ಸಾಧ್ಯವಿದೆ. ಅದಕ್ಕೆ ತರ್ಕಮತಿ ಬೇಕು, ವ್ಯಕ್ತಿನಿಷ್ಠವಾಗಿ ವಸ್ತುಸ್ಥಿತಿಯನ್ನು ವಿಶ್ಲೇಷಿಸಿಕೊಳ್ಳುವ ಜಾಡ್ಯವನ್ನು ದೂರಮಾಡಿಕೊಳ್ಳಬೇಕು, ಅಷ್ಟೆ. ಇಂದಿನ ರಾಜಕೀಯವನ್ನು ಹಿಂದಿನ ಚರಿತ್ರೆಗೆ ಗಂಟುಹಾಕುವ ಪ್ರಸಂಗವೇನಿದ್ದರೂ ಆಗಿಹೋದ ಕೆಟ್ಟ ಘಟನೆಗಳು ಮತ್ತೆ ಮರುಕಳಿಸದಿರುವಂತೆ ಮಾಡಲು ಸೀಮಿತಗೊಳ್ಳಬೇಕು. ಅಂತಹ ಹಿಂದಿನ ಘಟನೆಗಳಿಗೆ ನಾವು ಜವಾಬ್ದಾರರಲ್ಲ; ಆದರೆ ಅಂಥವು ಈಗ ಸಂಭವಿಸಿದರೆ ಅದಕ್ಕೆ ನಮ್ಮದೂ ಜವಾಬ್ದಾರಿ ಇದೆ. ಏನೋ ಕುತ್ಸಿತ ಅಥವಾ ಅಮಾನವೀಯ ಪ್ರವೃತ್ತಿ ಹಿಂದೆಂದೋ ಕಂಡುಬಂದಿದ್ದರೆ ನಮ್ಮ ಅಭಿಮಾನಕ್ಕೇನೂ ಕುಂದುಂಟಾಗುವುದಿಲ್ಲ; ಅದು ಇಂದು ಕಂಡುಬರಬಾರದು, ಅಷ್ಟೆ. ಅಂತಹ ಪ್ರವೃತ್ತಿಯೇ ಇರಲಿಲ್ಲವೆಂದು ಪೊಳ್ಳು ವಾದ ಹೂಡಿ ಸಮಾಧಾನ ಪಡೆಯುವುದು ಅನಗತ್ಯ. ಇದನ್ನು ಇನ್ನೊಂದು ರೀತಿಯಲ್ಲೂ ಗ್ರಹಿಸಬಹುದು: ಇತಿಹಾಸದಲ್ಲಿ ಜರುಗಿರುವ ಅನರ್ಥಗಳನ್ನು ಇಲ್ಲವಾಗಿಸುವ ಸ್ತುತ್ಯ ಪ್ರಯತ್ನವು ಇಂದಿನ ಘಟನೆಗಳ ಸಂದರ್ಭದಲ್ಲಿ ಅಗತ್ಯ; ಏಕೆಂದರೆ, ಇತಿಹಾಸದ ನಿರ್ಮಿತಿಯಲ್ಲಿ ನಾವಿಂದು ಭಾಗಿಗಳು. ರೂಪ್ ಕನ್ವರಳನ್ನು ನಾವು ವೈಯಕ್ತಿಕವಾಗಿ ಸುಟ್ಟಿದ್ದಲ್ಲ; ಆದರೆ ಸುಡುವ ಪ್ರಕರಣ ಸಾಧ್ಯವಾಗುವ ವಾತಾವರಣವನ್ನು ತೊಡೆದುಹಾಕುವ ಕೆಲಸದಲ್ಲಿ ನಾವು ಪೂರ್ಣಪ್ರಮಾಣದಲ್ಲಿ ಭಾಗವಹಿಸಿ ಯಶಸ್ಸು ಗಳಿಸಿಲ್ಲ. ಕಂಬಾಲಪಲ್ಲಿಯಲ್ಲಿ ದಲಿತರನ್ನು ಸುಟ್ಟವರು ನಾವಲ್ಲದಿರಬಹುದು, ಆದರೆ ಸುಡುವ ಪ್ರಕ್ರಿಯೆ ಅಸ್ತಿತ್ವದಲ್ಲಿರುವಂತಹ ವಿದ್ಯಮಾನಗಳಿಗೆ ನಾವು ಸಾಕಷ್ಟು ಪ್ರಮಾಣದಲ್ಲಿ ಜವಾಬ್ದಾರರು. ಇತಿಹಾಸದ ಅನರ್ಥಗಳನ್ನು ತಿದ್ದುವುದೆಂದರೆ ಈ ಅರ್ಥದಲ್ಲಿ ಮಾತ್ರ ಸಾಧ್ಯ ಮತ್ತು

ಅಂಗೀಕಾರಾರ್ಹ. ಅದನ್ನು ಬಿಟ್ಟು, ಮಸೀದಿಯನ್ನು ಮತ್ತು ಮನಸ್ಸುಗಳನ್ನು ಉರುಳಿಸಿ ಹಿಂದಿನ ಅನರ್ಥವನ್ನು ತಿದ್ದಹೊರಟರೆ, ಹಿಂದಿನ ಅನರ್ಥದ ಜೊತೆಗೆ ಇಂದಿನ ಅನರ್ಥವೂ ಸೇರಿ ಮುಂದಿನ ಮತ್ತೊಂದು ಅನರ್ಥಕ್ಕೆ ಹಾದಿ ಮಾಡಿಕೊಟ್ಟಂತೆಯೇ. ಹಿಂದೆ ನಮ್ಮ ಗೌರವಕ್ಕೆ ಚ್ಯುತಿ ತಂದವರ ಪೀಳಿಗೆಯನ್ನು ಇಲ್ಲವೆ ಅವರ ಮತಧರ್ಮಕ್ಕೆ ಸೇರಿದವರನ್ನು ಇಂದು ಶಿಕ್ಷಿಸುವುದರಿಂದ ಅಂದು ಹೋದ ಗೌರವ ಮತ್ತೆ ಲಭಿಸುವುದರ ಬದಲು ನಾವಿಂದು ಗಳಿಸಿರಬಹುದಾದ ಅಲ್ಪಸ್ವಲ್ಪ ಗೌರವವೂ ನಷ್ಟವಾಗುತ್ತದೆ. ಒಂದು ಉದಾಹರಣೆ ನೋಡಬಹುದು: ನಮ್ಮಲ್ಲಿ ಇಂದಿಗೂ ಅಸ್ಪೃಶ್ಯತೆ ಇದೆ. ಸಂವಿಧಾನದಲ್ಲಿ ಮಾತ್ರ ಅದನ್ನು ನಿರ್ಮೂಲಗೊಳಿಸಿದ್ದೇವೆ. ಇದು ತಲೆತಗ್ಗಿಸಬೇಕಾದ ಸಂಗತಿ. ಆದರೆ ಈಗ ನೂರು ವರ್ಷಗಳ ಹಿಂದೆ ಇದ್ದಷ್ಟು ಅಸ್ಪೃಶ್ಯತೆಯ ಆಚರಣೆ ಇಂದು ಇಲ್ಲ. ಇತಿಹಾಸದ ಅನರ್ಥಗಳಲ್ಲಿ ಅಸ್ಪೃಶ್ಯತೆ ಒಂದೆಂದು ಯಾರಾದರೂ ಒಪ್ಪಬೇಕಾದ್ದು. ಕೆಲವು ಜಾಣ ವಿದ್ವಾಂಸರು ಅದನ್ನು ಬೇರೆ ರೀತಿಯಲ್ಲಿ ತೂಕ ಮಾಡಿ ತೃಪ್ತಿ ಪಡೆಯುತ್ತಾರೆ. ಪಾಶ್ಚಾತ್ಯ ದೇಶಗಳಲ್ಲಿ ಗುಲಾಮರನ್ನು ನಡೆಸಿಕೊಂಡಷ್ಟು ಹೀನಾಯವಾಗಿ ನಾವು ಅಸ್ಪೃಶ್ಯರನ್ನು ನಡೆಸಿಕೊಳ್ಳಲಿಲ್ಲವೆಂದು ಅವರ ಅಭಿಪ್ರಾಯ. ಗುಲಾಮರು ದಂಗೆಯೆದ್ದಂತೆ ಅಸ್ಪೃಶ್ಯರು ದಂಗೆಯನ್ನೂ ಮಾಡದಿರುವಷ್ಟು ಮಟ್ಟಿಗೆ ಅವರ ಮನಸ್ಸುಗಳಿಗೆ ಕಡಿವಾಣ ಹಾಕಿದ್ದೇವೆಂದು ಅವರಿಗೆ ಅನ್ನಿಸುವುದಿಲ್ಲ. ಹೇಗೂ ಇರಲಿ, ಅನರ್ಥವಂತೂ ಜರುಗಿಹೋಯಿತು. ಚರಿತ್ರೆಯ ಪುಟಗಳಿಂದ ಅದನ್ನು ತೆಗೆದುಹಾಕಲು ಸಾಧ್ಯ; ಆದರೆ ನಡೆದ ಘಟನೆಯನ್ನು ಇಲ್ಲವಾಗಿಸಲು ಸಾಧ್ಯವಿಲ್ಲ. ಅಸ್ಪೃಶ್ಯರೆನಿಸಿಕೊಂಡವರು ಇತಿಹಾಸದ ಈ ಅನರ್ಥವನ್ನು ಸರಿಪಡಿಸುವುದು ಹೇಗೆ? ಅವರ ಅಭಿಮಾನವನ್ನು ಕಾಪಾಡಿಕೊಳ್ಳುವುದು ಹೇಗೆ? ಮುರಳಿ ಮನೋಹರ ಜೋಶಿ – ಅದ್ವಾನಿ ಹಾದಿಯನ್ನು ಅನುಸರಿಸುವುದಾದರೆ ಅವರು ಅಸ್ಪೃಶ್ಯತೆಯನ್ನು ಮಾನ್ಯಮಾಡಿ ಆಚರಿಸಿದವರ ಸಂತತಿಗಳ ನಮ್ಮನ್ನು ತರಿದುಹಾಕಬೇಕು, ನಮ್ಮ ತಲೆ ಚೆಂಡಾಡಬೇಕು. ಹಾಗೆ ಮಾಡಿಲ್ಲದಿರುವುದು ಅವರ ಉದಾತ್ತ ಸಂಸ್ಕೃತಿಯ ಪ್ರತೀಕವೆನ್ನೋಣವೆ? ಅಥವಾ ಅಂತಹ ಅನರ್ಥ ಇನ್ನು ಸಾಧ್ಯವಾಗದಿರುವಂತಹ ಸಾಮಾಜಿಕ-ಆರ್ಥಿಕ-ಸಾಂಸ್ಕೃತಿಕ ಪರ್ಯಾಯವನ್ನು ರಚಿಸಲು ಒಗ್ಗೂಡೋಣವೆ?

ಸಮಾಜದ ವಿಕಾಸದ ಹಾದಿಯಲ್ಲಿ ಏನೆಲ್ಲಾ ಘಟಿಸಿವೆ! ಅದನ್ನು ತಿಳಿಯುವುದರ ಪ್ರಯೋಜಕ್ಕೆ ಹಲವು ಮುಖಗಳಿವೆ: ವಿಕಾಸದ ಹಾದಿಯನ್ನು ಯಥಾವತ್ತಾಗಿ ಗ್ರಹಿಸುವುದು; ಅಪೇಕ್ಷಿತ ವಿಕಾಸಕ್ಕಿರುವ ಅಡೆತಡೆಗಳನ್ನು ಗುರುತಿಸುವುದು; ಅಂತಹ ನಿರ್ಬಂಧಕಗಳ ನಿವಾರಣೆಗೆ ಸೂತ್ರಗಳನ್ನು ಕಂಡುಕೊಳ್ಳುವುದು ಮತ್ತು ಕಾರ್ಯ ಪ್ರವೃತ್ತರಾಗಲು ಮಾರ್ಗದರ್ಶನ ಪಡೆಯುವುದು. ಅಂದು ಹಾಗಿತ್ತು, ಆದ್ದರಿಂದ ಇಂದೂ ಹಾಗೆಯೇ ಇರಬೇಕೆಂಬ ಒತ್ತಾಯ ಅಥವಾ ಅನಿವಾರ್ಯತೆ ಏನೂ ಇಲ್ಲ. ಉದಾಹರಣೆಗೆ, ಗೋಮಾಂಸ ಭಕ್ಷಣೆ. ಐದುಸಾವಿರ ವರ್ಷಗಳ ಹಿಂದೆ ನಮ್ಮ ಪೂರ್ವಿಕರು ಗೋಮಾಂಸ ಭಕ್ಷಣೆ ಮಾಡುತ್ತಿದ್ದರೆಂದರೆ ಇಂದು ನಾವೂ ಅದನ್ನು ಮಾಡಿಯೇ ತೀರಬೇಕೆಂಬ ನಿರ್ಬಂಧವೇನೂ ಇಲ್ಲ ಅಥವಾ ಅವರು ತಿನ್ನುತ್ತಿದ್ದರೆಂದು ನಾವು ಸಂಕೋಚಪಡಬೇಕಾಗಿಯೂ ಇಲ್ಲ. ಈಗಲೂ ಪ್ರಪಂಚದಲ್ಲಿ ಅದನ್ನು ತಿನ್ನುವವರಿದ್ದಾರೆ, ತಿನ್ನದವರೂ ಇದ್ದಾರೆ. ಆದರೆ ನಮ್ಮ ಪೂರ್ವಿಕರು ಅದನ್ನೆಂದೂ ತಿನ್ನುತ್ತಲೇ ಇರಲಿಲ್ಲವೆಂದು ಮೊಂಡುವಾದ ಏಕೆ ಬೇಕು? ಮಾನವ ಜನಾಂಗದ ಇತಿಹಾಸದಲ್ಲಿ ಅನೇಕ ಹಂತಗಳಿವೆ. ಅವನ್ನು ತಟಾಯಿಸಿಯೇ ನಾವೆಲ್ಲಾ ಬಂದಿರುವುದು. ಒಂದು ಹಂತದಲ್ಲಿ ಮಾನವ ಬೇಯಿಸದ ಮಾಂಸವನ್ನು ತಿನ್ನುತ್ತಿದ್ದ; ಆಮೇಲೆ ಬೇಯಿಸುವುದನ್ನು ಕಲಿತುಕೊಂಡ. ನಮ್ಮ ಪೂರ್ವಿಕರು ಈ ಹಂತದಲ್ಲೆಂದೂ ಇರಲೇ ಇಲ್ಲವೆಂದು ಆಗ್ರಹಿಸುವುದು ಅವಿವೇಕಿಯ ಲಕ್ಷಣ. ಇಂದು ನಾವು ಗೋಮಾಂಸ ಅಥವಾ ಮೇಕೆ ಮಾಂಸ ತಿನ್ನಬೇಕೆ, ಬೇಡವೆ ಎಂಬುದು ಸ್ವತಂತ್ರ ವಿಷಯ. ನಮ್ಮ ಹಿಂದಿನವರು ತಿನ್ನುತ್ತಿದ್ದರೆಂಬುದು ಇಂದಿನವರು ತಿನ್ನಬೇಕೆಂಬುದಕ್ಕೆ ಕಾರಣವಾಗಬೇಕಿಲ್ಲ.

ಇನ್ನೊಂದು ಉದಾಹರಣೆ ನೋಡಬಹುದು: ಋಗ್ವೇದದಲ್ಲಿ ಯಮ-ಯಮಿ ಎಂಬ ಸೋದರ-ಸೋದರಿಯ ನಡುವಣ ಒಂದು ಪ್ರಖ್ಯಾತ ಸಂವಾದವಿದೆ. ಸೋದರಿಯು ಸೋದರನನ್ನು ಸಂಭೋಗಕ್ಕೆ ಆಹ್ವಾನಿಸುವ ಪ್ರಕರಣ ಅದು. ಯಾವುದೋ ಕಾಲದಲ್ಲಿದ್ದ ಆಚರಣೆಯ ಒಂದು ಸ್ಮೃತಿ ಇದರಲ್ಲಡಗಿದೆ. ಮಾನವಶಾಸ್ತ್ರದ ಎಲ್ಲ ವಿದ್ಯಾರ್ಥಿಗಳಿಗೂ ಅಂತಹ ಆಚರಣೆಯ ಹಂತದ ಪರಿಚಯವಿರುತ್ತದೆ. ಆ ಹಂತದ ಪುನರಾವರ್ತನೆಯಾಗಬೇಕೆಂದು ಯಾರು ಹೇಳುತ್ತಾರೆ? ಅಂತಹ ಹಂತವೇ ಇರಲಿಲ್ಲವೆಂದು ಆರ್ಭಟ ಮಾಡುವುದು ತೀರಾ ಅಪಕ್ವವಾದ ಮನಸ್ಸಿನ ಲಕ್ಷಣ.

ಇದರ ಅರ್ಥವಿಷ್ಟೆ: ಇಂದಿನ ಸನ್ನಿವೇಶ, ಆಶಯ ಇತ್ಯಾದಿಗಳನ್ನು ಆರೋಪಿಸಿ ಇತಿಹಾಸವನ್ನು ವ್ಯಾಖ್ಯಾನಿಸುವುದು ಅಪಚಾರವೆನಿಸುತ್ತದೆ. ಇತಿಹಾಸದ ಪಠ್ಯಪುಸ್ತಕದಲ್ಲಿ ಗೋಮಾಂಸ ಭಕ್ಷಣೆಯನ್ನು ಪ್ರಸ್ತಾಪಿಸಿದರೆ ನಮ್ಮ ಮನಸ್ಸಿಗೆ ಘಾಸಿ ಉಂಟಾಗುತ್ತದೆಯೆಂಬ ಮಾತು ನಿರರ್ಥಕ. ಇದು ಘಾಸಿ ಉಂಟುಮಾಡುತ್ತದೆಯಾದರೆ, ಯಾರೋ ದುಷ್ಟ ಆಕ್ರಮಣಕಾರರು ನಮ್ಮ ದೇವಸ್ಥಾನಗಳನ್ನು ಲೂಟಿ ಮಾಡಿದರೆಂಬುದು ಏಕೆ ಘಾಸಿಯನ್ನುಂಟು ಮಾಡುವುದಿಲ್ಲ? ಅಥವಾ ಇಲ್ಲಿಯವರೇ ಬೌದ್ಧ ವಿಹಾರಗಳನ್ನು, ಜೈನ ಬಸದಿಗಳನ್ನು ಧ್ವಂಸಗೊಳಿಸಿದ್ದು ಘಾಸಿಯುಂಟುಮಾಡುವುದಿಲ್ಲವೇಕೆ? ಹಾಗೇನಾದರೂ ಘಾಸಿಯುಂಟಾಗುವುದಾದರೆ ನಾವು ಇತಿಹಾಸದ ಅಧ್ಯಯನಕ್ಕೆ ಅಗತ್ಯವಾದ ಬೌದ್ಧಿಕ ಶಿಸ್ತನ್ನು ಬೆಳೆಸಲು ಮೊದಲು ಕಲಿಯೋಣ, ಇಂತಹ ವಿಷಯಗಳಿಂದ ಘಾಸಿಗೊಳ್ಳುವುದನ್ನು ಬಿಡೋಣ. ಶಿಕ್ಷಣವಿರುವುದು ಬೌದ್ಧಿಕ ಶಿಸ್ತನ್ನು ಕರಗತ ಮಾಡಿಕೊಳ್ಳಲು ತರಬೇತಿ ನೀಡುವುದಕ್ಕೆ ಎಂಬುದನ್ನು ಮರೆಯದಿರೋಣ. ಅನೇಕ ಬಾರಿ ಪರಕೀಯರು ದಂಡೆತ್ತಿ ಬಂದು ನಮ್ಮ ದೇಶವನ್ನು ಕೊಳ್ಳೆ ಹೊಡೆದರೆಂದು ಉಲ್ಲೇಖಿಸಿದರೆ ಮನಸ್ಸಿಗೆ ನೋವಾಗುತ್ತದೆಂದು ಇನ್ನು ಮೇಲೆ ಅಂತಹದ್ದೇನೂ ಘಟಿಸಲಿಲ್ಲವೆಂದು ಪರ್ಯಾಯ ಇತಿಹಾಸವನ್ನು ಬರೆದಿಟ್ಟುಕೊಳ್ಳೋಣವೇನು? ದೇವಸ್ಥಾನಗಳು ಸಂಪತ್ತಿನ ಶೇಖರಣೆಗೆ ಆಗರವಾದದ್ದೇ ಅವುಗಳ ಲೂಟಿಗೆ ಪ್ರೇರಣೆಯಾಯಿತಾದರೂ ಇಂದಿನ ನಮ್ಮ ದೇವಸ್ಥಾನಗಳು ಸಂಪತ್ತನ್ನು ದೂರವಿಡುವುದಿಲ್ಲವೇಕೆ? ಹಾಗೆ ನೋಡಿದರೆ, ನಮ್ಮ ದೇವಾಲಯಗಳು ವಿದೇಶಿ ಲೂಟಿಕೋರರನ್ನು ಮಾತ್ರವೇ ಸೆಳೆದಿಲ್ಲ, ಸ್ವಕೀಯರ ಕಣ್ಣಿಗೂ ಅವು ಬಿದ್ದಿವೆ. ಕಲ್ಹಣನ ರಾಜತರಂಗಿಣಿಯಲ್ಲಿ ಅಂದಿನ ಕಾಶ್ಮೀರದ ಪ್ರಕ್ಷುಬ್ಧತೆಯನ್ನು ವಿವರವಾಗಿ ಪ್ರಸ್ತಾಪಿಸಲಾಗಿದೆ. ಶ್ರೀಹರ್ಷನೆಂಬ ರಾಜನಿಗೆ ಲೋಷ್ಟಧರನೆಂಬ ವಿಟನಿದ್ದ. ಅವನೊಮ್ಮೆ ಹೇಳಿದ: ''ಕಲಶೇಶ್ವರ ಮಂದಿರದಲ್ಲಿ ಇರುವ ಚಿನ್ನ ಸಂಪತ್ತನ್ನೆಲ್ಲಾ ತಂದುಕೊಟ್ಟಲ್ಲಿ ಈ ವಿತಸ್ತಾ ನದಿಗೊಂದು ಸೇತುವನ್ನು ನಾನು ಕಟ್ಟಿಸಿಬಿಡುತ್ತೇನೆ.'' ಇನ್ನೊಮ್ಮೆ ಹೇಳಿದ: ''ಅರಸನೆ, ದೇವನೊಬ್ಬನು ಬಂಧನದಲ್ಲಿದ್ದಾನೆ. ಆತನ ಬಿಡುಗಡೆಯಾಗಬೇಕಾಗಿದೆ.'' ಅದರರ್ಥ: ''ಕಳ್ಳರ ಭಯವನ್ನುಂಟುಮಾಡುವ ಮಂದಿರದ ಸಂಪತ್ತನ್ನೆಲ್ಲಾ ಇಲ್ಲಿಗೆ ತರಬೇಕು.'' ರಾಜನು ಅಂತೆಯೇ ಮಾಡಿ

## ನೀಗ್ರೋ ನನ್ನ ಸಹೋದರ



ಈ ಗೊಂಡಾರಣ್ಯದಲ್ಲಿ
ಅವನ ಕರಿಯ ದೇಹ
ಚಲಿಸುವ ಕಪ್ಪು ಮೋಡಗಳಂತೆ
ಕಪ್ಪು ಬೆಳಕಿನ ಮಿಂಚಿನಂತೆ
ಕರಿಯ ಅವಯವಗಳ ಸಮುದ್ರದಂತೆ
ಉಕ್ಕುವುದು ಕರಗುವುದು ಮತ್ತು ಅಲೆಯುವುದು
ಉರಿವ ಬಿಸಿಲಲ್ಲಿ ಹೊಳೆಯುವುದು
ಗಾಳಕ್ಕೆ ಸಿಗಬಲ್ಲದು
ತಾಳಕ್ಕೆ ತಕ್ಕಂತೆ ಕುಣಿಯಬಲ್ಲದು
ಶತ್ರುವಿನ ಸದೆ ಬಡಿಯಬಲ್ಲದು
ನಿಗ್ರೋ - ನನ್ನ ಸಹೋದರ
ಎಲ್ಲ ಕಾಡುಗಳಿಂದ ಹೂಗಳ ಆಯುವನು
ನನ್ನ ಸಹೋದರನ ಅಂಗಾಲು
ಕೆಂಪಾಗಿವೆ ಗುಲಾಬಿಗಳ ಹಾಗೆ

ಮೂಲ: ಅಲಿ ಸರ್ದಾರ ಜಾಫ್ರಿ ಕನ್ನಡಕ್ಕೆ: ವಿಭಾ

ಯೋಚಿಸಿದ: 'ಶೂನ್ಯವಾದ ಮಂದಿರದಲ್ಲಿ ಇಷ್ಟೊಂದು ಸಂಪತ್ತು ಇರುವಾಗ, ಇನ್ನುಳಿದ ಪ್ರಾಚೀನ ಮಹಾದೇವ ಮಂದಿರಗಳಲ್ಲಿ ಎಷ್ಟೊಂದು ಅಪಾರ ಸಂಪತ್ತು ಇರಬಹುದು!' ಹಾಗೆ ಯೋಚಿಸಿದ ನಂತರ ''ದೇವಳಗಳಲ್ಲಿ ಉಳಿದಿದ್ದ ದೇವರ ಪ್ರತಿಮೆಗಳನ್ನು ತರುವ ಬಗ್ಗೆ ಉದಯರಾಜನನ್ನು ದೇವೋತ್ಪಾಟನ ನಾಯಕನನ್ನಾಗಿ ನೇಮಿಸಿದನು. ಅವನು ದೇವಮಂದಿರಕ್ಕೆ ಹೋಗುವಾಗ ಮೂಗು, ಕಾಲು, ಕೈ ಇಲ್ಲದ ನಗ್ನ ಭಿಕ್ಷುಕರಿಂದ ಮಲಮೂತ್ರ ಮೊದಲಾದವುಗಳನ್ನು ಮೂರ್ತಿಗಳಿಗೆ ಚೆಲ್ಲಿಸಿ, ಆಮೇಲೆ ಪ್ರತಿಮೆಗಳನ್ನು ಕೀಳುತ್ತಿದ್ದನು. ಚಿನ್ನ, ಬೆಳ್ಳಿ ಮೊದಲಾದವುಗಳಿಂದ ನಿರ್ಮಿಸಿದ ದೇವ ಪ್ರತಿಮೆಗಳು ಕಟ್ಟಿಗೆಯ ತುಂಡುಗಳಂತೆ ರಸ್ತೆಗಳಲ್ಲಿ ಹೊರಳಾಡುತ್ತಿದ್ದವು... ಹರ್ಷನೆಂಬ ತುರುಷ್ಕ ರಾಜನು ತನ್ನ ರಾಜ್ಯದ ಗ್ರಾಮ, ಪುರ, ನಗರಗಳಲ್ಲಿ ಯಾವ ಮಂದಿರದಲ್ಲಿಯೂ ಮೂರ್ತಿಯಿಲ್ಲದಂತೆ ಮಾಡದೆ ಉಳಿಯಲಿಲ್ಲ'' (ರಾಜತರಂಗಿಣಿ, ಎಂಟನೆಯ ತರಂಗ). ಅವನ ಇತರ ದುಷ್ಕೃತ್ಯಗಳ ಮಾಹಿತಿಯನ್ನು ವಿಸ್ತರಿಸುವುದು ಅನಗತ್ಯ. ಹರ್ಷನು ತುರುಷ್ಕನಲ್ಲ, ಆದರೆ ಅವನ ಹೀನಾಯ ಕೃತ್ಯಗಳನ್ನು ಪರಿಗಣಿಸಿ ಕಲ್ಹಣ ಅವನನ್ನು ಹಾಗೆಂದಿದ್ದಾನೆ.

ಒಂದು ಮತಧರ್ಮದವರು ಮಾತ್ರವೇ ಸಂಪತ್ತನ್ನು ಲೂಟಿ ಮಾಡಿಲ್ಲ, ದೇವಾಲಯಗಳನ್ನು ಅಪವಿತ್ರಗೊಳಿಸಿಲ್ಲ. ಹೀಗಿರುವಾಗ ಇತಿಹಾಸದ ಅಧ್ಯಯನದಿಂದ ನಾವು ತಿಳಿಯಬಹುದಾದದ್ದೇನು? ಯಾರೂ ಯಾವ ಪೂಜಾ ಮಂದಿರಗಳನ್ನೂ ಭಗ್ನಗೊಳಿಸಿ ಕೀರ್ತಿ ಪಡೆಯಲಾರರು ಎಂಬುದನ್ನಲ್ಲವೆ? ಇತಿಹಾಸದ ಪಠ್ಯಪುಸ್ತಕಗಳಲ್ಲಿ ಸ್ಪಷ್ಟಪಡಿಸಬೇಕಾದ್ದು ಇದನ್ನೇ. ಅದನ್ನೆಲ್ಲಾ ತೆಗೆದುಹಾಕುವುದರಿಂದ ಪ್ರಯೋಜನಕ್ಕಿಂತ ಅಪಾಯವೇ ಹೆಚ್ಚು. ನಿರ್ಬಲ ಹೃದಯಗಳೇನಾದರೂ ಶಾಲಾ-ಕಾಲೇಜುಗಳಲ್ಲಿದ್ದರೆ ಅವಕ್ಕೆ ಸಾಂತ್ವನ ನೀಡುವುದು ವಿಷಯಗಳನ್ನು ಮುಚ್ಚಿಡುವುದರಿಂದ ಅಲ್ಲ. ಇಂದಿನ ಐತಿಹಾಸಿಕ ಸವಾಲುಗಳನ್ನು ಗುರುತಿಸಿ, ಎದುರಿಸಿ, ಸಾಮುದಾಯಿಕ ಮಧ್ಯಪ್ರವೇಶಕ್ಕೆ ಭೂಮಿಕೆ ರಚಿಸಬೇಕಾದ ಯುವಕರಿಗೆ ಬಹಳ ನವಿರಾದ ಮನಸ್ಸುಗಳನ್ನು ಹೊಂದಿಸಿಕೊಡುವುದು ಶಿಕ್ಷಣಕ್ಕೆ ಮತ್ತು ಪಠ್ಯಪುಸ್ತಕಗಳಿಗೆ ಭೂಷಣವಲ್ಲ. ಆದ್ದರಿಂದ ''ನಮ್ಮ ಮನಸ್ಸಿಗೆ ತೀವ್ರವಾಗಿ ನೋವುಂಟಾಗುತ್ತದೆ, ದಯವಿಟ್ಟು ಇತಿಹಾಸವನ್ನು ಬೇರೆ ರೀತಿಯಲ್ಲಿ ಬರೆಯಿರಿ''ಎನ್ನುವುದು ಹುಂಬತನವಲ್ಲ; ಯಾವುದೋ ಸಮಕಾಲೀನ ರಾಜಕೀಯ ದುರುದ್ದೇಶಗಳ ಪೂರೈಕೆಗೆ ಒಂದು ಆಯುಧವನ್ನಾಗಿ ಮಾರ್ಪಡಿಸಿಕೊಳ್ಳುವ ಹುನ್ನಾರ ಅದರಲ್ಲಿದೆ. ಇತಿಹಾಸದ ಅಧ್ಯಯನ ಮಾರ್ಗದಲ್ಲಿ ಇದು ಸ್ವಾಗತಾರ್ಹವಾದ ನೀತಿಯಲ್ಲ.

ಪ್ರಾಚೀನ ಕಾಲದಲ್ಲಾಗಲಿ, ಇಂದಾಗಲಿ, ಇರದಿದ್ದ ಅಥವಾ ಇಲ್ಲದ ವರ್ಚಸ್ಸು ಮತ್ತು ಶ್ರೇಯಸ್ಸುಗಳನ್ನು ಇದ್ದುವು ಅಥವಾ ಇವೆಯೆಂದು ಹೇಳಿಕೊಂಡರೆ ಇಂದಿನ ವಿಕೃತ ಘಟನೆಗಳನ್ನು ವೀಕ್ಷಿಸುವುದರಲ್ಲಿ ಅನಾಸಕ್ತಿಯನ್ನು ಬೆಳೆಸಿಕೊಳ್ಳಬೇಕೆಂಬ ಅಪೇಕ್ಷೆಯನ್ನು ವ್ಯಕ್ತಪಡಿಸಿದಂತೆ ಆಗುತ್ತದೆ. ಅಸ್ತಿತ್ವದಲ್ಲಿರುವುದನ್ನು ಅಥವಾ ಇದ್ದುದನ್ನು ಮರೆಮಾಚಿಸಿಕೊಂಡು ಬದಲಾವಣೆಗೆ ಹರಿಕಾರರಾಗುವ ಸಾಧ್ಯತೆ ಸೊನ್ನೆ. ಇತಿಹಾಸದ ಅಧ್ಯಯನವು ಯಾವ ಕ್ರಮವನ್ನು ಅನುಸರಿಸಬೇಕೆಂಬುದರಲ್ಲಿ ಸಂದಿಗ್ಧತೆಯೇನೂ ಇಲ್ಲ. ಭೂತ ಮತ್ತು ವರ್ತಮಾನಗಳಿಗೆ ಭಿನ್ನವಾದ ಉತ್ತಮಿಕೆಯು ನಮ್ಮ ಆಕಾಂಕ್ಷೆಯಾದರೆ ಭಾವನಾಪರವಶರಾಗದೆ ನಮ್ಮನ್ನು ನಾವು ಬೌದ್ಧಿಕವಾಗಿ ಸಜ್ಜುಗೊಳಿಸಿಕೊಳ್ಳಬೇಕು. ಇತಿಹಾಸದ ಅಧ್ಯಯನದಲ್ಲಿ ಬಾಲಿಶ ಪ್ರತಿಕ್ರಿಯೆಗಳು ಸಮಕಾಲೀನ ರಾಜಕಾರಣದ ಅಂಗವಾಗುವುದು ಅಹಿತಕರ. ಹರಪ್ಪದ ಮೊಹರುಗಳಲ್ಲಿ ಇಲ್ಲದ ಕುದುರೆಯನ್ನು ಸೃಷ್ಟಿಸುವುದು ಅಥವಾ ಓಂ ಎಂಬುದನ್ನು ಅರಸುವುದರಲ್ಲಿ ಬುದ್ಧಿವಂತಿಕೆ ಪ್ರದರ್ಶಿಸುವುದು ಇಂತಹ ಬಾಲಿಶತನಕ್ಕೆ ಉದಾಹರಣೆಗಳಾಗುತ್ತವೆ. ನಮ್ಮ ತಥಾಕಥಿತ ಇತಿಹಾಸದ ಪಂಡಿತರು ಕೆಲವರು ಈ ರೀತಿಯ ಪ್ರದರ್ಶನಗಳಲ್ಲಿ ಸೊಗಸನ್ನು ಕಾಣುವುದು ಒಂದು ಸೋಜಿಗದ ಸಂಗತಿ.

## ಸಾದರ ಸ್ವೀಕಾರ

**ಅಧೋಲೋಕ** (ಸಣ್ಣಕಥೆಗಳು)
ಎಸ್. ಆರ್. ಗುರುನಾಥ್
ಪು : ೧೪೪ ಬೆಲೆ : ರೂ. ೫೦
ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ - ೫೭೭೫೪೫. ಹಿರಿಯೂರು ತಾ. ಚಿತ್ರದುರ್ಗ ಜಿ.

**ವಿರಾಟಪರ್ವ ಸಂಗ್ರಹ**
ಸಂ. ಡಾ|| ಎಚ್. ಟಿ. ಪೋತೆ,
ಡಾ|| ಚನ್ನಬಸವ ಹಿರೇಮಠ
ಪು : ೮೪ ಬೆಲೆ : ರೂ. ೫೦

**ಜನಪದ ಕಥನ ಗೀತೆಗಳು**
ಸಂ. ಡಾ|| ಪಿ. ಕೆ. ಖಂಡೋಬಾ,
ಡಾ|| ಟಿ. ಎಂ. ಭಾಸ್ಕರ್
ಪು : ೧೩೨ ಬೆಲೆ : ರೂ. ೫೦

**ರಾಮಚಂದ್ರಚರಿತ ಪುರಾಣ ಸಂಗ್ರಹ**
ಸಂ. ಡಾ|| ಶಾಂತಿನಾಥ ದಿಬ್ಬದ,
ಡಾ|| ಎಸ್. ಶಿವಾನಂದ
ಪು : ೧೧೪ ಬೆಲೆ : ರೂ. ೫೦

**ಆಯ್ದ ಸ್ವರವಚನಗಳು** (ಪ್ರಾತಿನಿಧಿಕ ಸಂಕಲನಗಳು)
ಸಂ. ಡಾ|| ವ್ಹಿ. ಜಿ. ಪೂಜಾರ,
ಡಾ|| ಈಶ್ವರಯ್ಯ ಮಠ
ಪು : ೧೩೦ ಬೆಲೆ : ರೂ. ೫೦

**ಆಯ್ದ ಕೀರ್ತನೆಗಳು** (ಪ್ರಾತಿನಿಧಿಕ ಸಂಕಲನಗಳು)
ಸಂ. ಡಾ. ಬಸವರಾಜ ಸಬರದ,
ಡಾ. ಸಿ. ನಾಗಭೂಷಣ
ಪು : ೧೧೦ ಬೆಲೆ : ರೂ. ೫೦
ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು
**ಪ್ರಸಾರಾಂಗ**, ಗುಲಬರ್ಗಾ ವಿಶ್ವವಿದ್ಯಾನಿಲಯ, ಗುಲಬರ್ಗಾ - ೫೮೫ ೧೦೬

**ಕಂಪನ ಮತ್ತು ಶಬ್ದಮಾಪನ**
(ವಿಜ್ಞಾನ ಲೇಖನಗಳು) ಕೆ. ಎನ್. ಭಗವಾನ್
ಪು : ೭೦ ಬೆಲೆ : ರೂ. ೨೫
**ಕನ್ನಡ ಸಾಹಿತ್ಯ ಪರಿಷತ್ತು**, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮

**ದಲಿತ ಹೋರಾಟ : ಗಂಭೀರ ಸವಾಲುಗಳು**
(ವೈಚಾರಿಕ ಲೇಖನ) ಪ್ರೊ. ಜಿ. ಎಚ್. ನಾಯಕ್
ಪು : ೫೬ ಬೆಲೆ : ರೂ. ೪೦
**ದಸಂಸ ಪ್ರಕಾಶನ**, ನಂ. ೪೦೨, ೧ನೇ ಮುಖ್ಯರಸ್ತೆ, ೨ನೇ ಬ್ಲಾಕ್, ಹೆಚ್‌ಬಿಆರ್ ಬಡಾವಣೆ, ಬೃಂದಾವನ ನಗರ, ಬೆಂಗಳೂರು - ೪೩

**ಚುಟುಕು ಚಿನ್ಮಯಿ** (ಚುಟುಗ್ಗವಿತೆಗಳು)
ಡಾ|| ಶೈಲಜಾ ಉಡಚಣ
ಪು : ೬೦ ಬೆಲೆ : ರೂ. ೩೫
**ಚೇತನ ಪ್ರಕಾಶನ**, ಜೇವರ್ಗಿ ಕಾಲನಿ, ಗುಲಬರ್ಗಾ - ೫೮೫ ೧೦೨

**ಬಾಕ್ಸ್ ಐಟಂ** (ಸುದ್ದಿ ಮಿಂಚುಗಳು)
ತುರುವೇಕೆರೆ ಪ್ರಸಾದ್
ಪು : ೬೮ ಬೆಲೆ : ರೂ. ೪೦
**ದೇವಿ ಪ್ರಕಾಶನ**, ನಂ. ೮೯, ಹೊನ್ನದೇವಿ ಬಿಲ್ಡಿಂಗ್, ತೆಂಗಿನ ತೋಟದ ರಸ್ತೆ, ಟಿ. ದಾಸರಹಳ್ಳಿ, ಬೆಂಗಳೂರು - ೫೬೦ ೦೫೭

**ಕನಸು ಕುಂಚಿಗೆ** (ಪದ್ಯ ಸಂಕಲನ) ಪ್ರಿಯಂವಂದೆ
ಪು : ೬೦ ಬೆಲೆ : ರೂ. ೪೫
**ಪ್ರೇಮಸಿಂಧು ಪ್ರಕಾಶನ**, ವಿಕ್ರಮಪುರ, ಭವಾನಿನಗರ, ಅಥಣಿ - ೫೯೧ ೩೦೪

**ಬಕುಲದ ದಾರಿ** (ಕವಿತೆಗಳು) ಎಲ್. ಸಿ. ಸುಮಿತ್ರಾ
ಪು : ೭೨ ಬೆಲೆ : ರೂ. ೪೫
**ಅಕ್ಷರ ಪ್ರಕಾಶನ**, ಹೆಗ್ಗೋಡು, ಸಾಗರ, ಕರ್ನಾಟಕ

**ಕನ್ನಡ ಭಾಷಾವ್ಯಾಸಂಗ** (ಅಧ್ಯಯನ)
ಡಾ|| ಸಂಗಮೇಶ ಸವದತ್ತಿಮಠ
ಪು : ೨೦೨ ಬೆಲೆ : ರೂ. ೮೦

**ತೌಲನಿಕ ದ್ರಾವಿಡ ಭಾಷಾವಿಜ್ಞಾನ**
(ಅಧ್ಯಯನ) ಡಾ|| ಸಂಗಮೇಶ ಸವದತ್ತಿಮಠ
ಪು : ೨೮೮ ಬೆಲೆ : ರೂ. ೧೧೦
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ರೂಪರಶ್ಮಿ ಪ್ರಕಾಶನ**, ಧಾರವಾಡ - ೫೮೦ ೦೦೮

**ಹಿತ ಸಮಾಹಿತ** (ಕವನ ಸಂಕಲನ)
ಶ್ರೀಮತಿ ಶಶಿಕಲಾ ಸುಬ್ಬಣ್ಣ
ಪು : ೭೨ ಬೆಲೆ : ರೂ. ೪೫
**ಸಂವಹನ**, ೧೨/೧ಎ, ಈವನಿಂಗ್ ಬಜಾರ್ ಹಿಂಭಾಗ, ಶಿವರಾಂ ಪೇಟೆ, ಮೈಸೂರು - ೧

**ವೃದ್ಧಾಪ್ಯವನ್ನು ನಿಭಾಯಿಸುವುದು ಹೇಗೆ?**
ಡಾ|| ಕೆ. ಆರ್. ಶ್ರೀಧರ್
ಪು : ೧೦೪ ಬೆಲೆ : ರೂ. ೪೦

**ಮಕ್ಕಳಲ್ಲಿ ಸೃಜನಶೀಲತೆಯನ್ನು ವೃದ್ಧಿಸುವುದು ಹೇಗೆ?** ಡಾ|| ಕಿಕ್ಕೇರಿ ವೀರನಾರಾಯಣ
ಪು : ೯೬ ಬೆಲೆ : ರೂ. ೪೦

**ಅನ್ಯೋನ್ಯ ದಾಂಪತ್ಯ ಹೇಗೆ?**
ಡಾ|| ಸಿ. ಆರ್. ಚಂದ್ರಶೇಖರ್
ಪು : ೯೬ ಬೆಲೆ : ರೂ. ೪೦

**ಯಶಸ್ವೀ ಜೀವನಕ್ಕೆ ನೀಲಿನಕ್ಷೆ**
ವೈ. ಜಿ. ಮುರಳೀಧರ
ಪು : ೧೧೨ ಬೆಲೆ : ರೂ. ೪೦

**ನೀವು ಯಶಸ್ವೀ ಗೃಹಿಣಿಯೇ?**
ಶಾಂತಾ ನಾಗರಾಜ್
ಪು : ೯೬ ಬೆಲೆ : ರೂ. ೪೦
ಮೇಲಿನ ಐದು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು-೧



# ಸಂಜೆಗತ್ತಲ ಬದುಕು

ನಾನು ತುಂಬು ಯೌವನದಲ್ಲಿರುವಾಗ ನನ್ನ ಕಣ್ಣಿಗೆ ಕಂಡ ವೃದ್ಧರ ಜೀವನವನ್ನು ಶೋಚನೀಯಗೊಳಿಸಿದ ಸನ್ನಿವೇಶಗಳನ್ನು ನೋಡುತ್ತ ಬೆಚ್ಚಿಬಿದ್ದಿದ್ದೇನೆ. ನಾನೂ ಸಹ ಮುಂದೆ ಮುದುಕನಾಗಿಬಿಡುತ್ತೀನಿ, ಆಗ ನನಗೂ ಇಂಥ ದುರವಸ್ಥೆಗಳು ಕಾದಿರಬಹುದು ಎಂಬ ಆತಂಕ-ಭಯಗಳಿಗೆ ಹೊರತಾಗಿ ಮುದುಕರ ಬಗ್ಗೆ ನಮ್ಮ ಭಾವೀ ಜನಾಂಗಕ್ಕೆ ಇರುವ ಅನಾಸ್ಥೆ ಆ ಹೊತ್ತಿಗೆ ನನ್ನ ಕಾಡಿದ ವಿಷಯ. ಕಾಲಾನುಕಾಲಕ್ಕೆ ಮನುಷ್ಯನ ಬದುಕು ಆಧುನಿಕಗೊಂಡಹಾಗೆ ಅವನ ಸ್ವಭಾವ ಅರಳುವ ಬದಲು ಸಂಕುಚಿತಗೊಳ್ಳುತ್ತ ಸಾಗಿರುವ ಬಗ್ಗೆ, ಸ್ವಾರ್ಥದ ಕೋಟೆಯನ್ನೇ ತಮ್ಮ ಸುತ್ತ ಕಟ್ಟಿಕೊಳ್ಳುವವರ ಬಗ್ಗೆ ನನಗೆ ಸಂತಾಪವಿದೆ. ಏಕೆಂದರೆ ತಾವು ಮಾಡಿದ ಅಡಿಗೆಯನ್ನು ಮುಂದೊಂದು ದಿನ ತಾವೇ ಉಣ್ಣದೆ ವಿಧಿಯಿಲ್ಲ ಎಂಬ ಪ್ರಜ್ಞೆ ಆ ಹೊತ್ತಿಗೆ ಅವರಲ್ಲಿ ಮಿಡಿದಿರುವುದಿಲ್ಲ.

ಮನುಷ್ಯನ ಮನೋಭಾವದಲ್ಲಿ – ನಾನು ಸುಖವಾಗಿದ್ದೇನೆ ಎಂದು ಪ್ರಾಮಾಣಿಕವಾಗಿ ಒಪ್ಪಿಕೊಳ್ಳುವವರು ತೀರಾ ಕಡಿಮೆ. ವೃದ್ಧರ ವಿಷಯದಲ್ಲಂತೂ ಹೀಗೆ ಒತ್ತಾಯಿಸುವುದು ಆಗದ ಮಾತು. ಏಕೆಂದರೆ ಬಹು ಪಾಲು ವೃದ್ಧರ ಬಗ್ಗೆ ಉಳಿದವರ ಅಸಂತೋಷ, ಅಸಹನೆ, ತಾತ್ಸಾರ ಇಂದಿಗೂ ಮುಂದುವರಿದುಕೊಂಡೇಬಂದಿದೆ.

ವೃದ್ಧರ ಅಳಲು ನಿನ್ನೆ ಮೊನ್ನೆಯದಲ್ಲ. ಅವರ ದಾರುಣ ಜೀವನದ ಕತೆ ಮಹಾಭಾರತ ಕಾಲದಲ್ಲಿಯೇ ದಾಖಲಾಗಿದೆ. ತನ್ನ ನೂರು ಜನ ಮಕ್ಕಳನ್ನು ಭೀಮನಿಗೆ ಬಲಿಕೊಟ್ಟ ಧೃತರಾಷ್ಟ್ರ ಮುಂದೆ ಪಾಂಡವರ ಆಶ್ರಯದಲ್ಲಿ ಹದಿನಾರು ವರ್ಷ ಕಳೆಯಬೇಕಾಗಿಬಂದದ್ದು ಎಂಥ ಘೋರ ಪ್ರಾರಬ್ಧ! ಭೀಮ ಪದೇಪದೇ ಪೌರುಷ ಹೇಳಿಕೊಳ್ಳುತ್ತ ಧೃತರಾಷ್ಟ್ರನನ್ನು ಅವಮಾನಕ್ಕೆ ಗುರಿಮಾಡುತ್ತಿದ್ದ – ಹಂಗಿಸುತ್ತಿದ್ದ – ಅಪಹಾಸ್ಯ ಮಾಡುತ್ತಿದ್ದ. ಊಟಕ್ಕೆ ಬಡಿಸುವಾಗ ಕುರುಡನಿಗೆ ಏನೂ ಗೊತ್ತಾಗುವುದಿಲ್ಲ ಎಂಬ ಅರಿವಿದ್ದೂ ಅನ್ನವನ್ನು ಶ್ರಾದ್ಧದ ಪಿಂಡದ ಹಾಗೆ ಕಟ್ಟಿ ಎಲೆಯ ಮೇಲೆ ಇಡುತ್ತಿದ್ದ. ಸಾಯುವುದಕ್ಕಿಂತ ಸಹಿಸಿಕೊಳ್ಳುವ ಕಷ್ಟ ಧೃತರಾಷ್ಟ್ರನ ಪಾಲಿಗೆ.

'ಧೃತರಾಷ್ಟ್ರನ ಕರ್ಮ ಅವನು ಅನುಭವಿಸಿದ' ಎಂದು ಹೇಳಿ ಪಾರಾಗಲು ಹವಣಿಸುವುದು ಈಗಿನವರಿಗೆ ಒಂದು ನೆವವಾಗಬಾರದು. ಹಾಗೆ ನೋಡಿದರೆ ಧೃತರಾಷ್ಟ್ರ ಒಬ್ಬನೇ ಏಕೆ, ಜೀವನದಲ್ಲಿ ಪ್ರತಿಯೊಬ್ಬನೂ ಗೊತ್ತಿದ್ದೋ ಗೊತ್ತಿಲ್ಲದೆಯೋ ಅಷ್ಟೋ ಇಷ್ಟೋ ತಪ್ಪುಮಾಡದೆ ಇಲ್ಲ, ಅಡ್ಡದಾರಿ ಹಿಡಿಯದೆ ಇಲ್ಲ, ಅನ್ಯಾಯ ಮಾಡದೆ ಇಲ್ಲ, ತಮ್ಮ ತಮ್ಮ ಪರಿಧಿಯಲ್ಲಿ ಒಂದಷ್ಟು ಭ್ರಷ್ಟಾಚಾರ ಮಾಡದೆ ಇಲ್ಲ. ರಕ್ತ ಬಿಸಿಯಿರುವ ತನಕ ಇಡೀ ಜಗತ್ತನ್ನೇ ವೈಯಕ್ತಿಕ ಉಳಿಗತನಕ್ಕೆ ಮೀಸಲಾಗಿರಿಸಿಕೊಳ್ಳುವ ಬಯಕೆ ಹೊಂದಿದ ಇಂಥವರೆಲ್ಲ ಆ ರಕ್ತ ಆರುತ್ತ ಬಂದ ಹಾಗೆ ಒಂದಲ್ಲ ಒಂದು ದಿನ ಏಕಾಂತದಲ್ಲಿ ಕೂತು – ಮೂಕವಾಗಿ ಅತ್ತು ಆತ್ಮಾವಲೋಕನ ಮಾಡಿಕೊಳ್ಳದೆ ಇರೋದಿಲ್ಲ, ತಮ್ಮ ತಪ್ಪುಗಳಿಗಾಗಿ ಪಶ್ಚಾತ್ತಾಪ ಪಡದೆ ಇರೋದಿಲ್ಲ. ಆದರೆ ದುರಂತ ಅಂದರೆ ಆ ಹೊತ್ತಿಗೆ ದುಃಖಿಸುವುದು ಬಿಟ್ಟು ಮತ್ತೇನೂ ಸುಧಾರಣೆ ಸಾಧ್ಯವಾಗದ ಹಂತವನ್ನು ಅವರೆಲ್ಲ ತಲುಪಿಬಿಟ್ಟಿರುತ್ತಾರೆ.

ನಾವು ಅನೇಕ ಕಥೆಗಳಲ್ಲಿ ಓದುತ್ತೀವಿ, ಪ್ರವಚನಗಳಲ್ಲಿ ಕೇಳುತ್ತೀವಿ. ಅನ್ಯಾಯ, ಅಕ್ರಮ, ದ್ವೇಷ ಮುಂತಾದ ಅವಗುಣಗಳ ಬಗ್ಗೆ ನಮಗೆ ಗೊತ್ತಿಲ್ಲದೆ ಇಲ್ಲ. ಆದರೂ ಔದಾರ್ಯದ ವಿಷಯ ಬಂದಾಗ ಆಚರಣೆಯ ಸಂಬಂಧದಲ್ಲಿ ಮನಸ್ಸು ಕಟುವಾಗಿಬಿಡುತ್ತದೆ. ಹೊರಗಿನವರ ಮಾತು ಬಿಡಿ, ಸ್ವಂತ ತಂದೆತಾಯಿಗಳ ಬಗ್ಗೆಯೇ ಮಮಕಾರ ಮಂಕಾಗಿಬಿಡುತ್ತದೆ. ಮಗನ ಅಭಿವೃದ್ಧಿಗಾಗಿ ಅಪ್ಪ ಎಷ್ಟೆಲ್ಲ ಹೆಣಗಾಡಿದ ಎಂಬೆಲ್ಲ ಸಂಗತಿಗಳು ಗೌಣವಾಗಿಬಿಡುತ್ತವೆ.

ಹಿಂದೆಲ್ಲ ಎಂಟೋ, ಹತ್ತೋ ಮಕ್ಕಳನ್ನು ಹಡೆದೂ ಸಹ ಜನ ಹಾಯಾಗಿರುತ್ತಿದ್ದರಂತೆ. (ಬಹುಶಃ ಆಗಿನ ಕಾಲಕ್ಕೆ ಅವಶ್ಯಕತೆಗಳು ಕಡಿಮೆ). ಆದರೆ ಈಗ ಕಾಲಕ್ಕೆ ತಕ್ಕಹಾಗೆ ಒಂದೋ, ಎರಡೋ ಮಕ್ಕಳನ್ನು ಪಡೆದವರು ತಮ್ಮ ಜೀವಮಾನವಿಡೀ ಬೆವರು ಸುರಿಸಿ ಬದುಕಿನ ಅತ್ಯಂತ ಮನೋಹರ ಅಪೇಕ್ಷೆಗಳಾದ ಇಂಜನಿಯರ್, ಡಾಕ್ಟರ್, ಸಿ.ಎ.ಗಳನ್ನು ಮಕ್ಕಳಲ್ಲಿ ಕಂಡು ಕೃತಾರ್ಥರಾಗಿ ಅವರೀಗ ಅಮೆರಿಕಾದಲ್ಲೋ ಆಸ್ಟ್ರೇಲಿಯಾದಲ್ಲೋ ನೆಲೆನಿಂತದ್ದು ನೋಡುತ್ತ ಪಟ್ಟ ಹರ್ಷವೆಲ್ಲ ನಿಧಾನವಾಗಿ ಹಪಹಪಕ್ಕೆ ತಿರುಗಿದೆ. ವೃದ್ಧಾಪ್ಯದಲ್ಲಿ ಮಕ್ಕಳೊಂದಿಗೆ ಬದುಕಬೇಕೆಂಬ ಆಸೆ ಕನಸಾಗಿದೆ. ಕನ್ನಡಿಯ ಗಂಟಾಗಿದೆ. ಹಾಗಾಗಿ ಅಳಿದುಳಿದ ಜೀವನ ನಿರ್ವಹಣೆಗೆ ಅನಿವಾರ್ಯವಾಗಿ ಮತ್ತೊಬ್ಬರನ್ನು ಅವಲಂಬಿಸುತ್ತ ಯಾರ್ಯಾರದೋ

ರಾಮಚಂದ್ರ ಭಾವೆ

**ನಾವು ಅನೇಕ ಕಥೆಗಳಲ್ಲಿ ಓದುತ್ತೀವಿ, ಪ್ರವಚನಗಳಲ್ಲಿ ಕೇಳುತ್ತೀವಿ. ಅನ್ಯಾಯ, ಅಕ್ರಮ, ದ್ವೇಷ ಮುಂತಾದ ಅವಗುಣಗಳ ಬಗ್ಗೆ ನಮಗೆ ಗೊತ್ತಿಲ್ಲದೆ ಇಲ್ಲ. ಆದರೂ ಔದಾರ್ಯದ ವಿಷಯ ಬಂದಾಗ ಆಚರಣೆಯ ಸಂಬಂಧದಲ್ಲಿ ಮನಸ್ಸು ಕಟುವಾಗಿಬಿಡುತ್ತದೆ. ಹೊರಗಿನವರ ಮಾತು ಬಿಡಿ, ಸ್ವಂತ ತಂದೆತಾಯಿಗಳ ಬಗ್ಗೆಯೇ ಮಮಕಾರ ಮಂಕಾಗಿಬಿಡುತ್ತದೆ. ಮಗನ ಅಭಿವೃದ್ಧಿಗಾಗಿ ಅಪ್ಪ ಎಷ್ಟೆಲ್ಲ ಹೆಣಗಾಡಿದ ಎಂಬೆಲ್ಲ ಸಂಗತಿಗಳು ಗೌಣವಾಗಿಬಿಡುತ್ತವೆ.**

ಹಂಗಿನ ಮಾತುಗಳನ್ನು ಕೇಳಲಾರದೆ ಕೇಳುತ್ತ ಅಸಹಾಯಕರಾಗಿ ಕುಗ್ಗಬೇಕಾಗಿದೆ. ಮಕ್ಕಳು ಪರದೇಶಗಳಲ್ಲಿ ಮುಂದುವರಿದ ನಾಗರಿಕರಾಗಿ, ಡಾಲರ್‌ಗಳ ಮೋಹಕ್ಕೆ ತಮ್ಮನ್ನು ತಾವೇ ಮಾರಿಕೊಂಡಮೇಲೆ ತಿರುಗಿ ಈ ದೇಶಕ್ಕೆ ಬರುವ ಅವಕಾಶವಾದರೂ ಎಲ್ಲಿ? ಆ ಮನೋವೃತ್ತಿಯಾದರೂ ಹೇಗೆ ಬಂದೀತು ? ಬದಲಾಗಿ ತಮಗೆ ತಾವೇ ಮಹಾಪ್ರತಿಭಾವಂತರು, ಮಹಾ ಯೋಗ್ಯರು ಎಂದು ಪುಳಕಗೊಳ್ಳುತ್ತ ಈ ದೇಶ ತಮಗೇನು ಮಹಾ ಕೊಟ್ಟಿದೆ ಎಂದು ದೂರುವುದೇ ಹೆಚ್ಚು.

ಆಯ್ತು ವಿದೇಶಗಳಿಗೆ ಹೋಗಿ ಹಾಯಾಗಿರುವವರ ಗೊಡವೆ ನಮಗೆ ಬೇಡ. ಆದರೆ ಇಲ್ಲಿದ್ದವರಾದರೂ ಸರಿ ಇದ್ದಾರೆಯೇ ? ನಾನು ಶಾಲೆಯಲ್ಲಿದ್ದಾಗ ನಮ್ಮ ಮೇಷ್ಟ್ರು ಒಂದು ಮಾತು ಪದೇ ಪದೇ ಹೇಳುತ್ತಿದ್ದರು – ಒಬ್ಬ ತಂದೆಗೆ ಹತ್ತು ಮಕ್ಕಳು ಭಾರವಾಗಲ್ಲ. ಆದರೆ ಒಬ್ಬ ತಂದೆ ಹತ್ತು ಮಕ್ಕಳಿಗೆ ಭಾರವಾಗ್ತಾನೆ ಅಂತ. ಹತ್ತು ಮಕ್ಕಳಲ್ಲಿ ಈಗಿರುವ ಮೂರೋ ನಾಲ್ಕೋ ಮಕ್ಕಳಲ್ಲೇ ತಂದೆ ತಾಯಿಗಳ ಯೋಗಕ್ಷೇಮದ ಮಾತು ಬಂದಾಗ ಅವರವರಲ್ಲೇ ಮನಸ್ತಾಪ, ವಾಗ್ವಾದ ಶುರು. 'ಅಪ್ಪನನ್ನು ನೀನಿಟ್ಟುಕೋ, ಅಮ್ಮನನ್ನು ನೀನಿಟ್ಟುಕೋ' ಅಂತ. ಆಮೇಲೆ ಅವರೆಲ್ಲ ಒಂದಾಗಿ 'ನಾನೊಬ್ಬನೇ ನಿಮಗೆ ಮಗನಾ ? ನಾನ್ಯಾಕೆ ನಿಮ್ಮನ್ನು ಇಟ್ಟುಕೊಳ್ಳಬೇಕು !' ಎಂದೆಲ್ಲ ತಂದೆತಾಯಿಗಳನ್ನು ಸತಾಯಿಸಲು ಪ್ರಾರಂಭಿಸುತ್ತಾರೆ. ಗಮನಿಸಿ – ಇವರೆಲ್ಲ ಮಹಾ ಮೇಧಾವಿಗಳು. ವಿದೇಶಿ ಕಂಪನಿಗಳಲ್ಲಿ ಸೇರಿ ಸಾವಿರಗಟ್ಟಲೆ ಗಳಿಸುವವರು. ಅಪ್ಪನ ಪೆನ್‌ಷನ್ ಇವರ ಕಣ್ಣಿಗೆ ಪುಡಿಗಾಸು. ನೀವೂ ಬೇಡ - ನಿಮ್ಮ ಹಣವೂ ಬೇಡ ಎಂಬ 'ಧಾರಾಳತನ ?' ಅಂತೂ ಕೊನೆಗೆ ಇದೊಂದು ಕರ್ಮ ಎಂಬಂತೆ ತಮ್ಮಲ್ಲೇ ಒಂದು ಒಪ್ಪಂದಕ್ಕೆ ಬಂದು ತಂದೆ ಒಬ್ಬನ ಪಾಲು, ತಾಯಿ ಒಬ್ಬನ ಪಾಲಾಗಿ, ಮದುವೆ ಆದಾಗಿನಿಂದ ಒಬ್ಬರನ್ನೊಬ್ಬರು ಬಿಟ್ಟು ಅಗಲಲು ಇಷ್ಟಪಡದ ದಂಪತಿಗಳು ಈಗ ಪರಸ್ಪರ ಅವಲಂಬನದ ಅಗತ್ಯವಿರುವಾಗಲೇ, ವೃದ್ಧಾಪ್ಯದಲ್ಲಿ ಬೇರೆ ಬೇರೆಯಾಗ ಬೇಕೆಂದು ಮಕ್ಕಳು ವಿಧಿಸುವುದು ಎಂಥ ದಾರುಣ ಪ್ರಸಂಗ !

ಹೋಗಲಿ, ಒಂದಷ್ಟು ಕಾಲ ಅಪ್ಪನೋ ಅಮ್ಮನೋ ಮಕ್ಕಳ ಪಾಲಿಗೆ ಬಂದರೂ ಹಿಂಸೆ ತಪ್ಪಿದ್ದಲ್ಲ. ಅದು ಮಾಡಬೇಡ, ಇದು ಮಾಡಬೇಡ, ಅವರ ಜತೆ ಮಾತು ಬೇಡ, ಇವರ ಜತೆ ಸ್ನೇಹ ಬೇಡ ಇತ್ಯಾದಿ ಪ್ರತಿದಿನದ ಆಕ್ಷೇಪಣೆಗೆ ಬಾಗಿದರೂ ಮಕ್ಕಳ ಐಷಾರಾಮಿ ಸಂಸ್ಕೃತಿಗೆ ಒಗ್ಗಲಾರದೆ ಮನೆಯ ಮುದುಕರು ಬಟ್ಟೆಗಂಟಿದ ಶಾಶ್ವತ ಕಲೆಗಳಾಗಿಬಿಡುತ್ತಾರೆ. ಹೀಗೆ ಕಲೆಗಳಿರುವ ಬಟ್ಟೆ ಧರಿಸಲು ಯಾರಿಗೆ ತಾನೆ ಮನಸ್ಸು ಬರುತ್ತದೆ ? ಹೀಗಾಗಿ ನಮ್ಮ ದೈನಂದಿನ ಚಟುವಟಿಕೆಗಳಲ್ಲಿ ಅಪ್ಪ ಅಥವಾ ಅಮ್ಮನ ಉಪಸ್ಥಿತಿ ಒಂದು ತೊಡಕಾಗಿ ಕಾಡದೆ ಇರೋದಿಲ್ಲ. ಮನೆಗೆ ಬಂದ ವಿ.ಐ.ಪಿ. ಅತಿಥಿಗಳ ಮುಂದೆ ಇವರಿಂದಾಗಿ ಎಲ್ಲಿಯಾದರೂ ಆಭಾಸವಾಗಿಬಿಟ್ಟೀತೇ ಎಂಬ ಆತಂಕವೇ ಹೆಚ್ಚು. ಕೆಲವೊಂದು ಸಲವಂತೂ ಅಪ್ಪ ಅಮ್ಮ ಕೇವಲ ತಿನ್ನುವುದಕ್ಕಾಗಿಯೇ ಬದುಕಿದ್ದಾರೆ ಎಂಬ ಯೋಚನೆ ಬರೋದೇ ತಡ ಮಕ್ಕಳು ಹತಾಶರಾಗಿಬಿಡುತ್ತಾರೆ. ಆಗ ಮುದುಕರ ಮನಸ್ಸು, ಬದುಕು ಇನ್ನಷ್ಟು ಘೋರ. ಅಕಸ್ಮಾತ್ ಯಾವುದೋ ಒಂದು ಕಾಯಿಲೆಗೆ ಈಡಾಗಿ ಮನೆಯೊಳಗಿನ ಮುದುಕರು ನರಳಿದರಂತೂ ಉಳಿದವರೆಲ್ಲರ ಮನಸ್ಸು ರೋಸಿಹೋಗಿ ಗಾಳಿ ಬಿಸಿಯೇರಿ ವಾತಾವರಣ ಹದಗೆಟ್ಟು ವೃದ್ಧರು ತಮ್ಮ ಮಕ್ಕಳ ಮನೆಯಲ್ಲಿಯೇ ಯಾರಿಗೂ ಬೇಡವಾಗಿಬಿಡುತ್ತಾರೆ.

ನಮ್ಮಲ್ಲಿಯ ಸಂಸ್ಕೃತಿಗೂ ಪರದೇಶಗಳಲ್ಲಿನ ವ್ಯವಸ್ಥೆಗೂ ಅನೇಕ ವ್ಯತ್ಯಾಸಗಳಿವೆ. ಅನೇಕ ಮುಂದುವರಿದ ದೇಶಗಳಲ್ಲಿ ಮಕ್ಕಳ ಬಗ್ಗೆ, ಹಿರಿಯರ ಬಗ್ಗೆ ಅಲ್ಲಿಯ ಸರ್ಕಾರಗಳು, ಸಂಸ್ಥೆಗಳು ಜವಾಬ್ದಾರಿ ವಹಿಸುವಂತಹ ಸಂಸ್ಥೆಗಳು ಸೌಲಭ್ಯಗಳು ಇಲ್ಲಿ ಕಡಿಮೆ. ನಮ್ಮ ಜನ ಸಹ ಭಾವುಕರು. ನಾಳೆ ನಮ್ಮ ಮಗ ಸಲಹುತ್ತಾನೆ ಎಂದು ಹಗಲುಗನಸು ಕಾಣುತ್ತಲೇ ಮಕ್ಕಳ ಬಗ್ಗೆ ಭಾರೀ ಹೆಮ್ಮೆಪಟ್ಟುಕೊಳ್ಳುತ್ತಾರೆ. ಅದಕ್ಕೇ ನಮ್ಮಲ್ಲಿ ಗಂಡುಮಗು ಹುಟ್ಟಿತೆಂದರೆ ಹೇಳತೀರದ ಸಂಭ್ರಮ. ಗಂಡುಮಗು ಪಡೆಯಲು ಇನ್ನಿಲ್ಲದ ಹಪಹಪಿ.

ಈಗಿನ ಹುಡುಗರು ವ್ಯಾವಹಾರಿಕವಾಗಿ ತುಂಬ ಬದಲಾಗಿದ್ದಾರೆ. ಹೈಸ್ಕೂಲು-ಕಾಲೇಜುಗಳಲ್ಲಿ ವ್ಯಾಸಂಗ ಮಾಡುವ ಹುಡುಗರ ತಂಡಗಳನ್ನು ಗಮನಿಸಿ, ಸಿಟಿಬಸ್ ಬರೋದೇ ತಡ, ಕಿಟಕಿ ಮೂಲಕ ಸೀಟ್ ಬುಕ್‌ಮಾಡಿ ಬಾಗಿಲಲ್ಲಿ ನುಗ್ಗಿ ಒಳಗೆ ಬಂದು ಹಾಯಾಗಿ ಪವಡಿಸಿಬಿಡುತ್ತಾರೆ. ಕೊನೆಯಲ್ಲಿ ಬರುವ ಮುದುಕರು ಮಧ್ಯೆ ಜೋತಾಡದೆ ವಿಧಿ ಇಲ್ಲ. ತಮ್ಮ ಬಳಿ ನಿಂತ ಇವರನ್ನು ನೋಡಿಯೂ ಯುವಕರಲ್ಲಿ ಸಂವೇದನೆ ಪುಟಿಯುವುದಿಲ್ಲ. ಮುದುಕರತ್ತ ಗಮನವೇ ಇಲ್ಲದವರಂತೆ ತಮ್ಮ ನಗು-ಹರಟೆಗಳಲ್ಲಿ ಮಗ್ನರಾಗಿಬಿಡುತ್ತಾರೆ. 'ಇದು ವೃದ್ಧರಿಗೆ ಕಾದಿರಿಸಿದ ಸ್ಥಳ' ಎಂದು ವಿನಂತಿಸಿಕೊಂಡರೂ ಎದ್ದೇಳದಷ್ಟು, ಉಪೇಕ್ಷೆಯಿಂದ ನೋಡಿ ನಗುವಷ್ಟು ಅವಿಧೇಯತೆ ಅವರಲ್ಲಿ ಬೆಳೆದುಬಿಟ್ಟಿದೆ.

ಜೀವನದಲ್ಲಿ ಗಣ್ಯಸ್ಥಾನ ಗಳಿಸಿಕೊಂಡ ಅನೇಕರು ಎಷ್ಟು ಸ್ವಾರ್ಥಿಗಳಾಗಿದ್ದಾರೆ ಅಂದ್ರೆ, ಈ ಜಗತ್ತಿನಲ್ಲಿ ಬದುಕಲು ವೃದ್ಧರಿಗೂ ಹಕ್ಕಿದೆ, ಈ ಸಮಾಜದ ಏಳಿಗೆಗೆ ಅನೇಕ ಬಗೆಯಲ್ಲಿ ಸೇವೆ ಸಲ್ಲಿಸಿದ ಋಣವಿದೆ ಎಂದು ಯಾರಿಗೂ ಅನಿಸದೆ ಇರುವುದು ತೀರ ಶೋಚನೀಯ. ಮನೆಯಲ್ಲಿ ನಾಯಿ ಬೆಕ್ಕುಗಳನ್ನು ಮುದ್ದಿಸುತ್ತ ಅವುಗಳಿಗೆ ರಾಜೋಪಚಾರ ಮಾಡುವವರಿಗೂ ಮನೆಯಲ್ಲಿರುವ ಹಿರಿಯರ ಬಗ್ಗೆ ಅಸಹನೆ.

ಹೌದು, ನಿಜವಾಗಿ ನಮಗೆ ಸೌಜನ್ಯದ ಪಾಠವನ್ನು ಅತ್ಯಗತ್ಯವಾಗಿ ಯಾರಾದರೂ ಛಡಿ ಝಳಪಿಸುತ್ತ ಹೇಳಿಕೊಡದ ಹೊರತು ನಾವು ಹೀಗೇ...

ರಾಮಚಂದ್ರ ಭಾವೆ
''ಆಶೀರ್ವಾದ'' ವಿವೇಕಾನಂದ ರಸ್ತೆ, ೩ನೇ ಕ್ರಾಸ್, ೨ನೇ ಸ್ಟೇಜ್, ಗದಗ - ೫೮೨ ೧೦೧

# ಪಠಾನಿ ಸಾಮಂತ



ಖಗೋಳ ವಿಜ್ಞಾನಕ್ಕೆ ಸಂಬಂಧಿಸಿದಂತೆ ತಾವು ಮಾಡಿದ ಪ್ರಯತ್ನಗಳೆಲ್ಲವನ್ನೂ (೧೮೭೪ರಲ್ಲಿ ಶುಕ್ರಸಂಕ್ರಮಣವನ್ನು ವೀಕ್ಷಿಸಿದುದನ್ನೂ) ಒಳಗೊಂಡ ೨,೫೦೦ ಸಂಸ್ಕೃತ ಶ್ಲೋಕಗಳ ಗ್ರಂಥವನ್ನು ಸಾಮಂತರು ಓಲೆಗರಿಯ ಮೇಲೆ ಒರಿಯಾ ಲಿಪಿಯಲ್ಲಿ ಬರೆದಿದ್ದಾರೆ. ಅದನ್ನು ಕೊಲ್ಕೊತ್ತಾ ವಿಶ್ವವಿದ್ಯಾನಿಲಯದವರು ೧೮೯೯ರಲ್ಲಿ ಪ್ರಕಟಿಸಿದ್ದಾರೆ.

ಪ್ರಪಂಚದಾದ್ಯಂತ ಖಗೋಳ ವಿಜ್ಞಾನಿಗಳ ಮತ್ತು ಖಗೋಳ ವೀಕ್ಷಕರ ಆಸಕ್ತಿಯನ್ನು ಕೆರಳಿಸಿದ ಒಂದು ಅವಿಸ್ಮರಣೀಯ ಘಟನೆ ಜೂನ್ ೮, ೨೦೦೪ರಂದು ಆಕಾಶದಲ್ಲಿ ಸಂಭವಿಸಿದುದು ಈಗಾಗಲೇ ಪತ್ರಿಕೆಗಳಲ್ಲಿ ವರದಿಯಾಗಿತ್ತು : ಸೂರ್ಯಬಿಂಬದ ಮೇಲೆ ಶುಕ್ರಗ್ರಹ ಹಾದುಹೋದದ್ದು. ಸೂರ್ಯನಿಗೆ ಚಂದ್ರ ಅಡ್ಡಬಂದಾಗ ಸೂರ್ಯಬಿಂಬದ ಬಹುಭಾಗ ಮರೆಯಾಗಿ ಸೂರ್ಯಗ್ರಹಣ ಉಂಟಾಗುತ್ತದೆಯಷ್ಟೆ. ಆದರೆ ಶುಕ್ರ ಭೂಮಿಗಿಂತ ಸ್ವಲ್ಪ ಚಿಕ್ಕದಾಗಿರುವುದಲ್ಲದೆ ಭೂಮಿಯಿಂದ ಬಹಳ ದೂರವಿರುವುದರಿಂದ ನಮಗೆ ಬಹು ಚಿಕ್ಕದಾಗಿ ಕಾಣಿಸುತ್ತದೆ. ಆದುದರಿಂದ ಅದು ಸೂರ್ಯನಿಗೆ ಅಡ್ಡ ಬಂದಾಗ ಸೂರ್ಯನ ಮೇಲೆ ಒಂದು ಕಪ್ಪು ಚುಕ್ಕೆಯಂತೆ ಮಾತ್ರ ಕಾಣುತ್ತದೆ. ಸೂರ್ಯಬಿಂಬದ ಮೇಲೆ ಚುಕ್ಕೆ ಹಾಗೆ ಹಾದುಹೋಗುವುದನ್ನು ಶುಕ್ರ ಸಂಕ್ರಮಣ ಎನ್ನುತ್ತಾರೆ. ಈ ವಿದ್ಯಮಾನ ೧೩೦ ವರ್ಷಗಳ ಹಿಂದೆ ಸಂಭವಿಸಿತ್ತು. ಅದಾದ ಎಂಟೇ ವರ್ಷಗಳಲ್ಲಿ ಪುನಃ ಸಂಭವಿಸಿತು. ಈ ಬಾರಿಯೂ ಇನ್ನು ೮ ವರ್ಷಗಳ ತರುವಾಯ ೨೦೧೨ರಲ್ಲಿ ಅದು ಪುನಃ ಸಂಭವಿಸುತ್ತದೆ. ೧೩೦ ವರ್ಷಗಳಿಗೊಮ್ಮೆ ಎಂಟು ವರ್ಷಗಳ ಅಂತರದಲ್ಲಿ ಅದು ಎರಡುಬಾರಿ ಸಂಭವಿಸುತ್ತದೆ ಎಂದು ಲೆಕ್ಕ ಹಾಕಿದ್ದಾರೆ.

೧೩೦ ವರ್ಷಗಳ ಹಿಂದೆ ೧೮೭೪ರ ಡಿಸೆಂಬರ್ ೯ರಂದು ಇದೇ ರೀತಿ ಸೂರ್ಯಬಿಂಬದ ಮೇಲೆ ಶುಕ್ರ ಹಾದುಹೋದಾಗ ಈಗಿನಂತೆಯೇ ಸಾಮಾನ್ಯ ಜನರೂ ಖಗೋಳ ವಿಜ್ಞಾನಿಗಳೂ ಕುತೂಹಲದಿಂದ ಅನೇಕ ದಿನಗಳ ಕಾಲ ಕಾದಿದ್ದರು. ಭಾರತದಲ್ಲಿ ಅದು ಚೆನ್ನಾಗಿ ಗೋಚರಿಸಿದುದರಿಂದ ಅದನ್ನು ವೀಕ್ಷಿಸಲು ದೇಶವಿದೇಶಗಳಿಂದ ಅನೇಕರು ಇಲ್ಲಿಗೆ ಬಂದಿದ್ದರು. ಆಗಿನ ಬ್ರಿಟಿಷ್ ಸರ್ಕಾರದವರು ವೀಕ್ಷಣಾಲಯಗಳಲ್ಲಿ ಆ ಸಂಕ್ರಮಣದ ಬಗ್ಗೆ ಅಭ್ಯಸಿಸಲು ಏರ್ಪಾಟುಮಾಡಿದ್ದರು. ಇದರ ಬಗ್ಗೆ ಜನಸಾಮಾನ್ಯರಿಗೆ ತಿಳುವಳಿಕೆ ನೀಡಲು ಪುಸ್ತಿಕೆಗಳನ್ನು ತಯಾರಿಸಿ, ಅದನ್ನು ಅನೇಕ ಭಾಷೆಗಳಿಗೆ ತರ್ಜುಮೆ ಮಾಡಿದ್ದರು. ಆದರೆ ಅದಾವುದನ್ನೂ ಅರಿಯದೆ, ಆ ವಿದ್ಯಮಾನದ ಬಗ್ಗೆ ಬಹುಕಾಲ ಸ್ವತಂತ್ರವಾಗಿ ಅಭ್ಯಸಿಸಿ, ಅದು ಸಂಭವಿಸುವುದರ ಬಗ್ಗೆ ಭವಿಷ್ಯವನ್ನೂ ನುಡಿದಿದ್ದ, ಒರಿಸ್ಸಾ ರಾಜ್ಯದ ಪಠಾನಿ ಸಾಮಂತ ಎಂಬ ವ್ಯಕ್ತಿಗೆ ಹೊರಪ್ರಪಂಚದಲ್ಲಿ ನಡೆಯುತ್ತಿದ್ದ ಸಂಭ್ರಮ ಸಡಗರಗಳ ಬಗ್ಗೆ ಏನೇನೂ ಗೊತ್ತಿರಲಿಲ್ಲ.

ಎಲೆಮರೆಯ ಕಾಯಿಯಂತೆ ಇದ್ದು ತನ್ನ ಸಾಧನೆಯ ಮಹತ್ವವನ್ನೇ ಅರಿಯದಿದ್ದ ಅಂಥ ಭಾರತೀಯ ಖಗೋಳ ವಿಜ್ಞಾನಿಯನ್ನು ಸ್ಮರಿಸಲು ಇದು ಸೂಕ್ತ ಸಂದರ್ಭ.

ಪಠಾನಿ ಸಾಮಂತ ಚಂದ್ರಶೇಖರ ಒರಿಸ್ಸಾದ ಖಾಂಡಪಾರಾ ಎಂಬಲ್ಲಿ ಡಿಸೆಂಬರ್ ೩ ೧೮೩೫ ರಂದು ಜನಿಸಿದರು. ಅವರ ಪೂರ್ತಿ ಹೆಸರು ಮಹಾಮಹೋಪಾಧ್ಯಾಯ ಚಂದ್ರಶೇಖರ ಸಿಂಗ್ ಹರಿಚಂದನ್ ಮೋಹಪಾತ್ರ ಸಾಮಂತ. ಆದರೆ ಪಠಾನಿ ಸಾಮಂತ ಎಂಬ ಹೆಸರಿನಿಂದಲೇ ಅವರು ಅನೇಕರಿಗೆ ಪರಿಚಿತರು.

ಪಠಾನಿಯವರು ಯಾವ ವಿಶ್ವವಿದ್ಯಾಲಯದಲ್ಲಿಯೂ ವಿದ್ಯಾಭ್ಯಾಸ ಮಾಡಿರಲಿಲ್ಲ. ಅವರಿಗೆ ಸುಲಭವಾಗಿ ಲಭ್ಯವಿದ್ದ ಸೈದ್ಧಾಂತಿಕ ಖಗೋಳ ವಿಜ್ಞಾನದ ಹಸ್ತಪ್ರತಿಗಳನ್ನು ಓದಿದುದರಿಂದ, ಖಗೋಳ ವಿಜ್ಞಾನದಲ್ಲಿ ಅವರಿಗೆ ಆಸಕ್ತಿಯುಂಟಾಯಿತು. ಅವರು ಎಲ್ಲವನ್ನೂ ಸ್ವತಂತ್ರವಾಗಿ ಕಲಿತರು. ೧೭-೧೯ನೆಯ ಶತಮಾನಗಳಲ್ಲಿ ಪಾಶ್ಚಾತ್ಯ ಖಗೋಳ ವಿಜ್ಞಾನದಲ್ಲಿ ಉಂಟಾದ ಕ್ರಾಂತಿಯಾಗಲೀ ಆಧುನಿಕ ಖಗೋಳಶಾಸ್ತ್ರದ (ಕೋಪರ್ನಿಕಸ್ ಸಿದ್ಧಾಂತ) ಬಗ್ಗೆಯಾಗಲೀ ಅವರಿಗೆ ತಿಳಿದೇ ಇರಲಿಲ್ಲ. ಅವರು ತಮ್ಮ ಜೀವನದ ಬಹುಕಾಲವನ್ನು ಸೈದ್ಧಾಂತಿಕ ಖಗೋಳ ವಿಜ್ಞಾನಿಯಾಗಿಯೇ ಕಳೆದರು. ಆಕಾಶ ಕಾಯಗಳನ್ನು ವೀಕ್ಷಿಸುವುದರಲ್ಲಿಯೂ ಅವುಗಳ ಚಲನವಲನಗಳಲ್ಲಿಯೂ ತೀವ್ರವಾದ ಆಸಕ್ತಿಯುಂಟಾದುದರಿಂದ ಅದಕ್ಕಾಗಿ ಬೇಕಾದ ಉಪಕರಣಗಳನ್ನು ತಯಾರಿಸಿಕೊಳ್ಳುತ್ತಿದ್ದರು. ಕೇವಲ ಸಾಂಪ್ರದಾಯಿಕ ಜ್ಯೋತಿಷ್ಯಶಾಸ್ತ್ರವನ್ನು ಮಾತ್ರ ಅಭ್ಯಾಸ ಮಾಡಿದ್ದರು.

ಸಾಂಪ್ರದಾಯಿಕ ಜ್ಯೋತಿಷ್ಯಶಾಸ್ತ್ರದಲ್ಲಿ ಎರಡು ಭಾಗಗಳಿವೆ ಎಂಬುದನ್ನು ಇಲ್ಲಿ ಹೇಳುವುದು ಉಚಿತ. ಒಂದು ಗಣಿತ ವಿಭಾಗ (ಗ್ರಹಗಳ ಚಲನವಲನಗಳನ್ನು ಕುರಿತ ಲೆಕ್ಕಾಚಾರ), ಎರಡನೆಯದು ಫಲಜ್ಯೋತಿಷ್ಯ (ಗ್ರಹಗಳ ಸ್ಥಾನದ ಆಧಾರದ ಮೇಲೆ ಭವಿಷ್ಯ ನುಡಿಯುವುದು). ಫಲಜ್ಯೋತಿಷ್ಯಕ್ಕೆ ವೈಜ್ಞಾನಿಕ ಆಧಾರವೇನೂ ಇಲ್ಲ. ಗಣಿತ ಜ್ಯೋತಿಷ್ಯವಾದರೋ, ಅದು ಭೂಕೇಂದ್ರ ಸಿದ್ಧಾಂತದ ಆಧಾರದ್ದಾದರೂ ಗ್ರಹಗಳ ಚಲನವಲನಗಳ ಲೆಕ್ಕಾಚಾರದಲ್ಲಿ ಸೂರ್ಯಕೇಂದ್ರ ಸಿದ್ಧಾಂತಕ್ಕೂ ಭೂಕೇಂದ್ರ ಸಿದ್ಧಾಂತಕ್ಕೂ ವ್ಯತ್ಯಾಸವೇನೂ ಬರುವುದಿಲ್ಲವಾದುದರಿಂದ ಪಠಾನಿ ಸಾಮಂತರು ಅದರ ಆಧಾರದ ಮೇಲೆ ಶುಕ್ರ ಸಂಕ್ರಮಣದ ಲೆಕ್ಕಹಾಕಿದ್ದರು; ಅದರ ಬಗ್ಗೆ ಭವಿಷ್ಯ ನುಡಿದಿದ್ದರು. ಅಲ್ಲದೆ, ತಮ್ಮ ಜೀವಿತದಲ್ಲಿ ಅದನ್ನು ವೀಕ್ಷಿಸಿಯೂ ಇದ್ದರು.

ಖಗೋಳ ವಿಜ್ಞಾನಕ್ಕೆ ಸಂಬಂಧಿಸಿದಂತೆ ತಾವು ಮಾಡಿದ ಪ್ರಯತ್ನಗಳೆಲ್ಲವನ್ನೂ (೧೮೭೪ರಲ್ಲಿ ಶುಕ್ರ ಸಂಕ್ರಮಣವನ್ನು ವೀಕ್ಷಿಸಿದುದನ್ನೂ) ಒಳಗೊಂಡ ೨,೫೦೦ ಸಂಸ್ಕೃತ ಶ್ಲೋಕಗಳ ಗ್ರಂಥವನ್ನು ಸಾಮಂತರು ಓಲೆಗರಿಯ ಮೇಲೆ ಒರಿಯಾ ಲಿಪಿಯಲ್ಲಿ ಬರೆದಿದ್ದಾರೆ. ಅದನ್ನು ಕೊಲ್ಕೊತ್ತಾ ವಿಶ್ವವಿದ್ಯಾನಿಲಯದವರು ೧೮೯೯ರಲ್ಲಿ ಪ್ರಕಟಿಸಿದ್ದಾರೆ.

ಪಠಾನಿ ಸಾಮಂತರು ಶುಕ್ರ ಸಂಕ್ರಮಣದ ಬಗ್ಗೆ ಕೇಳಿ ಅದನ್ನು ವೀಕ್ಷಿಸುವ ಪ್ರಯತ್ನ ಮಾಡಿದರೆ ? ಅಥವಾ ತಾವೇ ಲೆಕ್ಕಾಚಾರ ಹಾಕಿ ಕೂಲಂಕಷವಾಗಿ ಪರಿಶೀಲಿಸಿ ಆ ಫಲಿತಾಂಶವನ್ನು ಪಡೆದರೆ ? ಬಹುಶಃ ಎರಡನೆಯದೇ ಸರಿ ಎನ್ನಬಹುದು. ಏಕೆಂದರೆ, ಯೂರೋಪಿಯನ್ ಖಗೋಳ ವಿಜ್ಞಾನದ ಚಟುವಟಿಕೆಗಳು ಆ ಕಾಲದಲ್ಲಿ ಒರಿಸ್ಸಾ ಪ್ರದೇಶವನ್ನು ತಲುಪಿದ್ದಕ್ಕೆ ಯಾವ ಆಧಾರವೂ ಇಲ್ಲ. ಪ್ಯಾಲೆರ್ಮೋ ವೀಕ್ಷಣಾಲಯದ ಇಟಾಲಿಯನ್ ಯಾತ್ರೆಯು ಒರಿಸ್ಸಾದ ನೆರೆ ರಾಜ್ಯ ಬಂಗಾಲದ ಮಧುಪುರವನ್ನು ತಲುಪಿದ್ದರೂ ಖಾಂಡ್‌ಪಾರಾವನ್ನು ತಲುಪಿರುವುದಕ್ಕೆ ಸಾಕ್ಷ್ಯಾಧಾರಗಳೇನೂ ಇಲ್ಲ. ಒಂದು ವೇಳೆ ತಲುಪಿತ್ತು ಎಂದರೂ ತಾವೇ ವೀಕ್ಷಿಸಿ ಪರೀಕ್ಷಿಸದ ಹೊರತು ಸಾಮಂತರು ಅದನ್ನು ಒಪ್ಪಿಕೊಳ್ಳುವವರಾಗಿರಲಿಲ್ಲ.

ಭಾರತೀಯರಾದ ಈ ಸಾಂಪ್ರದಾಯಿಕ ಸೈದ್ಧಾಂತಿಕ ಖಗೋಳ ವಿಜ್ಞಾನಿ ಪಠಾನಿ ಸಾಮಂತ ಚಂದ್ರಶೇಖರ ಅವರು ೨೦ನೆಯ ಶತಮಾನದವರೆಗೂ ಬದುಕಿದ್ದು ೧೯೦೪ರಲ್ಲಿ ಮರಣಹೊಂದಿದರು. *(ಆಧಾರ : ಡ್ರೀಮ್ ೨೦೪೭ ಮಾಸಿಕ)*

ಜೀವೂಬಾಯಿ ಲಕ್ಷ್ಮಣರಾವ್
ಮೈತ್ರಿ, ೧೨ನೇ ಮೇನ್, ಸರಸ್ವತೀಪುರ, ಮೈಸೂರು - ೯

ಡಿಸೆಂಬರ್ ೨೬ರಂದು ಮಹತ್ವದ ಸಭೆಯೊಂದು ಬೆಂಗಳೂರಿನಲ್ಲಿ ಜರುಗಿತು. ಬಂಡಾಯ ಸಾಹಿತ್ಯ ಸಂಘಟನೆಯು ಕಾಲು ಶತಮಾನವನ್ನು ಪೂರೈಸಿರುವ ಚಾರಿತ್ರಿಕ ಘಟ್ಟದಲ್ಲಿ 'ಬಂಡಾಯ-೨೫' ಎಂಬ ರಾಜ್ಯ ಸಮಾವೇಶವು ಪ್ರಸ್ತುತವೂ ಔಚಿತ್ಯಪೂರ್ಣವೂ ಆಗಿದ್ದಿತು. ೧೯೭೯ರಲ್ಲಿ ಹುಟ್ಟಿ, ರಾಜ್ಯವ್ಯಾಪಿಯಾಗಿ ನೂರಾರು ಕಾರ್ಯಕ್ರಮಗಳನ್ನು ನಡೆಸಿ, ಹದಿಮೂರು ರಾಜ್ಯ ಸಮ್ಮೇಳನಗಳನ್ನು ನಡೆಸುತ್ತ ಬಂದ ಸಂಘಟನೆಯು ಸಾವಿರಾರು ವರ್ಷಗಳಿಂದ ಅಕ್ಷರಕ್ಕೆ ಅಸ್ಪೃಶ್ಯವಾಗಿ ಸಮಾಜದ ಅಂಚಿಗೆ ತಳ್ಳಲ್ಪಟ್ಟ ಶೋಷಿತರ ಶ್ರಮ ಮೂಲದ ಸಂವೇದನೆಗಳಿಗೆ ಸಾಮಾಜಿಕ ಘನತೆಯನ್ನು ತಂದುಕೊಟ್ಟು, ಅವುಗಳ ಅಕ್ಷರಾಭಿವ್ಯಕ್ತಿಗಾಗಿ ಆತ್ಮವಿಶ್ವಾಸವನ್ನು ತುಂಬುತ್ತಾ ಬಂದ ಸಂಘಟನಾತ್ಮಕ ಚಟುವಟಿಕೆಗಳಿಗೆ ಸಾಂಸ್ಕೃತಿಕ ಮಹತ್ವವಿದೆ. ಇದರ ನಿರಂತರ ಕ್ರಿಯಾಶೀಲತೆಯಲ್ಲಿ ಶ್ರಮಿಸಿದ ಹಲವು ಜೀವಗಳನ್ನು ಇಂದು ನಾವು ಸಾಮಾಜಿಕ ಗೌರವದಿಂದ ಸ್ಮರಿಸಬೇಕಿದೆ. ಆದರೂ ಬಂಡಾಯದ ಹಲವು ಮಿತಿಗಳನ್ನು ಒಪ್ಪಬೇಕು. ಈ ಮಿತಿಗಳ ನಡುವೆಯೇ ಇದುವರೆಗಿನ ಇತ್ಯಾತ್ಮಕ ಸತ್ಯಗಳನ್ನು ಮಿಥ್ಯಗೊಳಿಸಬಾರದು. ಹೀಗಿರುವಾಗ ಬಂಡಾಯವು ಬದುಕಿಲ್ಲ; ಚಳುವಳಿಗಳು ಜೀವಂತವಾಗಿಲ್ಲ; ಇಸಂಗಳು ಸತ್ತು ಹೋಗಿವೆ ಎಂಬಂತಹ ಮಾತುಗಳನ್ನು ಇತ್ತೀಚಿನ ವರ್ಷಗಳಲ್ಲಿ ಹೆಚ್ಚು ಕೇಳುತ್ತಾ ಬಂದಿರುವುದು ಬಂಡಾಯದ ಸಮಕಾಲೀನ ಅಸ್ತಿತ್ವವನ್ನು ಪರೋಕ್ಷವಾಗಿ ಸಮರ್ಥಿಸುತ್ತದೆ.

# ಬಂಡಾಯ

# ಇಪ್ಪತ್ತೈದರ ಆಶಯ

ಆದರೂ ಇಂತಹ ಅಭಿಪ್ರಾಯಗಳಿಗೆ ಹೆಚ್ಚು ಕ್ರಿಯಾಶೀಲವಾಗಿಲ್ಲದ ಸಂಘಟನಾತ್ಮಕ ಚಟುವಟಿಕೆಗಳಿಗೆ ಕಾರಣವೋ ಅಥವಾ ವರ್ತಮಾನಕ್ಕೆ ಕುರುಡಾದ ಕಣ್ಣುಗಳು ಕಾರಣವೋ ಎಂಬುದನ್ನು ವಿವೇಕಿಸಿಕೊಳ್ಳಬೇಕು. ಇಲ್ಲವಾದಲ್ಲಿ ಯಾವುದೋ ಒಂದು ಅತಿರೇಕದ ತೀರ್ಮಾನವು ಬಂದೆರಗಿ ಸಮಚಿತ್ತತೆಯನ್ನು ಅವಾಸ್ತವತೆಯತ್ತ ಹೊರಳಿಸಿಬಿಡುತ್ತದೆ.

**ಸಂಘಟನೆ ಮತ್ತು ಚಳುವಳಿ : ಎಷ್ಟು ಜೀವಂತ ?**

ಬಂಡಾಯ ಸಾಹಿತ್ಯ ಸಂಘಟನೆಯು ಕಳೆದ ನಾಲ್ಕು ವರ್ಷಗಳಲ್ಲಿ (ಈಗಿನ ರಾಜ್ಯ ಸಂಚಾಲಕರ ಅವಧಿಯನ್ನು ಅನುಲಕ್ಷಿಸಿ) ಒಂದು ರಾಜ್ಯ ಸಮ್ಮೇಳನ, ಪ್ರಸಕ್ತ ರಾಜ್ಯ ಸಮಾವೇಶಗಳೊಂದಿಗೆ ಹತ್ತಾರು ವೈವಿಧ್ಯಮಯ ಕಾರ್ಯಕ್ರಮಗಳನ್ನು ರಾಜ್ಯದ ವಿವಿಧ ಭಾಗಗಳಲ್ಲಿ ನಡೆಸುತ್ತಾ ಬಂದಿದೆ. ಇಂತಹ ಚಟುವಟಿಕೆಗಳು ಮೈಸೂರು, ಧಾರವಾಡ, ಬೆಳಗಾವಿಯಂತಹ ಮುಂದುವರೆದ ಜಿಲ್ಲೆಗಳಿಗಿಂತಲೂ ಬಳ್ಳಾರಿ, ಉತ್ತರ ಕನ್ನಡ, ಕೋಲಾರ ದಂತಹ ಹಿಂದುಳಿದ ಜಿಲ್ಲೆಗಳಲ್ಲಿ ಅಧಿಕ ಎಂಬುದು ಮಾರ್ಮಿಕವಾಗಿದೆ. ಇದಕ್ಕೆ ಹೊರತಾಗಿ ಬೆಂಗಳೂರು, ಬಾಗಲಕೋಟೆ, ಶಿವಮೊಗ್ಗ ಮುಂತಾದ ಕೆಲವು ಜಿಲ್ಲೆಗಳಿವೆ. ಈ ಸಂಘಟನಾತ್ಮಕ ಚಟುವಟಿಕೆಗಳ ಜಿಲ್ಲಾ ಅಸಮತೋಲನವು ನಿವಾರಣೆಯಾಗಬೇಕೆಂಬ ಹಂಬಲವಿದೆ.

ಏನೇ ಆದರೂ ಬಂಡಾಯದ ಚಟುವಟಿಕೆಗಳು ನಿರೀಕ್ಷಿತ ಮಟ್ಟದಲ್ಲಿಲ್ಲ. ಇದೇ ಥರದ ತಕರಾರುಗಳೊಂದಿಗೆ ದಲಿತ ಚಳುವಳಿಯು ಅನೇಕ ಬಣಗಳ ಮೂಲಕವಾಗಿಯಾದರೂ ಜೀವಂತವಾಗಿರುವ ವಸ್ತುಸತ್ಯವನ್ನು ನಿರಾಕರಿಸುವಂತಿಲ್ಲ. ಇದೇ ನಿಟ್ಟಿನಲ್ಲಿ ರೈತ, ಕಮ್ಯೂನಿಸ್ಟ್ (ವರ್ಗ), ಮಹಿಳಾ ಚಳುವಳಿಗಳು ಸಹ ಸಂಪೂರ್ಣವಾಗಿ ನಿಂತಿಲ್ಲ; ಜೀವವನ್ನು ಹಿಡಿದುಕೊಂಡೇ ಸಾಗಿವೆ. ಇದರ ಪರಿಣಾಮವಾಗಿ ಜಾಗತೀಕರಣವು ಪ್ರವೇಶಿಸಿ ದೇಶದ ಸಾರ್ವಭೌಮತ್ವವನ್ನು ಪ್ರಶ್ನಿಸುತ್ತಿದೆ. ಇಲ್ಲಿಯ ನೈಸರ್ಗಿಕ ಮತ್ತು ಮಾನವ ಸಂಪನ್ಮೂಲವನ್ನು ಉದಾರೀಕರಣವು ಹಗಲು ದರೋಡೆಗೊಳಪಡಿಸುತ್ತಿದೆ. ಸಲುವತ್ತೇಳರ ಸ್ವಾತಂತ್ರ್ಯ ಪ್ರಣೀತವಾದ ಸಂವಿಧಾನಾತ್ಮಕ ಸಾಮಾಜಿಕ ನ್ಯಾಯವನ್ನು ಖಾಸಗೀಕರಣವು ಮೂಲೋತ್ಪಾಟನೆ ಮಾಡುತ್ತಿದೆ. ಜಾತ್ಯತೀತತೆಯನ್ನು ವಿಷದ ಕೋಮುದಳ್ಳುರಿಯು ಬೂದಿಯನ್ನಾಗಿಸುತ್ತಿದೆ. ಇಂತಹ ಅನೇಕ ವಿಸಂಗತಿಗಳು ಪೆಡಂಭೂತಗಳಾಗಿ ಕಣ್ಣೆದುರು ನರ್ತಿಸುತ್ತಿವೆಯೆಂಬುದರ ಅರ್ಥ ನಮ್ಮ ಬೌದ್ಧಿಕತೆ ಮತ್ತು ಚಳುವಳಿಗಳೊಂದಾದ ಸಂಘಟನಾತ್ಮಕ ಚಟುವಟಿಕೆಗಳು ನಿರೀಕ್ಷಿತ ಮಟ್ಟದಲ್ಲಿ ಉಳಿದಿಲ್ಲವೆಂಬುದೇ ಆಗಿದೆ.

ಆದ್ದರಿಂದ ಬಂಡಾಯ ಸಾಹಿತ್ಯ ಸಂಘಟನೆಯು ವಿವಿಧ ಜನಪರ ಚಳುವಳಿಗಳ ಸಖ್ಯದ ನೆಲೆಯಲ್ಲಿ ಚಿಂತನಾ ಭೂಮಿಕೆಯಾಗಿ ಹೆಚ್ಚು ಕ್ರಿಯಾಶೀಲವಾಗಬೇಕಿರುವುದು ಇವತ್ತಿನ ಸಾಮಾಜಿಕ ಜರೂರಾಗಿದೆ.

**ಬಂಡಾಯ ಸಾಹಿತ್ಯ : ಇವತ್ತಿನ ಸ್ವರೂಪ**

ಇವತ್ತಿನ ಬಂಡಾಯ ಸಾಹಿತ್ಯವು ಎಪ್ಪತ್ತರ ದಶಕದ ಸಾಹಿತ್ಯದಷ್ಟು ತೀವ್ರ ಸ್ವರೂಪವನ್ನು ಪಡೆದಿಲ್ಲವೆಂಬ ಒಂದು ಅಭಿಪ್ರಾಯವಿದೆ. ಇದು ಇವತ್ತಿನ ಸಾಹಿತ್ಯದ ನೇತ್ಯಾತ್ಮಕ ಅಂಶವೆಂದೇನೂ ಭಾವಿಸಬೇಕಾಗಿಲ್ಲ. ಕಾರಣ, ಅಂದಿನ ಅನೇಕ ಸವಾಲುಗಳು ಇಂದಿಗೂ ಜೀವಂತವಿದ್ದಾಗಲೂ ಶೋಷಿತ ಮೂಲದ ಸಮುದಾಯಗಳಲ್ಲಿ ಅಂದಿಗಿಂತ ಇಂದು ಹೆಚ್ಚು ಮಂದಿ ಮೇಲ್ವರ್ಗಕ್ಕೆ ಏರಿದವರಿದ್ದಾರೆ. ಇದಕ್ಕೆ ಸಾರ್ವಜನಿಕ ವಲಯದಲ್ಲಿ ಎಲ್ಲಾ ಸಮುದಾಯಗಳಿಗೂ ಪ್ರಾತಿನಿಧ್ಯವನ್ನು ಕಲ್ಪಿಸಿದ ಸಾಮಾಜಿಕ ನ್ಯಾಯ ಅಥವಾ ಮೀಸಲಾತಿಯೇ ಕಾರಣವಾಗಿದೆ. ಆದ್ದರಿಂದ ಸ್ವಾತಂತ್ರ್ಯೋತ್ತರ ಭಾರತದಲ್ಲಿ ಶೋಷಿತರ ಪ್ರಶ್ನೆಗಳಲ್ಲಿ ಏನೂ ಪ್ರಗತಿಯಾಗಿಲ್ಲ ಎಂಬ ಅರ್ಧಸತ್ಯವನ್ನು ಒಪ್ಪಿಸಬಾರದು. ಅದರ ಬದಲು ರಾಜಕೀಯವಾಗಿ ಸ್ವತಂತ್ರರೂ ಸಮಾನರೂ ಆದ ನಾವು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಪೂರ್ಣ ಸ್ವಾತಂತ್ರ್ಯವನ್ನು ಪಡೆದುಕೊಳ್ಳಲು ವಿಫಲವಾಗಿದ್ದೇವೆ ಎಂಬುದನ್ನು ಎಚ್ಚರವಾಗಿಸಿಕೊಳ್ಳಬೇಕು. ಈ ನೆಲೆಯಲ್ಲಿ ಹೆಚ್ಚು ಬದಲಾಗದ ಗ್ರಾಮೀಣ ಬದುಕು ಮತ್ತು ಜಾಗತೀಕರಣದಂತಹ ಹೊಸ ತ್ರಿಕರಣಗಳು ಒಡ್ಡಿರುವ ಸವಾಲುಗಳು ಇವತ್ತಿನ ಸಾಹಿತ್ಯದ ಅಂತಃಸತ್ವವಾಗಿದೆ. ಇದು ಸಹಜವಾಗಿಯೇ ಇಂದಿನ ಬಂಡಾಯ ಸಾಹಿತ್ಯವನ್ನು ಅಂದಿನ ಸಾಹಿತ್ಯಕ್ಕಿಂತ ವಿಭಿನ್ನವಾಗಿ ವಿನ್ಯಾಸಗೊಳಿಸುತ್ತದೆ. ಈ ನೆಲೆಯಲ್ಲಿ ಕ್ರಿಯೆಯ ಮಟ್ಟದಲ್ಲಿ ಅಲ್ಲವಾದರೂ ಪ್ರತಿಕ್ರಿಯೆಯ ಮಟ್ಟದಲ್ಲಿಯಾದರೂ ಜೀವಂತವಾಗಿರುವುದು ಇವತ್ತಿನ ಬಂಡಾಯ ಸಾಹಿತ್ಯದ ಸ್ವರೂಪವಾಗಿದೆ. ಈ ನೆಲೆಯಲ್ಲಿ ಕತೆ, ಕವಿತೆ, ನಾಟಕ, ವೈಚಾರಿಕ ಮುಂತಾದ ಎಲ್ಲ ಪ್ರಕಾರಗಳಲ್ಲಿ ಹಿರಿಯ ಮತ್ತು ಹೊಸ ತಲೆಮಾರಿನ ಬರಹಗಾರರು ಕಾಣಿಸುತ್ತಿದ್ದಾರೆ. ಇಂತಹ ಸಾಮಾಜಿಕ ಸ್ಪಂದನವು ಬರಿದಾಗದ ಬಂಡಾಯಕ್ಕೆ ನಿದರ್ಶನವಾಗಿದೆ.

**ಸಾವು ಒಮ್ಮೆ ಮಾತ್ರ; ವಿಜಯವೇ ಬಂಡಾಯದ ಆಶಯ**

ಬಂಡಾಯ ಸಾಹಿತ್ಯ ಮತ್ತು ಚಳುವಳಿಗಳು ಎಂದಿಗೂ ಸಾಯುವುದಿಲ್ಲ. ಸಮಾಜದಲ್ಲಿ

೪೦ನೇ ಪುಟಕ್ಕೆ

ಡಾ॥ ಕಾ. ವೆಂ. ಶ್ರೀನಿವಾಸಮೂರ್ತಿ

ಡಿಸೆಂಬರ್ ೨೬ರಂದು ಮಹತ್ವದ ಸಭೆಯೊಂದು ಬೆಂಗಳೂರಿನಲ್ಲಿ ಜರುಗಿತು. ಬಂಡಾಯ ಸಾಹಿತ್ಯ ಸಂಘಟನೆಯು ಕಾಲು ಶತಮಾನವನ್ನು ಪೂರೈಸಿರುವ ಚಾರಿತ್ರಿಕ ಘಟ್ಟದಲ್ಲಿ 'ಬಂಡಾಯ-೨೫' ಎಂಬ ರಾಜ್ಯ ಸಮಾವೇಶವು ಪ್ರಸ್ತುತವೂ ಔಚಿತ್ಯಪೂರ್ಣವೂ ಆಗಿದ್ದಿತು.

**ಬಂಡಾಯ ಸಾಹಿತ್ಯ ಮತ್ತು ಚಳುವಳಿಗಳು ಎಂದಿಗೂ ಸಾಯುವುದಿಲ್ಲ. ಸಮಾಜದಲ್ಲಿ ಸವಾಲು ಮತ್ತು ಜಾಗೃತ ಮನಸ್ಸು; ಎರಡೂ ಒಟ್ಟೊಟ್ಟಿಗೆ ಇರುವವರೆಗೂ ಅವು ಜೀವಂತವಾಗಿರುತ್ತವೆ. ಹಾಗೊಮ್ಮೆ ಬಂಡಾಯಕ್ಕೆ ಸಾವು ಬಂದಿದೆ ಎಂದರೆ ಅದು ವಿಜಯದ ಗಡಿಯನ್ನು ಮುಟ್ಟಿ ತನ್ನ ಸರ್ವಸಮಾನತೆಯ ಆಶಯವನ್ನು ಸಂಪೂರ್ಣವಾಗಿ ಪೂರೈಸಿಕೊಂಡಿದೆ ಎಂದೇ ಅರ್ಥ.**



# ಗಾಂಧಿಯ ಶಿಲ್ಪದಲ್ಲಿ ಶ್ರೀರಾಮಚಂದ್ರ

ಭಾರತದ ಹಳ್ಳಿ, ಕೃಷಿ ಮತ್ತು ಕರಕುಶಲ ಕಸುಬುಗಳನ್ನು ಬ್ರಿಟಿಷರ ನಗರ, ಕೈಗಾರಿಕೆ ಮತ್ತು ಯಂತ್ರಗಳಿಗೆ ಪರ್ಯಾಯವಾಗಿ ಮುಖಾಮುಖಿಗೊಳಿಸಿದ ಗಾಂಧಿ ಸನಾತನಿಯಂತೆ ಕಂಡರೆ ಆಶ್ಚರ್ಯವಿಲ್ಲ. ಇಂಗ್ಲೆಂಡಿನಲ್ಲಿ ಆಧುನಿಕ ಶಿಕ್ಷಣ ಪಡೆದು ಭಾರತದ ಸಂಪ್ರದಾಯಶೀಲ ಜೀವನಶೈಲಿಯನ್ನು ಅನುಸರಿಸಲು ಅವರಿಗೆ ಯಾವ ಸಂದಿಗ್ಧವೂ ಕಾಡಲಿಲ್ಲ. ರಾಮನ ನೈತಿಕ ಆದರ್ಶ ಮತ್ತು ಚರಕ-ಉಪ್ಪಿನಂಥ ಭೌತಿಕ ಪ್ರತೀಕಗಳನ್ನು ಯಾವ ವೈರುಧ್ಯವಿಲ್ಲದೆ ನೇಯಬಲ್ಲ ಮಗ್ಗ ಅವರ ಬಳಿಯಿತ್ತು.

ಡಾ|| ಶ್ರೀಧರ ಬಳಗಾರ

**ಗಾಂ**ಧೀಜಿಯವರ ಮೂಲಕ ಪ್ರಕಟವಾದ ಬಹುರೂಪಿ ಸಂಸ್ಕೃತಿ ದ್ವಂದ್ವಗಳಿಂದ ಕೂಡಿದೆ. ಕಾಲಕಾಲಕ್ಕೆ ದೇಶದ ಚರಿತ್ರೆಯನ್ನು ಪುನರ್‍ರಚಿಸುವ ಸಂವೇದನಾಶೀಲ ಮನಸಿನಲ್ಲಿ ಜಗತ್ತಿನ ಅತ್ಯುತ್ತಮ ಜೀವನ ದರ್ಶನಗಳು ಜಾಗ್ರತಗೊಂಡು, ಹೊಸ ಬಗೆಯ ತಾತ್ವಿಕ ವಿನ್ಯಾಸದಲ್ಲಿ ಸಂಯೋಗಹೊಂದುತ್ತವೆ. ಈ ಮಾತು ಯುಗ ನಿರ್ಮಾಪಕ ಕವಿ, ಸಂತ, ಕಲಾವಿದರಿಗೂ ಅನ್ವಯಿಸಬಹುದಾದ ಸತ್ಯ. ವಿಭಿನ್ನ ಗ್ರಹಿಕಾಶ್ರಮಗಳಿಂದ ರೂಪುಗೊಳ್ಳುವ ಯೋಚನಾ ವ್ಯವಸ್ಥೆ ರೂಪಕಾತ್ಮಕ ಅಭಿವ್ಯಕ್ತಿಯಾಗುವುದು ಹೀಗೆ. ಮಹಾತ್ಮರ ಜೀವನ ಎಲ್ಲ ಕಾಲದ ಬಹುಮುಖ್ಯ ವಾಗ್ವಾದಗಳಿಗೆ, ಆಹ್ವಾನಗಳಿಗೆ ಸಾಂಸ್ಕೃತಿಕ ಕಮ್ಮಟವಾಗುವುದು ಈ ಅರ್ಥದಲ್ಲಿ. ಗಾಂಧಿ ತನ್ನ ಹೋರಾಟಕ್ಕೆ ಎರಕಹೊಯ್ದು ಅಣಿಗೊಳಿಸಿಕೊಂಡ ಆಯುಧಗಳು ಹಲವು ಕಾಲ-ದೇಶಗಳಿಂದ ಸಂಗ್ರಹಿಸಲ್ಪಟ್ಟಂಥವು.

ಭಾರತದ ಹಳ್ಳಿ, ಕೃಷಿ ಮತ್ತು ಕರಕುಶಲ ಕಸುಬುಗಳನ್ನು ಬ್ರಿಟಿಷರ ನಗರ, ಕೈಗಾರಿಕೆ ಮತ್ತು ಯಂತ್ರಗಳಿಗೆ ಪರ್ಯಾಯವಾಗಿ ಮುಖಾಮುಖಿಗೊಳಿಸಿದ ಗಾಂಧಿ ಸನಾತನಿಯಂತೆ ಕಂಡರೆ ಆಶ್ಚರ್ಯವಿಲ್ಲ. ಇಂಗ್ಲೆಂಡಿನಲ್ಲಿ ಆಧುನಿಕ ಶಿಕ್ಷಣ ಪಡೆದು ಭಾರತದ ಸಂಪ್ರದಾಯಶೀಲ ಜೀವನಶೈಲಿಯನ್ನು ಅನುಸರಿಸಲು ಅವರಿಗೆ ಯಾವ ಸಂದಿಗ್ಧವೂ ಕಾಡಲಿಲ್ಲ. ರಾಮನ ನೈತಿಕ ಆದರ್ಶ ಮತ್ತು ಚರಕ-ಉಪ್ಪಿನಂಥ ಭೌತಿಕ ಪ್ರತೀಕಗಳನ್ನು ಯಾವ ವೈರುಧ್ಯವಿಲ್ಲದೆ ನೇಯಬಲ್ಲ ಮಗ್ಗ ಅವರ ಬಳಿಯಿತ್ತು. ಹೀಗೆ ಸಂಪ್ರದಾಯ ಮತ್ತು ಆಧುನಿಕತೆ, ಹಳ್ಳಿ ಮತ್ತು ನಗರ, ಕರಕುಶಲ ಮತ್ತು ಯಂತ್ರ, ಸಮಾಜ ಮತ್ತು ದೇಶ, ಇತಿಹಾಸ ಮತ್ತು ವರ್ತಮಾನ, ಧರ್ಮ ಮತ್ತು ರಾಜಕೀಯ ದ್ವಂದ್ವಗಳನ್ನು ಗಾಂಧೀ ಎದುರಿಸಿದ ಕ್ರಮ ಕುತೂಹಲಕಾರಿಯಾದದ್ದು.

ಆಧುನಿಕ ಪರಿಭಾಷೆಯ ಅರ್ಥದಲ್ಲಿ 'ಅಭಿವೃದ್ಧಿ'ಯನ್ನು ವಿರೋಧಿಸಿದ್ದ ಗಾಂಧಿ ಒಬ್ಬ ಸನಾತನಿಯಾಗಿ ಮರ್ಯಾದಾಪುರುಷೋತ್ತಮ ರಾಮಚಂದ್ರನನ್ನು ಯಾವ ರೂಪದಲ್ಲಿ ಕಡೆದಿದ್ದಾರೆ ? ಗಾಂಧೀ ಕಂಡ ಕನಸಿನ ರಾಜ್ಯದಲ್ಲಿ ರಾಮ ಕ್ಷಾತ್ರತ್ವವನ್ನು ಪಡೆದಿರಲಿಲ್ಲ. ವಾಲಿಯನ್ನು, ರಾವಣನನ್ನು ಸಂಹರಿಸಿದ ಯೋಧನಾಗಿ ರಾಮ ಕಂಡಿದ್ದರೆ ಗಾಂಧಿಯ ಸ್ವಾತಂತ್ರ್ಯಹೋರಾಟದ ಅಸ್ತ್ರಗಳು ಬದಲಾಗಿರುತ್ತಿದ್ದವು. ಬ್ರಿಟಿಷರ ವಿರುದ್ಧ ಯುದ್ಧ ಸಾರಿ, ನಾಗರಿಕ ಶಸ್ತ್ರಾಸ್ತ್ರಗಳಿಂದ ಹೋರಾಟ ಮಾಡಬೇಕಾಗುತ್ತಿತ್ತು. ಹಾಗೇನಾದರೂ ಮಾಡಿದ್ದರೆ ಭಾರತದ ದೇವಾನುದೇವತೆಗಳ ಯುದ್ಧ ಪರಂಪರೆಯ ಮುಂದುವರಿಕೆಯೇ ಆಗುತ್ತಿತ್ತು. ಏಕೆಂದರೆ ನಮ್ಮ ದೇವತೆಗಳು ಹಲವು ಬಗೆಯ ರಾಜಕೀಯ ತಂತ್ರೋಪಾಯಗಳನ್ನು ಸಮರ್ಥವಾಗಿ ಬಳಸಿ, ಯುದ್ಧ ಮಾಡಿ, ಸೋಲು-ಗೆಲುವುಗಳನ್ನು ಕಂಡವರು. ಆಕ್ರಮಣಶೀಲ ಮಾರ್ಗವನ್ನು ಆಯ್ದುಕೊಳ್ಳದ ಗಾಂಧಿ ಈ ಅರ್ಥದಲ್ಲಿ ಸನಾತನಿಯಲ್ಲ. ನಮ್ಮ ಇತಿಹಾಸ, ಪುರಾಣ, ಮಹಾಕಾವ್ಯಗಳ ರಾಜಾಧಿರಾಜರು ಅನುಸರಿಸಿದ ಯುದ್ಧ ನೀತಿಯನ್ನು ಗಾಂಧಿ ನಿರಾಕರಿಸಿದ್ದರು. ಮತ್ತೊಂದು ಅರ್ಥದಲ್ಲಿ ಭಾರತದಲ್ಲಿ ಬ್ರಿಟಿಷರೇ ಸಾಂಪ್ರದಾಯಿಕ ಹಿಂಸಾತ್ಮಕ ರಣನೀತಿಯನ್ನು ಅನುಸರಿಸಿದರು. ಬ್ರಿಟಿಷರ ಶಸ್ತ್ರಸಜ್ಜಿತ ಆಕ್ರಮಣವನ್ನು ಪ್ರತಿಭಟಿಸುವುದೆಂದರೆ ಗಾಂಧಿಗೆ ಸಾವಿರಾರು ವರ್ಷಗಳ ಭಾರತೀಯರ ಹಿಂಸಾತ್ಮಕ ಯುದ್ಧ ನೀತಿಯನ್ನು ವಿರೋಧಿಸುವುದೇ ಆಗಿತ್ತು. ಹೇಗೆ ಗಾಂಧಿ ಏಕಕಾಲದಲ್ಲಿ ದೇಶೀಯರ ಉಗ್ರ ದೈವನಿಷ್ಠರ ಅವಕೃಪೆಗೂ ವಿದೇಶೀಯರ ಅವಮಾನಕ್ಕೂ ತೆರೆದುಕೊಳ್ಳಬೇಕಾಯಿತು. ರಾಮನ ಕ್ಷಾತ್ರ ತೇಜಸ್ಸನ್ನು ನಿರಾಕರಿಸಿ ಅವನ ನೈತಿಕ ಶಕ್ತಿಯನ್ನು ಮಾತ್ರ ಆಯ್ದುಕೊಂಡ ಗಾಂಧಿ ಭಾರತದ ಕಂದಾಚಾರಿಗಳಿಗೆ ಪ್ರತಿಗಾಮಿಯಂತೆ ಕಂಡರು. ಗಾಂಧಿಯ ರಾಮ ಸಾಮಾಜಿಕ ಜವಾಬ್ದಾರಿಯಿರುವ, ಕೌಟುಂಬಿಕ ಪ್ರೀತಿಯ, ಸಾತ್ವಿಕ ವ್ಯಕ್ತಿ. ರಾಮನ ಅತೀಂದ್ರಿಯ ಶಕ್ತಿಯನ್ನು ನಿರ್ವೀರ್ಯಗೊಳಿಸಿದ್ದಕ್ಕಾಗಿ ಗಾಂಧಿ ಹತ್ಯೆಗೊಳಗಾದರು ! ಏಕೆಂದರೆ, ಯುದ್ಧ ಹಸಿವಿನ ನಮ್ಮ ಸಂಸ್ಕೃತಿಗೆ ಅಪಾಯವನ್ನೊಡ್ಡಬಲ್ಲ ದೇಶದ್ರೋಹಿಯಂತೆ ಕೆಲವರಿಗೆ ಕಂಡಿರಬೇಕು. ಗಾಂಧೀ ಅಗ್ನಿದಿವ್ಯದ ನಿಷ್ಠುರ ವ್ರತವನ್ನು ರಾಮನಿಂದಲೇ ಕಲಿತಿದ್ದಿರಬೇಕು. ರಾಮನ ಸಾರ್ವಜನಿಕ ಮತ್ತು ರಾಜಕೀಯ ಜೀವನಶೈಲಿಯನ್ನು ಒಪ್ಪಿಕೊಂಡಿದ್ದರೆ ಭಾರತವೂ ಹಿಂಸಾತ್ಮಕ ಯುದ್ಧದಿಂದ ಉರಿದುಹೋಗುತ್ತಿತ್ತೇನೋ. ವೈರಿಯ ಎದುರು ಬಿಲ್ಲುಬಾಣ ತ್ಯಜಿಸಿ ನಿಲ್ಲುವ ರಾಮನನ್ನು ಕಲ್ಪಿಸಿಕೊಳ್ಳಲು ಸಾಧ್ಯವಿರದ, ಆವೇಶದ ಹುಸಿ ದೇಶಪ್ರೇಮಿಗಳಿಗೆ ಗಾಂಧಿ ಹೇಡಿಯಾಗಿ ಕಂಡಿರಬಹುದು. ಅಧಿಕಾರ ಬಿಟ್ಟು ದೇಶಾಂತರ ಸಂಚರಿಸುತ್ತ, ಅಂತಃಪುರದ ಹೊರಗೆ ಅಪಾರ ಅಭಿಮಾನಿಗಳನ್ನು ಪಡೆದು, ಪ್ರಭಾವಶಾಲಿ ನಾಯಕನಾದ ರಾಮನಂತೆ ಗಾಂಧಿಗೂ ಅಧಿಕಾರವಿಲ್ಲದ ಸ್ಥಿತಿಯಲ್ಲೂ ಪ್ರೀತಿ ಪ್ರಾಪ್ತವಾಗಿತ್ತು.

ಗಾಂಧಿ ಅವರಿಗೆ ರಾಮ ದೇವರಾಗಿ ಕಂಡಿದ್ದರೆ ಅದು ಅವನು ಜಯಸಿದ ಯುದ್ಧದಿಂದಾಗಿರಲಿಲ್ಲ; ಬದಲಾಗಿ ಅವನ ನೈತಿಕ ಬಲದಿಂದಾಗಿ. ಈ ಮಣ್ಣಿನ ಸತ್ಯ ದೈವತ್ವಕ್ಕೇರುವುದನ್ನು ನಂಬುವುದು ಅವರಿಗೆ ಸಾಧ್ಯವಿತ್ತು. ಜನಸಾಮಾನ್ಯರ ಧಾರ್ಮಿಕ ಭಕ್ತಿಯನ್ನು ಅಂಧಶ್ರದ್ಧೆಯ ರೋಗದಿಂದ, ಶೌರ್ಯತನದಿಂದ ಹಿಂಸೆಯಾಗಿಬಿಡಬಲ್ಲ ಅಪಾಯದಿಂದ, ಮತೀಯ ವಿಚಾರವಾಗಿಬಿಡುವುದರಿಂದ ದೇಶವನ್ನು ರಕ್ಷಿಸಲು ಅವರು ಯತ್ನಿಸಿದ್ದರು. ದೇವರಲ್ಲಿ ನಂಬಿಕೆಯಿರಿಸದ ನಾಯಕ ಜನರನ್ನು ಸಂಘಟಿಸಲಾರನೆಂದು ಅವರಿಗೆ ತಿಳಿದಿತ್ತು. ಅಂದರೆ, ಗಾಂಧೀಜಿ ಅವರು ಅಂತರಂಗದಲ್ಲಿ ನಾಸ್ತಿಕರು ಎಂದೇನೂ ನಾನು ವಾದಿಸುತ್ತಿಲ್ಲ. ಆದರೆ, ರಾಷ್ಟ್ರೀಯ ಹೋರಾಟದಲ್ಲಿ ಧಾರ್ಮಿಕ ಭಾವನೆ ದೇಶವನ್ನು ಒಡೆಯುವ

ಅಥವಾ ಒಗ್ಗೂಡಿಸುವುದರಲ್ಲಿ ಮಹತ್ವದ ಪಾತ್ರವಹಿಸ ಬಲ್ಲದೆಂಬ ಸೂಕ್ಷ್ಮ ಒಳನೋಟ ಅವರಿಗಿತ್ತು.

ಗಾಂಧಿಯ ಅಂತರ್ಯದಲ್ಲಿದ್ದ ಲೌಕಿಕ ರಾಮನಿಗೆ ಅಹಿಂಸೆ, ಅಸಹಕಾರ, ಉಪವಾಸದಂಥ ಭಾರತದ ಅಸಾಂಪ್ರದಾಯಿಕ ಮಾರ್ಗಗಳಲ್ಲಿ ಮುನ್ನಡೆಯಲು ಸಮಸ್ಯೆಯಿರಲಿಲ್ಲ. ಅಹಿಂಸೆಯ ಮಾರ್ಗದಲ್ಲಿ ಗಾಂಧಿ ರಾಮನನ್ನು ಪಳಗಿಸಿದ್ದು ಬಹಳ ಮುಖ್ಯವಾದ ಚಾರಿತ್ರಿಕ ಘಟ್ಟ. ಅಹಿಂಸೆಯನ್ನು ಪರಮೋಚ್ಚ ಮೌಲ್ಯಗಳೆಂದು ಸಾರುವ ಬೌದ್ಧ ಮತ್ತು ಜೈನ ಮತಗಳು ರಾಮಾಯಣದ ರಾಮನನ್ನು ಒಪ್ಪಿಕೊಳ್ಳಲು ಸಾಧ್ಯವಿರಲಿಲ್ಲ. ಇಂಥ ಸಾಂಸ್ಕೃತಿಕ ವೈರುಧ್ಯಗಳು ಗಾಂಧಿಯ ಅಖಂಡ ವ್ಯಕ್ತಿತ್ವದಲ್ಲಿ ಕರಗುವ ಕ್ರಿಯೆಯಲ್ಲಿ ಮನುಕುಲದ ಬಿಡುಗಡೆಗೆ ಅಗತ್ಯವಾದ ಹೊಸಬಗೆಯ ಸ್ವತಂತ್ರ ಆಯುಧಗಳು ಶೋಧಿಸಲ್ಪಟ್ಟವು. ರಾಮನ ಅಂತರಂಗ ಶುದ್ಧಿ ಮತ್ತು ಅಸಾಂಪ್ರದಾಯಿಕ ಜೀವನ ಸಿದ್ಧಾಂತಗಳು ಬೋಧಿಸುವ ಅಹಿಂಸೆಯ ಪರಿಪಾಲನೆಯಿಂದ ಒದಗುವ ಹೃದಯ ಪರಿವರ್ತನೆ – ಇವೆರಡೂ ಬ್ರಿಟಿಷರನ್ನು ನಿರಾಯುಧಗೊಳಿಸಿದ ಅಪರಿಚಿತ ಅಸ್ತ್ರಗಳಾಗಿದ್ದವು.

ಒಂದು ವೇಳೆ ಸಾತ್ವಿಕ ರಾಮನನ್ನು ಅಂತರ್ಯದಲ್ಲಿರಿಸಿಕೊಂಡಿರದಿದ್ದರೆ ಗಾಂಧಿಯ ಅಹಿಂಸಾತ್ಮಕ ಹೋರಾಟದ ಸ್ವರೂಪ ಹೇಗಿರುತ್ತಿತ್ತು ಎಂದು ಕಲ್ಪಿಸಿಕೊಳ್ಳಬಹುದು. ನೀತಿ ಮತ್ತು ಪ್ರೀತಿಯ ಪ್ರತೀಕವಾಗಿ ರಾಮನನ್ನು ಗುರುತಿಸಿದರೂ ಸಂಪ್ರದಾಯಶೀಲ ಭಾರತೀಯರಿಗೆ ಅವನೊಬ್ಬ ದೈವಿಕ, ಅವತಾರಿ ಪುರುಷನೇ. ಅಸಾಂಪ್ರದಾಯಿಕ ಮೂಲದಿಂದ ಅಹಿಂಸೆಯನ್ನು ಆಯ್ಕೆಮಾಡಿಕೊಂಡರೂ ಅದು ವಿರಕ್ತಿಯಲ್ಲಿ ಮುಕ್ತಾಯವಾಗುವುದಿಲ್ಲ. ಅಂತಃಪುರವನ್ನು ತ್ಯಜಿಸಿದ ಬುದ್ಧ ಮತ್ತು ರಾಮ ಮರಳಿ ರಾಜ್ಯ ಪ್ರವೇಶಿಸುವಾಗ ಅವರೊಳಗಿದ್ದ ಭಾವ ವ್ಯತ್ಯಾಸವನ್ನು ಗಮನಿಸಬೇಕು. ಆಸೆ, ದುಃಖಗಳಿಗೆ ಕಾರಣವಾದ ಜೀವನದ ಮೇಲೆ ವಿರಕ್ತಿ ಉಂಟಾಗುವುದನ್ನು ಸಹಜವೆಂದು ಒಪ್ಪಿಕೊಂಡಿದ್ದರೆ ಗಾಂಧಿಯಿಂದ ದೇಶದ ಕನಸಿಗೆ ರಾಜಕೀಯ ದಾರ್ಶನಿಕತೆಯನ್ನು ಒದಗಿಸಲು ಸಾಧ್ಯವಾಗುತ್ತಿರಲಿಲ್ಲ. ಮತಾಂಧತೆಯನ್ನು ಕೆರಳಿಸುವುದರ ಮೂಲಕ, ಧಾರ್ಮಿಕ ಸಾಮರಸ್ಯವನ್ನು ಕಾಪಾಡುವುದರ ಮೂಲಕ ದೇಶದ ಜನರನ್ನು ಸಂಘಟಿಸಿದ ಉದಾಹರಣೆ ಜಗತ್ತಿನ ಚರಿತ್ರೆಯಲ್ಲಿ ಸಿಗುತ್ತದೆ. ಆದರೆ ನಾಸ್ತಿಕ ವ್ಯಕ್ತಿಯನ್ನು ರಾಜನನ್ನಾಗಿ ಒಪ್ಪಿಕೊಂಡ ಇತಿಹಾಸವಿರುವ ದೇಶವನ್ನು ಉದಾಹರಿಸುವುದು ಕಷ್ಟದ ಕೆಲಸ. ಒಂದು ಧಾರ್ಮಿಕ ನೆಲೆಯಲ್ಲಿ ಶ್ರದ್ಧೆಯಿಂದ ಸಾಮೂಹಿಕ ಹಿತಾಸಕ್ತಿಗಳಲ್ಲಿ ಗುರುತಿಸಿಕೊಳ್ಳುವ, ಸುಪ್ತಾವಸ್ಥೆಯಲ್ಲಿರುವ ಸಂಘಟನೆಯನ್ನು ಜಾಗ್ರತಗೊಳಿಸಿ ಹೋರಾಟಕ್ಕೆ ಅಣಿಗೊಳಿಸುವುದು ಸುಲಭ. ಗಾಂಧಿಗೆ ಧರ್ಮ ಕೇವಲ ಜನರನ್ನು ಸಂಘಟಿಸಲಿದ್ದ ಉಪಾಯಮಾತ್ರವಾಗಿತ್ತೆಂದು ನಾನು ವಾದಿಸುತ್ತಿಲ್ಲ. ಮತ-ಧರ್ಮಗಳಲ್ಲಿ ದೇವರ ಕುರಿತು ಮೌನವಾಗಿದ್ದರೂ ದಾರ್ಶನಿಕನೊಬ್ಬನನ್ನು ಜನ ತಮ್ಮ ನಾಯಕನನ್ನಾಗಿ ಸ್ವೀಕರಿಸಿಯಾರು. ಆದರೆ, ರಾಜಕೀಯ, ಸಾಮಾಜಿಕ ಹೋರಾಟಗಳಲ್ಲಿ ಧಾರ್ಮಿಕ ಭಾವನೆಯನ್ನು ಜಾಗೃತಗೊಳಿಸದೆ ರಾಷ್ಟ್ರನಾಯಕನಾಗಲಾರ. ಭಕ್ತಿ ಚಳವಳಿ, ವಚನಸಾಹಿತ್ಯ ಚಳವಳಿ ಇದಕ್ಕೆ ಉದಾಹರಣೆಗಳಾಗಬಹುದು ಅಥವಾ ಈ ಮಾತನ್ನು ಹೀಗೂ ಹೇಳಬಹುದು : ರಾಮನೊಪ್ಪಿಕೊಂಡಿರದ ಗಾಂಧಿಗೆ ಭಾರತದ ಬಹುಸಂಖ್ಯಾತ ಸಾತ್ವಿಕ ಸಂಪ್ರದಾಯಸ್ಥರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳಲು ಸಾಧ್ಯವಿರಲಿಲ್ಲ. ಗಾಂಧಿಯ ರಾಮ ಮುಸ್ಲಿಂ ಜನಾಂಗಕ್ಕೂ ಸಮಸ್ಯೆಯಾಗಿರಲಿಲ್ಲ. ರಾಮನನ್ನು ಉಪ್ಪು ಮತ್ತು ಚರಕವನ್ನಾಗಿ ಭಾಷಾಂತರಿಸಿಕೊಳ್ಳಬಲ್ಲ ಮಾಂತ್ರಿಕತೆ ಗಾಂಧಿಗೆ ಗೊತ್ತಿತ್ತು. ಕೀರ್ತಿನಾಥ ಕುರ್ತಕೋಟಿಯವರು ಹೇಳುವಂತೆ ಭಾರತಕ್ಕೆ ಇತಿಹಾಸ ರಾಮ ಸಮಸ್ಯಾತ್ಮಕವಾಗುತ್ತಾನೆಯೇ ಹೊರತು ವರ್ತಮಾನದ ಭಾವ ಸತ್ಯವಾಗಿ ಅಲ್ಲ. ಇಂಥ ವರ್ತಮಾನದ ಭಾವಸತ್ಯವಾಗಿ ರಾಮನ ಮರುವ್ಯಾಖ್ಯಾನ ಮಾಡಿದ ಗಾಂಧಿ ಈ ಕಾಲದ ಬಹುದೊಡ್ಡ ಸತ್ಯಸಂಗತಿಯಾಗಿ ಪರಿಣಮಿಸಿದ್ದಾರೆ.

ಗಾಂಧೀಜಿಯವರ ಕನಸಾದ ರಾಮರಾಜ್ಯದ ಸ್ಥಾಪನೆ ಸ್ವಾತಂತ್ರ್ಯೋತ್ತರ ಭಾರತದಲ್ಲಿ ನನಸಾಗುವುದಿರಲಿ, ಯಾವ ನಗರ-ಕೈಗಾರಿಕಾಕೇಂದ್ರಿತ ಯಂತ್ರ ನಾಗರೀಕತೆಯನ್ನು ವಿರೋಧಿಸಿದ್ದರೊ ಅದೇ ನೆಹರೂರವರಿಂದ ಅಭಿವೃದ್ಧಿಯ ಹೆಸರಿನಲ್ಲಿ ಸ್ವತಂತ್ರಭಾರತದ ಪ್ರಜಾಪ್ರಭುತ್ವದ ರಾಷ್ಟ್ರೀಯ ಕಾರ್ಯಕ್ರಮವಾಗಿ ಜಾರಿಗೆ ಬಂದದ್ದು ಒಂದು ಐತಿಹಾಸಿಕ ತಿರುವು. ಗಾಂಧಿ ಪ್ರಯೋಗಿಸಿದ ಚರಕ ಮತ್ತು ಉಪ್ಪಿನಂಥ ಅಲೌಕಿಕ ವಸ್ತುಗಳ ಮಾನವೀಯ ಧ್ಯೇಯೋದ್ದೇಶಗಳು ನೆಹರೂರವರು ಸ್ಥಾಪಿಸಿದ ಯಂತ್ರ ನಾಗರಿಕತೆಗಿರಲಿಲ್ಲ. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಗಾಂಧಿ ಯಾವ ಸಾವಿರಾರು ವರ್ಷಗಳ ಭಾರತದ ಯುದ್ಧ ನೀತಿಯನ್ನು ಹೊರಗಿಟ್ಟಿದ್ದರೋ ಅದಕ್ಕೆ ಸರಿಸಮವಾದ ಆಕ್ರಮಣಕಾರಿ ವೇದಿಕೆಯೊಂದು ಸಿದ್ಧಗೊಳ್ಳುವ ಸೂಚನೆಗಳು ನೆಹರೂ ಅವರ ಕೈಗಾರಿಕಾ ನೀತಿಯಲ್ಲಿತ್ತೆಂಬುದು ಈಗ ಸ್ಪಷ್ಟವಾಗಿ ಅನುಭವಕ್ಕೆ ಬರತೊಡಗಿದೆ. ಮುಖ್ಯವಾಗಿ ಗಾಂಧೀಜಿಯವರ ಹೋರಾಟದ ಶಕ್ತಿಯ ಕೇಂದ್ರೀಕರಣ ಸಾಮ್ರಾಜ್ಯಶಾಹಿ ಮತ್ತು ವಸಾಹತುಶಾಹಿ ಹಿಂಸೆಗಳ ವಿರುದ್ಧವಿದ್ದದು ನಿಜವಾದರೂ ವೈಯಕ್ತಿಕ ನೆಲೆಯಲ್ಲಿ ಮನುಷ್ಯನ ಅಂತರಂಗ ಮತ್ತು ಅವನನ್ನು ಆವರಿಸಿದ ವಿಕೃತ ಪರಿಸರವನ್ನು ಶುದ್ಧೀಕರಿಸುವ ಹೋರಾಟವೂ ಆಗಿತ್ತೆಂಬುದನ್ನು ಮರೆಯಲಾಗದು. ಗಾಂಧಿ ತನ್ನ ಕೊನೆಯ ಉಸಿರಿನೊಂದಿಗೆ ರಾಮನನ್ನು ಬಿಟ್ಟುಹೋದದ್ದು ನೀಲಾಕಾಶದಷ್ಟು ವಿಶಾಲವಾದ ಪ್ರಪಂಚಕ್ಕೇ ವಿನಾ ಒಂದು ನಿರ್ದಿಷ್ಟ ಪ್ರದೇಶಕ್ಕಲ್ಲ.

**ಡಾ॥ ಶ್ರೀಧರ ಬಳಗಾರ**
'ಸನ್ನಿಧಿ', ವಿವೇಕ ನಗರ, ೩ನೇ ಕ್ರಾಸ್, ಕುಮಟಾ - ೫೮೧ ೩೪೩
ಉತ್ತರ ಕನ್ನಡ ಜಿಲ್ಲೆ

---

*೩೮ನೇ ಪುಟದಿಂದ*

ಸವಾಲು ಮತ್ತು ಜಾಗೃತ ಮನಸ್ಸು; ಎರಡೂ ಒಟ್ಟೊಟ್ಟಿಗೆ ಇರುವವರೆಗೂ ಅವು ಜೀವಂತವಾಗಿರುತ್ತವೆ. ಹಾಗೊಮ್ಮೆ ಬಂಡಾಯಕ್ಕೆ ಸಾವು ಬಂದಿದೆ ಎಂದರೆ ಅದು ವಿಜಯದ ಗಡಿಯನ್ನು ಮುಟ್ಟಿ ತನ್ನ ಸರ್ವಸಮಾನತೆಯ ಆಶಯವನ್ನು ಸಂಪೂರ್ಣವಾಗಿ ಪೂರೈಸಿಕೊಂಡಿದೆ ಎಂದೇ ಅರ್ಥ. ಅದೇ ಬಂಡಾಯದ ವಿಜಯ ಮತ್ತು ಸಾವು. ಆದಷ್ಟು ಬೇಗ ಇದು ಸಾಧ್ಯವಾಗಬೇಕೆನ್ನುವುದು ಸಂಘಟನೆಯ ಆಶಯ. ಆದರೂ ಬಂಡಾಯವನ್ನು ಕುರಿತ ಪ್ರತಿಕ್ರಿಯೆಗಳಿಗೆ ಸ್ವಾಗತ; ಆದರೆ ಒಪ್ಪುಗೆಯ ವಿಚಾರ ಬೇರೆ. ಈ ಹಿನ್ನೆಲೆಯಲ್ಲಿ ಕೂಡ ಬಂಡಾಯವನ್ನು ಕುರಿತ ಆತ್ಮವಿಮರ್ಶೆ ಅವಶ್ಯಕವಾಗಿದೆ.

ಬಂಡಾಯ ಸಾಹಿತ್ಯ ಸಂಘಟನೆಯು ಕೆಲವೊಮ್ಮೆ ತೀವ್ರ, ಕೆಲವೊಮ್ಮೆ ಮಂದಸ್ವರೂಪದಲ್ಲಿ ಸಾಗಿದೆ. ಇಪ್ಪತ್ತೈದು ವರ್ಷಗಳ ನಿರಂತರ ಕ್ರಿಯಾಶೀಲತೆಯನ್ನು ಸಾಧಿಸಿಕೊಂಡಿರುವ ಇದು ನಿರೀಕ್ಷಿತ ಮಟ್ಟದಲ್ಲಿಲ್ಲ ಎಂಬುದನ್ನು ಸಹ ಒಪ್ಪಬೇಕು. ಈ ಮಾತು ಎಲ್ಲ ಜನಚಳುವಳಿಗಳಿಗೂ ಅನ್ವಯವೆನ್ನಿಸುತ್ತದೆ. ಈ ಮಾತು ಹಾಗೊಮ್ಮೆ ಸುಳ್ಳಾಗಿ, ನಾವು ಬೀಗುವ ಸ್ಥಿತಿ ಇದ್ದಿದ್ದರೆ ಕಳೆದ ಶತಮಾನದಲ್ಲಿ ರಾಷ್ಟ್ರೀಕರಣದತ್ತ ಅಂಬೆಗಾಲಿಡುತ್ತಾ ಬಂದ ಭಾರತವು ೯೦ರ ದಶಕದಲ್ಲಿ ಖಾಸಗೀಕರಣದತ್ತ ಹೊರಳುತ್ತಿರಲಿಲ್ಲ. ಇದರ ಹೊಣೆಯನ್ನು ತಣ್ಣನೆ ಕುಳಿತು ಜೀವಿಸಿದ ಬುದ್ಧಿಜೀವಿವರ್ಗವೆ ಹೊರಬೇಕು. ಸಮಾಜವನ್ನು ಪುರೋಗಾಮಿ ಪಥದತ್ತ ಕೊಂಡೊಯ್ಯಬೇಕಾಗಿದ್ದ ಅಂದಿನ ಪುರೋಹಿತವರ್ಗವು ತನ್ನನ್ನೂ ಹೊರತುಪಡಿಸಿ, ಇಡೀ ಸಮಾಜವನ್ನು ತಿರೋಗಾಮಿ (ಅಧೋಮುಖಿಯಾಗಿ) ಪಥದತ್ತ ಕೊಂಡೊಯ್ದ ಕಾರಣಕ್ಕಾಗಿ ವರ್ತಮಾನದ ಸಮಾಜವು ಇಂದಿಗೂ ಆ ವರ್ಗವನ್ನು ದೂಷಿಸುತ್ತಿದೆ, ಶಪಿಸುತ್ತಿದೆ. ಇಂದು ಅದೇ ಸ್ಥಾನದಲ್ಲಿ, ವಿವರಿಸಿ ಹೇಳುವುದಾದರೆ ಆ ಅಪರಾಧಿ ಸ್ಥಾನದಲ್ಲಿ ನಿರ್ದಿಷ್ಟ ಜಾತಿಗೆ ಅತೀತವಾಗಿ ಎಲ್ಲ ಜಾತಿಗಳಿಂದ ಹೊರಬಂದ ಬುದ್ಧಿಜೀವಿ ವರ್ಗವು ನಿಂತಿದೆ. ಹಿಂದಿನ ತಲೆಮಾರುಗಳು ಹೋರಾಟದಲ್ಲಿ ಬ್ರಿಟಿಷರಿಂದ ಪಡೆದ ಭಾರತವನ್ನು ನಮಗೆ ವರ್ಗಾಯಿಸಿದರು. ಆದರೆ ನಾವು ಅದೇ ಸಾರ್ವಭೌಮತೆಯ ದೇಶವನ್ನು ನಾಳಿನ ತಲೆಮಾರಿಗೆ ವರ್ಗಾಯಿಸುತ್ತಿಲ್ಲ. ವಸಾಹತುಶಾಹಿಯಿಂದ ಪಾಠ ಕಲಿಯದೆ ನಾವು ನವವಸಾಹತುಶಾಹಿಯ ಹುನ್ನಾರವನ್ನು ಅರಿಯದೆ ಇಂದ್ರಜಿತುವಿನ ಪ್ರಹಾರಗಳಿಗೆ ಬಲಿಯಾಗುತ್ತಿದ್ದೇವೆ. ಇದು ವರ್ತಮಾನ. ಇದನ್ನು ಸಾಕ್ಷಾತ್ಕರಿಸಿಕೊಂಡ ಮನಸ್ಸು ಬಂಡಾಯದ ಹೊರಗೆ ಉಳಿಯುವುದಿಲ್ಲ. ಅಂತಹ ಅನೇಕ ಮನಸ್ಸುಗಳು ಸಂಘಟನೆಗಳಾಗಿ ಚಳುವಳಿಯನ್ನು ಕೈಗೊಳ್ಳದೇ ಇರುವುದಿಲ್ಲ.

ಆದರೂ ಬುದ್ಧಿಜೀವಿ ವರ್ಗದ ತಳ ಇನ್ನೂ ಕಾದಿಲ್ಲ; ಪೂರ್ತಿಯಾಗಿ ಕಾಯುತ್ತದೆ.

**ಡಾ॥ ಕಾ. ವೆಂ. ಶ್ರೀನಿವಾಸಮೂರ್ತಿ**
ರಾಜ್ಯ ಸಂಚಾಲಕರು, ಬಂಡಾಯ ಸಾಹಿತ್ಯ ಸಂಘಟನೆ
'ಅಕ್ಷರ', ೯೬೫, ೧ನೇ ಮುಖ್ಯರಸ್ತೆ, ಚಿನ್ನಣ್ಣ ಬಡಾವಣೆ,
ಕಾವಲುಭೈರಸಂದ್ರ, ಬೆಂಗಳೂರು - ೫೬೦ ೦೩೨



# ದೂರ ಸರಿಯುತ್ತಿರುವ ಗುಬ್ಬಚ್ಚಿಗಳು

ಮನೆಗಳ ಮಾಡಿನಲ್ಲಿ 'ಚಿಂವ್ ಚಿಂವ್' ಎಂದು ಅರಚುತ್ತಾ, ಅಂಗಳದಲ್ಲಿ ಕುಪ್ಪಳಿಸುತ್ತಾ, ಕಿಟಕಿಯ ಸಂದಿನಿಂದ ಪುರ್ರೆಂದು ಹಾರಿಹೋಗುತ್ತಿದ್ದ ಗುಬ್ಬಚ್ಚಿಗಳು ಇಂದು ನಮ್ಮ ದೃಷ್ಟಿಗೆ ಬೀಳುವುದೇ ಇಲ್ಲ! 'ಮನೆಗಳಲ್ಲಿ ಗುಬ್ಬಚ್ಚಿಗಳು ವಾಸಿಸುವುದು ಶುಭ ಸೂಚನೆ, ಮಂಗಳಕರ, ಅವು ಮನೆಮಂದಿಯ ಸಾಮರಸ್ಯವನ್ನು ವೃದ್ಧಿಸುತ್ತವೆ', ಇತ್ಯಾದಿ ನಂಬಿಕೆ ಹಿರಿಯರಿಗಿದ್ದರೂ ಇಂದು ಗುಬ್ಬಚ್ಚಿಗಳತ್ತ ಗಮನಹರಿಸುವವರೇ ಇಲ್ಲದಂತಾಗಿದೆ.

ಪಾಸ್ಸೆರ್ ಡೊಮಿಸ್ಟಿಕಸ್ ಎಂಬ ವೈಜ್ಞಾನಿಕ ಹೆಸರಿರುವ ಗುಬ್ಬಚ್ಚಿಗಳು ನಮ್ಮ ಪರಿಸರದಲ್ಲಿ ಮಾತ್ರವಲ್ಲ, ವಿಶ್ವಮಟ್ಟದಲ್ಲೂ ವಿರಳವಾಗುತ್ತಿರುವ ಪಕ್ಷಿಗಳ ಪಟ್ಟಿಯಲ್ಲಿ ಸೇರಿಕೊಂಡಿವೆ. ಎಲ್ಲೆಲ್ಲೂ ಕಾಣಸಿಕೊಳ್ಳುತ್ತಿದ್ದ ಗುಬ್ಬಚ್ಚಿಗಳು ಇಂದು ಅಪರೂಪವಾಗಿ ಕಾಣಿಸಿಕೊಳ್ಳುತ್ತಿವೆ. ಬ್ರಿಟನ್ನಿನಲ್ಲಿ ಇವುಗಳ ಸಂಖ್ಯೆ ಶೇಕಡಾ ೫೯ರಷ್ಟು, ಜರ್ಮನಿಯಲ್ಲಿ ಶೇಕಡಾ ೫೦ರಷ್ಟು ಕಡಿಮೆಯಾಗಿವೆ ಎಂದು ಪಕ್ಷಿಶಾಸ್ತ್ರಜ್ಞರು ಅಭಿಪ್ರಾಯಪಟ್ಟಿದ್ದಾರೆ. ಭಾರತದಲ್ಲೂ ಇವುಗಳ ಸಂಖ್ಯೆ ಕಡಿಮೆಯಾಗುತ್ತಿದ್ದರೂ, ಯಾರೂ ಈ ಕುರಿತು ಗಂಭೀರವಾಗಿ ಯೋಚಿಸಿಲ್ಲ.

ಗುಬ್ಬಚ್ಚಿಗಳು ಮನೆಯ ಗೋಡೆಗೆ ತಗುಲಿಸಿದ ಫೋಟೋಗಳ ಹಿಂದೆ, ಮಾಡಿನ ಬದಿ ಮೊದಲಾದ ಸಂದುಗೊಂದುಗಳಲ್ಲಿ ಗೂಡುಕಟ್ಟಿ ಸಂತಾನಾಭಿವೃದ್ಧಿ ಮಾಡುತ್ತಿದ್ದುವು. ಇಂದು ಪೇಟೆ, ಪಟ್ಟಣಗಳ ಬಹುಪಾಲು ಮನೆಗಳು ಕಾಂಕ್ರೀಟ್ ಕಟ್ಟಡಗಳು. ಇದರಿಂದಾಗಿ ಗುಬ್ಬಚ್ಚಿಗಳಿಗೆ ಮನೆಯೊಳಗೆ ಪ್ರವೇಶವೇ ಇಲ್ಲದಂತಾಗಿದೆ. ರಕ್ಷಣೆಯಿಲ್ಲದ ಸ್ಥಳಗಳಲ್ಲಿ ಅವು ಇಂದು ಗೂಡುಕಟ್ಟಬೇಕಾದ್ದರಿಂದ ಅವುಗಳ ಮೊಟ್ಟೆ-ಮರಿಗಳು ಹಾವು, ಬೆಕ್ಕು, ಹದ್ದುಗಳ ಧಾಳಿಗೆ ಗುರಿಯಾಗುವ ಸಂಭವ ಹೆಚ್ಚಾಗಿದೆ. ನಗರಗಳ ಬೆಂಕಿಪೊಟ್ಟಣಗಳಂತಿರುವ ಬಹುಮಹಡಿ ಕಟ್ಟಡಗಳಿಗೆ ಅವುಗಳಿಗೆ ಪ್ರವೇಶವೇ ಇಲ್ಲದಂತಾಗಿದೆ. ಆಧುನಿಕ ಜೀವನ ಶೈಲಿಗೆ ಹೊಂದಿಕೊಂಡಿರುವ ನಾಗರಿಕರು ಗುಬ್ಬಚ್ಚಿಗಳ ಪ್ರವೇಶಕ್ಕೆ ತಡೆಯೊಡ್ಡುತ್ತಾರೆ. ಸಂದುಗೊಂದುಗಳಿಲ್ಲದ ಮನೆಗಳಲ್ಲಿ ಗುಬ್ಬಚ್ಚಿಗಳಿಗೆ ಗೂಡುಕಟ್ಟಿ ಮರಿಗಳನ್ನು ಮಾಡಿಸುವ ಅವಕಾಶವೇ ಇರುವುದಿಲ್ಲ.

ವಸತಿ ಸಮಸ್ಯೆಯೊಂದೇ ಅಲ್ಲ, ಗುಬ್ಬಚ್ಚಿಗಳ ಸಂಖ್ಯೆ ಕ್ಷೀಣಿಸುತ್ತಿರುವುದಕ್ಕೆ ಆಹಾರದ ಸಮಸ್ಯೆಯೂ ಒಂದು. ಗುಬ್ಬಚ್ಚಿಗಳು ಆಹಾರಧಾನ್ಯ, ಕಾಳುಗಳನ್ನು ತಿನ್ನುತ್ತವೆ. ಅಧಿಕ ಆಹಾರ ಉತ್ಪಾದಿಸುವ ದೃಷ್ಟಿಯಿಂದ ಈಗ ಬೆಳೆಗಳ ಮೇಲೆ ವಿಷಕಾರಿ ಕೀಟನಾಶಕಗಳನ್ನು ಸಿಂಪಡಿಸಲಾಗುತ್ತಿದೆ. ಗುಬ್ಬಚ್ಚಿಗಳು ಈ ವಿಷಯುಕ್ತ ಆಹಾರವನ್ನು ತಿಂದು ಸಾವನ್ನಪ್ಪುತ್ತವೆ.

ಗುಬ್ಬಚ್ಚಿಗಳ ಸಂಖ್ಯೆ ಇಳಿಮುಖವಾಗುವುದಕ್ಕೆ ನಮ್ಮ ಅರಿವಿಗೆ ಬಾರದ ಇನ್ನಿತರ ಕಾರಣಗಳೂ ಇವೆ. 'ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರವೇ?' ಎಂಬ ಆಡುಮಾತೊಂದಿದೆ. ಆದರೆ ಗುಬ್ಬಿಯ ಮೇಲೆ ಅಸ್ತ್ರಹೂಡುವ ಮಂದಿಯೂ ಇದ್ದಾರೆ ಎಂಬುದು ಆಶ್ಚರ್ಯದ ಸಂಗತಿಯೇನಲ್ಲ.

ಉತ್ತರ ಭಾರತದ ಕೆಲವು ಪ್ರದೇಶಗಳಲ್ಲಿ ಗಂಡು ಗುಬ್ಬಚ್ಚಿಗಳನ್ನು ಒಂದು ಪ್ರಕಾರದಲ್ಲಿ ಔಷಧಿ ತಯಾರಿಕೆಗಾಗಿ ಸೆರೆಹಿಡಿದು ಕೊಲ್ಲಲಾಗುತ್ತದೆ. ಸೀಸಯುಕ್ತ ಪೆಟ್ರೋಲಿಯಂನ ಬಳಕೆ, ಮೊಬೈಲ್ ಫೋನುಗಳ ಉಪಯೋಗವೂ ಗುಬ್ಬಚ್ಚಿಗಳ ಸಂಖ್ಯೆ ಕ್ಷೀಣಿಸುವುದಕ್ಕೆ ಕಾರಣವೆಂದು ಪರಿಸರ ತಜ್ಞರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಎಲೆಕ್ಟ್ರೊ-ಮ್ಯಾಗ್ನೇಟಿಕ್ ಅಲೆಗಳ ಪ್ರಸಾರವಿರುವ ಪರಿಸರದಿಂದ ಗುಬ್ಬಚ್ಚಿಗಳು ದೂರ ಸರಿಯುತ್ತಿರುವುದು ಕಂಡುಬಂದಿದೆ. ಬ್ರಿಟನ್ನಿನಲ್ಲಿ ಈ ಕುರಿತು ಹೆಚ್ಚಿನ ಸಂಶೋಧನೆಗಳು ಜರುಗುತ್ತಿವೆ.

ಗುಬ್ಬಚ್ಚಿಗಳು ಕೀಟಗಳನ್ನು ಹಿಡಿದು ತಿಂದು ಸಸ್ಯ ಸಂರಕ್ಷಣೆಯಲ್ಲಿ ನಮಗೆ ನೆರವಾಗುತ್ತವೆ. ಮನೆಯೊಳಗೆ ಅವು ಜಿರಳೆ, ನೊಣ ಮತ್ತು ಇತರ ಚಿಕ್ಕಕೀಟಗಳನ್ನು ತಿಂದು ನಮಗೆ ನೆರವಾಗುತ್ತವೆ. ಶೇಖರಿಸಿಟ್ಟ ಧಾನ್ಯಗಳಿಗೆ ಹಾನಿಮಾಡುವ ಹಲವು ಕೀಟಗಳನ್ನು ಗುಬ್ಬಚ್ಚಿಗಳು ತಿಂದುಹಾಕುತ್ತವೆ. ಮನೆಯೊಳಗೆ ಗೂಡುಕಟ್ಟಿ ಕಸಕಡ್ಡಿಗಳನ್ನು ಹಾಕುವುದು, ಪಿಕ್ಕೆಗಳನ್ನು ಉದುರಿಸುವುದನ್ನು ಹೊರತುಪಡಿಸಿದರೆ ಅವುಗಳಿಂದ ನಮಗೇನೂ ಹಾನಿಯಿಲ್ಲ.

ಎಲ್ಲಕ್ಕಿಂತಲೂ ಮಿಗಿಲಾಗಿ ಗುಬ್ಬಚ್ಚಿ ಜೋಡಿಗಳು ನಿಷ್ಠೆಗೆ ಹೆಸರಾದ ಹಕ್ಕಿಗಳು. ಗುಬ್ಬಚ್ಚಿಗಳ ಕುಪ್ಪಳಿಸುವಿಕೆ, ಚೀರಾಟ, ಹಾರಾಟಗಳು ಮನಸ್ಸಿಗೆ ಉಲ್ಲಾಸವನ್ನುಂಟು ಮಾಡುತ್ತದೆ. ಅವುಗಳನ್ನು ಮನೆಯಿಂದ ಹೊರಗಟ್ಟಿದರೂ ಮನೆಯ ಹೊರಗಡೆ ಅವುಗಳ ವಾಸಕ್ಕೆ ಸೌಕರ್ಯ ಕಲ್ಪಿಸಿಕೊಡುವುದು ಪರಿಸರಪ್ರಿಯರಾದ ಎಲ್ಲರ ಕರ್ತವ್ಯವಲ್ಲವೇ?


ಪಿ. ಎಸ್. ರೈ

೩೦೩, ಕ್ಯಾಸ್ಸೆಲ್ ಎಪಾರ್ಟ್‌ಮೆಂಟ್, ಕದ್ರಿ, ಕಂಕನಾಡಿ ಪೋಸ್ಟ್, ಮಂಗಳೂರು - ೫೭೫ ೦೦೨


**ಸುದ್ದಿಚಿತ್ರ**




ಶ್ರೀ ಆದಿತ್ಯ ನಾರಾಯಣ ರಚಿಸಿರುವ 'ಚರಿತ್ರೆಯ ವಿಕೃತೀಕರಣ' (ಕನ್ನಡ) ಮತ್ತು 'ಆಲ್ ದಿ ಪರ್‌ಫ್ಯೂಮ್ಸ್ ಆಫ್ ಅರೇಬಿಯ ವಿಲ್‌ನಾಟ್, ಡಾ|| ಜೋಶಿ' (ಇಂಗ್ಲಿಷ್) ಪುಸ್ತಕಗಳನ್ನು ಚಿಕ್ಕಮಗಳೂರಿನಲ್ಲಿ ಅನಾವರಣಗೊಳಿಸಲಾಯಿತು.

ಚಿತ್ರದಲ್ಲಿ (ಎಡಬದಿ) ಸರ್ವಶ್ರೀ ಕೃಷ್ಣೇಗೌಡ, ಬಿ. ಆರ್. ಪಾಟೀಲ, ಬಿ. ಎಲ್. ಶಂಕರ್, ಶಿವರಾಜ ರಾ ಬಿರಾದಾರ, ಡಾ|| ಜಿ. ರಾಮಕೃಷ್ಣ, ಡಾ|| ಸಿದ್ದನಗೌಡ ಪಾಟೀಲ, ಎಂ. ಟಿ. ಸುಭಾಷ್ ಚಂದ್ರ, ಜೇರ್ಮಿ ಲೋಬೋ ಮತ್ತು ಎನ್. ಆರ್. ಮಂಜುನಾಥ ಅವರಿದ್ದಾರೆ




ನ್ಯೂಯಾರ್ಕ್

# ಲ್ಯಾಟಿನ್ ಅಮೆರಿಕದ ದೇಶಗಳಲ್ಲಿ ಪ್ರಗತಿಪರ ಅಲೆ

ಅಮೆರಿಕದ ರಾಯಭಾರಿಗಳು ದುರಹಂಕಾರದಿಂದ ಹದ್ದುಮೀರಿ ನಡೆದುಕೊಳ್ಳುವುದು, ಸಂಬಂಧಪಟ್ಟ ದೇಶಗಳ ಆಂತರಿಕ ವ್ಯವಹಾರಗಳಲ್ಲಿ ಮೂಗುತೂರಿಸುವುದು ಹೊಸದೇನಲ್ಲ. ಅಂಥದೇ ಪ್ರಯತ್ನವೊಂದನ್ನು ದಕ್ಷಿಣ ಅಮೆರಿಕದ ರಾಷ್ಟ್ರ ವೆನಿಜುವೇಲದಲ್ಲಿ ಅಮೆರಿಕದ ರಾಯಭಾರಿ ಮಾಡಿ ಮೂಗು ಮುರಿಸಿಕೊಂಡ. ದೊಡ್ಡಣ್ಣನಿಗೆ ಹೆದರಿ ಅಮೆರಿಕದ ದುರ್ವರ್ತನೆಯನ್ನು ಸಹಿಸಿಕೊಳ್ಳುವವರೇ ಹೆಚ್ಚು. ನಮ್ಮ ದೇಶವೂ ಇದಕ್ಕೆ ಹೊರತೇನಲ್ಲ. ಆದರೆ ವೆನೆಜುವೇಲದ ಅಧ್ಯಕ್ಷ ಹ್ಯೂಗೋ ಶವೇಜ಼್ ಅಮೆರಿಕದ ರಾಯಭಾರಿಗೆ ಛೀಮಾರಿ ಹಾಕಿ, ರಾಯಭಾರಿ ಹೇಗೆ ನಡೆದುಕೊಳ್ಳಬೇಕೆಂಬುದನ್ನು ಕಲಿತು ಬಾ ಎಂದು ಹೇಳಿ ಹೊರಗೆ ದಬ್ಬಿದರು. ಸರಿಯಾದ ಪಾಠ ಕಲಿಸಿದ ಅಧ್ಯಕ್ಷ ಶವೇಜ಼್‌ರ ಧೈರ್ಯ ಮೆಚ್ಚತಕ್ಕದ್ದೆ. ನಮ್ಮ ರಾಜಕಾರಣಿಗಳು ಇತ್ತ ಕಣ್ತೆರೆದು ನೋಡಿ ಸ್ವಾಭಿಮಾನ, ದೇಶದ ಗೌರವ, ಘನತೆಗಳನ್ನು ಎತ್ತಿಹಿಡಿಯುವುದನ್ನು ಕಲಿಯಲಿ.

ಕಳೆದ ಅಕ್ಟೋಬರ್‌ನಲ್ಲಿ ಜರುಗಿದ ಚುನಾವಣೆಗಳಲ್ಲಿ ಅತ್ಯಧಿಕ ಬಹುಮತ ಪಡೆದು ಅಧಿಕಾರ ವಹಿಸಿಕೊಂಡಿರುವ ಹ್ಯೂಗೋ ಶವೇಜ಼್ ಜನಪರ ಧೋರಣೆಯಿಂದ ಸುಧಾರಣೆಗಳನ್ನು ಜಾರಿಗೆ ತರಲು ದಾಪುಗಾಲಿರಿಸಿ ಸುದ್ದಿಯಲ್ಲಿದ್ದಾರೆ. ಸಾಕಷ್ಟು ತೈಲ ಸಂಪತ್ತನ್ನು ಹೊಂದಿರುವ ವೆನಿಜುವೇಲದ ಎಡಪಂಥೀಯ ಸರಕಾರ ಅಮೆರಿಕದ ಮುಕ್ತ ಮಾರುಕಟ್ಟೆ ವಲಯದ ಸ್ಥಾಪನೆಯ ಯೋಜನೆಯನ್ನು ಧಿಕ್ಕರಿಸಿ ಸಮಾಜವಾದಿ ಸಮಾಜದ ಸ್ಥಾಪನೆಯ ಗುರಿ ಇರಿಸಿಕೊಂಡಿದೆ. ಅಮೆರಿಕದ ಆರ್ಥಿಕ ನೀತಿಗಳನ್ನು ತಿರಸ್ಕರಿಸಿ, ಅದಕ್ಕೆ ಪ್ರತಿಯಾಗಿ ಪರ್ಯಾಯ ನೀತಿಯೊಂದನ್ನು ರೂಪಿಸುತ್ತಿರುವ ಹ್ಯೂಗೋ ಶವೇಜ಼್ ಸರಕಾರ ಎಲ್ಲ ಲ್ಯಾಟಿನ್ ಅಮೆರಿಕ ದೇಶಗಳನ್ನೂ ಒಂದುಗೂಡಿಸುವ ಪ್ರಯತ್ನದಲ್ಲಿ ತೊಡಗಿದೆ. 'ಇನ್ನೊಂದು ಪರ್ಯಾಯ ಜಗತ್ತನ್ನು ಸ್ಥಾಪಿಸುವ ಕಾಲ ಸನ್ನಿಹಿತವಾಗಿದೆ' ಎಂಬುದು ಶವೇಜ಼್‌ರ ವಿಶ್ವಾಸ.

ಲ್ಯಾಟಿನ್ ಅಮೆರಿಕದ ದೇಶಗಳಲ್ಲಿ ಸಂಭವಿಸುತ್ತಿರುವ ಬೆಳವಣಿಗೆಗಳನ್ನು ಗಮನಿಸಿದರೆ ಅಮೆರಿಕ ಹೇರಲು ಹೊರಟಿರುವ ಬಂಡವಾಳಶಾಹಿ ಮುಕ್ತ ಮಾರುಕಟ್ಟೆ ವ್ಯವಸ್ಥೆಗೆ ಪ್ರತಿಯಾಗಿ ಪರ್ಯಾಯ ವ್ಯವಸ್ಥೆ ಹೊರಹೊಮ್ಮುವ ಸಾಧ್ಯತೆಯ ಭರವಸೆ ಮೂಡುತ್ತದೆ. ಶ್ರೀಮಂತ, ಬಲಾಢ್ಯ ಅಮೆರಿಕದ ಹಿತ್ತಿಲೆಂದೇ ಪರಿಗಣಿತವಾಗಿದ್ದು, ಅದರ ನೆರಳಿನಲ್ಲೇ ಇರುವ ಈ ದೇಶಗಳು ಅದರಿಂದ ಕಳಚಿಕೊಳ್ಳಲು ಪ್ರಯತ್ನಿಸಿವೆ, ಪ್ರಯತ್ನಿಸುತ್ತಿವೆ. ನಮ್ಮ ಈ ಇಪ್ಪತ್ತೊಂದನೇ ಶತಮಾನದಲ್ಲಿ ಅವುಗಳ ಪ್ರಯತ್ನ ಸಫಲಗೊಂಡೀತೇನೊ. ವರ್ಲ್ಡ್ ಬ್ಯಾಂಕ್ ಮತ್ತು ಐಎಂಫ್‌ಗಳು ನೀಡಿದ ಸಾಲಗಳು ಹಾಗೂ ಮಾಡಿದ ಶಿಫಾರಸುಗಳನ್ನು ಅಂಗೀಕರಿಸಿದ ಈ ದೇಶಗಳು ಅದರಿಂದಾಗಿ ಸಾಕಷ್ಟು ಆರ್ಥಿಕ ಸಂಕಷ್ಟಗಳನ್ನು ಅನುಭವಿಸಿವೆ. ಬ್ರೆಜಿಲ್, ಅರ್ಜೆಂಟೈನಾಗಳ ನಿದರ್ಶನ ನಮ್ಮ ಮುಂದೆ ಇದೆ. ಅದೇನೇ ಇರಲಿ, ಈಚೆಗಿನ ಬೆಳವಣಿಗೆಗಳು ಅಮೆರಿಕದ ಆಡಳಿತಗಾರರ ನಿದ್ದೆಯನ್ನಂತೂ ಕೆಡಿಸಿವೆ.

ಹದಿಮೂರು ದೇಶಗಳನ್ನೊಳಗೊಂಡಿರುವ ದಕ್ಷಿಣ ಅಮೆರಿಕ ಈ ಧರೆಯಲ್ಲಿ ಅತ್ಯಂತ ಹೆಚ್ಚು ಬಗೆಯ ವನ್ಯಜೀವಿಗಳನ್ನೂ, ಸಸ್ಯಗಳನ್ನೂ ಹೊಂದಿರುವ ಖಂಡ. ಇವತ್ತಿಗೂ ದಟ್ಟವಾದ ಅರಣ್ಯಗಳಿಂದ ಕೂಡಿರುವ ಈ ಪ್ರದೇಶ ಪ್ರಪಂಚದಲ್ಲಿರುವ ಅನೇಕ ಬಗೆಯ ಸಸ್ಯಗಳಿಗೆ ತವರು. ಸುಮಾರು ೪೪,೦೦೦ ಬಗೆಯ ಸಸ್ಯಗಳೂ, ೨,೫೦೦ ಬಗೆಯ ಮೀನುಗಳೂ, ೧೫,೦೦೦ ಹಕ್ಕಿಪ್ರಭೇದಗಳೂ ಇಲ್ಲಿವೆ ಎಂದು ಅಂದಾಜು. ಫಲವತ್ತಾದ ಭೂಮಿಯನ್ನೂ ಅಪಾರವಾದ ನೈಸರ್ಗಿಕ ಸಂಪತ್ತನ್ನೂ ಹೊಂದಿದ್ದರೂ ಈ ಖಂಡದ ದೇಶಗಳು ಬಡತನದಲ್ಲೇ ಇವೆ. ಅಮೆರಿಕ ಹಾಗೂ ಐರೋಪ್ಯ ರಾಷ್ಟ್ರಗಳು ನೂರಾರು ವರ್ಷಗಳು ನಡೆಸಿರುವ ಶೋಷಣೆ ಮತ್ತು ಲೂಟಿಯೇ ಇದಕ್ಕೆ ಕಾರಣ. ಇಲ್ಲಿನ ದೇಶಗಳನ್ನು ವಸಾಹತಾಗಿಸಿಕೊಂಡು ಸಂಪತ್ತನ್ನು ಸೂರೆಮಾಡಲಾಗಿದೆ. ಈ ಭೂಭಾಗದ ಎಲ್ಲ ರಾಷ್ಟ್ರಗಳೂ ಸ್ವತಂತ್ರವಾಗಿದ್ದರೂ ಇನ್ನೂ ಅಮೆರಿಕದ ಬಹುರಾಷ್ಟ್ರೀಯ ಕಂಪನಿಗಳ ಶೋಷಣೆಗೀಡಾಗಿವೆ. ಅಮೆರಿಕದ ಕಪಿಮುಷ್ಟಿಯಿಂದ ಮುಕ್ತಗೊಳ್ಳಲು ಈ ದೇಶಗಳು ನಿರಂತರವಾಗಿ ಪ್ರಯತ್ನಿಸಿವೆ. ಆದರೆ ಸಫಲಗೊಂಡಿಲ್ಲ. ಅಂಥ ಪ್ರಯತ್ನಗಳನ್ನೂ ಅಮೆರಿಕ ತನ್ನ ಹಣಬಲ ಹಾಗೂ ತೋಳ್ಬಲದಿಂದ ಚಿವುಟಿಹಾಕಿದೆ. ಚಿಲಿ ದೇಶದ ಘಟನೆಗಳು ಅದಕ್ಕೆ ನಿದರ್ಶನ.

ಹಾಗಿದ್ದರೂ ಲ್ಯಾಟಿನ್ ಅಮೆರಿಕದ ಈ ದೇಶಗಳು ವಿಮೋಚನೆಯ ಹಾದಿಯಿಂದ ವಿಮುಖಗೊಂಡಿಲ್ಲ. ಅಮೆರಿಕದ ನೆರೆಯಲ್ಲಿಯೇ ಇದ್ದರೂ ಈ ರಾಷ್ಟ್ರಗಳು ಅಲಿಪ್ತ ಚಳುವಳಿಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದುದನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬಹುದು. ಪೆರು ರಾಷ್ಟ್ರದ ರಾಜಧಾನಿ ಲಿಮಾದಲ್ಲಿ ಅಲಿಪ್ತ ರಾಷ್ಟ್ರಗಳ ಶೃಂಗ ಸಮಾವೇಶ ಜರುಗಿತ್ತಲ್ಲದೆ ಆರ್ಥಿಕ ಸ್ವಾವಲಂಬನೆಗಾಗಿ ಆರ್ಥಿಕ ಸಹಕಾರದ ಕುರಿತ ನಿರ್ಣಯ ಅಂಗೀಕಾರವಾಗಿತ್ತು. ಈಗ ಹೊಸ ಶತಮಾನದಲ್ಲಿ ಈ ಭೂಭಾಗದ ದೇಶಗಳಲ್ಲಿ ಅಂಥ ಆರ್ಥಿಕ ಸಹಕಾರದತ್ತ ಪ್ರಯತ್ನ ನಡೆದಿದೆ. ಅದಲ್ಲದೆ ಎಡ ಪಕ್ಷಗಳತ್ತ ಒಲವಿನ ಅಲೆ ಬೀಸುತ್ತಿರುವುದೂ ಶುಭ ಸೂಚನೆ. ಇದೊಂದು ಐತಿಹಾಸಿಕ ಬೆಳವಣಿಗೆ.

ಈ ಇಡೀ ಭೂಭಾಗದಲ್ಲಿ ಅಮೆರಿಕವನ್ನೂ ದಿಟ್ಟತನದಿಂದ ಎದುರಿಸಿ ಸಮಾಜವಾದಿ ವ್ಯವಸ್ಥೆಯ ನಿರ್ಮಾಣದಲ್ಲಿ ತೊಡಗಿದ್ದ ಕ್ಯೂಬಾ ಏಕಾಂಗಿಯಾಗಿತ್ತು. ದಕ್ಷಿಣ ಅಮೆರಿಕದ ದೇಶಗಳ ಸ್ನೇಹ ಹಸ್ತ ಅದಕ್ಕೆ ಲಭಿಸುತ್ತಿದೆ. ವೆನಿಜುವೇಲದ ಅಧ್ಯಕ್ಷ ಹ್ಯೂಗೋ ಶವೇಜ಼್ ಕ್ಯೂಬಾದ ಫಿಡೆಲ್ ಕ್ಯಾಸ್ಟ್ರೋ ಜೊತೆ ಕೈಜೋಡಿಸಿದ್ದಾರೆ. ಎರಡೂ ದೇಶಗಳ ಮಧ್ಯೆ ಪರಸ್ಪರ ಸಹಕಾರ ಬೆಳೆಯುತ್ತಿದೆ. ಆರೋಗ್ಯ ಕ್ಷೇತ್ರದಲ್ಲಿ ಕ್ಯೂಬಾದ ಮಾದರಿ ಅಳವಡಿಸಿಕೊಂಡಿರುವ ವೆನಿಜುವೇಲಕ್ಕೆ ಕ್ಯೂಬಾದ ವೈದ್ಯರುಗಳು ಸಹಾಯ ಹಸ್ತ ಚಾಚಿದ್ದಾರೆ. ಈ ಮಾದರಿಯು ಈ ಪ್ರದೇಶದ ಇತರ ದೇಶಗಳಿಗೂ ಹರಡುತ್ತಿದೆ. ಉರುಗ್ವೆ ದಕ್ಷಿಣ

*೪೫ನೇ ಪುಟಕ್ಕೆ*

ಲ್ಯಾಟಿನ್ ಅಮೆರಿಕದ ದೇಶಗಳಲ್ಲಿ ಸಂಭವಿಸುತ್ತಿರುವ ಬೆಳವಣಿಗೆಗಳನ್ನು ಗಮನಿಸಿದರೆ ಅಮೆರಿಕ ಹೇರಲು ಹೊರಟಿರುವ ಬಂಡವಾಳಶಾಹಿ ಮುಕ್ತಮಾರುಕಟ್ಟೆ ವ್ಯವಸ್ಥೆಗೆ ಪ್ರತಿಯಾಗಿ ಪರ್ಯಾಯ ವ್ಯವಸ್ಥೆ ಹೊರಹೊಮ್ಮುವ ಸಾಧ್ಯತೆಯ ಭರವಸೆ ಮೂಡುತ್ತದೆ. ಶ್ರೀಮಂತ, ಬಲಾಢ್ಯ ಅಮೆರಿಕದ ಹಿತ್ತಿಲೆಂದೇ ಪರಿಗಣಿತವಾಗಿದ್ದು, ಅದರ ನೆರಳಿನಲ್ಲೇ ಇರುವ ಈ ದೇಶಗಳು ಅದರಿಂದ ಕಳಚಿಕೊಳ್ಳಲು ಪ್ರಯತ್ನಿಸಿವೆ, ಪ್ರಯತ್ನಿಸುತ್ತಿವೆ.

# ಅಂಗವಿಕಲರಿಗೆ ಪರಿಹಾರ

ಡಾ|| ಎಸ್. ಎಸ್. ಪಾಟೀಲ

**ಅಂ**ಗವಿಕಲತೆ ಒಂದು ಶಾಪ. ಅದು ವ್ಯಕ್ತಿ ವಿಕಾಸಕ್ಕೆ ಮತ್ತು ದೇಶದ ಆರ್ಥಿಕ ಅಭಿವೃದ್ಧಿಗೆ ಅಡ್ಡಿಯುಂಟುಮಾಡುತ್ತದೆ. ದೇವರು, ಧರ್ಮ, ಕರ್ಮಗಳ ಬಗ್ಗೆ ನಂಬಿಕೆಯಿದೆ ಎಂದಾಗ 'ಶಾಪ' ಶಬ್ದದ ಬಳಕೆಗೆ ಅರ್ಥವಿಲ್ಲ. ಅಂಗವಿಕಲನಾಗಿಯೂ, ಮಾನಸಿಕ ಸ್ವಾಸ್ಥ್ಯ ಪ್ರಬಲವಾಗಿದ್ದರೆ ವಿಶ್ವವಿಖ್ಯಾತ ಭೌತವಿಜ್ಞಾನಿ ಸ್ಟೀಫನ್ ಹಾಕಿಂಗನಂತೆ ಅತ್ಯುನ್ನತ ವಾದದ್ದನ್ನು ಸಾಧಿಸಬಹುದು. ಬಹುತೇಕ ಎಲ್ಲ ಅಂಗವಿಕಲರಿಗೂ ದೈಹಿಕ ನ್ಯೂನತೆಯಿಂದಾಗಿ ಸಮ ವಯಸ್ಸಿನ ಹಾಗೂ ಬೌದ್ಧಿಕಮಟ್ಟದ ಆರೋಗ್ಯವಂತ ರಂತೆ ದುಡಿಯುವುದಾಗಲಿ ಪೈಪೋಟಿ ನಡೆಸುವು ದಾಗಲಿ ಕಷ್ಟಸಾಧ್ಯವಾಗುತ್ತದೆ. ತಾವೇ ದುಡಿದು ಬದುಕಲು ಹೆಣಗಾಡಬೇಕಾಗುತ್ತದೆ. ವಿಕಲಾಂಗರಿಗೆ ಸಮಾಜದಲ್ಲಿ ಸಿಗಬೇಕಾದ ಸ್ಥಾನ, ಗೌರವ ಸಿಗುತ್ತಿಲ್ಲ ವೆನ್ನುವ ಕೀಳರಿಮೆ ಇರುವುದು ಸಹಜ. ತಾನು ತನಗೆ, ತನ್ನವರಿಗೆ, ಸಮಾಜಕ್ಕೆ, ದೇಶಕ್ಕೆ ಹಾಗೂ ಭೂಮಿಗೆ ಭಾರ ಎನ್ನುವ ಭಾವನೆ ವಿಕಲಾಂಗರಲ್ಲಿ ಕಂಡುಬಂದರೆ



ಆಶ್ಚರ್ಯವಲ್ಲ, ಹೀಗಾಗಿಯೇ ಅಂಗವಿಕಲತೆ ಒಂದು ಶಾಪ ಎಂದಿದ್ದು.

ಶರೀರದ ನ್ಯೂನತೆ ಅಂಗವಿಕಲತೆಯುಂಟು ಮಾಡಿದರೆ ಮಿದುಳಿನ ಊನ ಮಾನಸಿಕ ಮತ್ತು ಬೌದ್ಧಿಕ ವಿಕಲತೆಗಳನ್ನುಂಟುಮಾಡುತ್ತದೆ. ವಿಕಲತೆಯಲ್ಲಿ ಸಹಜ ರೂಪ, ಸಹಜ ಸ್ವಭಾವಗಳಲ್ಲಿ ವ್ಯತ್ಯಾಸವಿದೆ. ವಿಕಲತೆಗೆ ಅನೇಕ ಕಾರಣಗಳಿವೆ. ಗರ್ಭಪಿಂಡದಲ್ಲೇ ವಿಕಲತೆ ಅಂಕುರಿಸಬಹುದು. ವರ್ಣತಂತುಗಳ ನ್ಯೂನತೆ (cromosomal defect) ವಿಕಲತೆಗೆ ಹಾದಿ ಮಾಡಿಕೊಡುತ್ತದೆ. ಸಮೀಪದ ಸಂಬಂಧಿಗಳ ನಡುವಿನ ವಿವಾಹದಿಂದ ಜನಿಸುವ ಮಕ್ಕಳಲ್ಲಿ ವಿಕಲತೆ ಸಂಭವಿಸುವ ಸಾಧ್ಯತೆಗಳು ಹೆಚ್ಚು ಪ್ರಮಾಣದಲ್ಲಿರು ವುದನ್ನು ಗುರುತಿಸಲಾಗಿದೆ. ಹೆರಿಗೆ ಸಂದರ್ಭದಲ್ಲಿ ತಲೆಗೆ ಪೆಟ್ಟಾಗಿ ಮಗು 'ಬುದ್ಧಿಮಾಂದ್ಯ'ವಾಗಬಹುದು. ಅನೇಕ ಸೋಂಕುರೋಗಗಳು ವಿಕಲತೆಯುಂಟುಮಾಡುತ್ತವೆ. ಅವುಗಳಲ್ಲಿ ಪೋಲಿಯೋ ಪ್ರಮುಖವಾದದ್ದು. ಕುಷ್ಠ ರೋಗದ ಕೊನೆಯ ಹಂತ ವಿಕಲತೆಯಲ್ಲೇ ಕೊನೆಗೊಳ್ಳುತ್ತದೆ. ಸ್ನಾಯು ದುರ್ಬಲಗೊಳಿಸುವ ರೋಗಗಳು ವಿಕಲತೆಗಳನ್ನುಂಟುಮಾಡುತ್ತವೆ. ಹೆಚ್ಚಿದ ರಕ್ತದೊತ್ತಡ, ಪಾರ್ಶ್ವವಾಯುವಿಗೆ ಕಾರಣವಾಗಬಹುದು. ಆಹಾರದ ಕೊರತೆ, ಪೌಷ್ಟಿಕಾಂಶಗಳ ಕೊರತೆ, ಜೀವಸತ್ವಗಳ ಕೊರತೆ ಆವರಿಸಿ ಮಗು ವಿಕಲತೆಗೆ ಗುರಿಯಾಗಬಹುದು. ನೀರಿನಲ್ಲಿರುವ ಫ್ಲೋರಿನ್ ಅಂಶವೂ ವಿಕಲತೆಗೆ ಕಾರಣವಾಗುತ್ತದೆ. ಕ್ಯಾನ್ಸರ್‌ನಂತಹ ಅಪಾಯಕಾರಿ ರೋಗದಲ್ಲಿ ಮತ್ತು ರಕ್ತನಾಳ ಸಂಕುಚನಗೊಳ್ಳುವ ಕಾಯಿಲೆಗಳಲ್ಲಿ ಅಂಗಭಾಗ ಕಳೆದುಕೊಳ್ಳಬಹುದು. ಇಂದಿನ ವೈಜ್ಞಾನಿಕ ಯುಗದಲ್ಲಿ ಕೈಗಾರಿಕಾ ಅಪಘಾತಗಳು, ರಸ್ತೆಯಲ್ಲಿ ವಾಹನ ಅಪಘಾತಗಳು ಹೆಚ್ಚಾಗಿ ಅಂಗವಿಕಲರ ಸಂಖ್ಯೆ ಬೆಳೆಯುತ್ತಿದೆ. ಹೀಗೆ ವಿಕಲತೆಗೆ ಅನೇಕಾನೇಕ ಕಾರಣಗಳಿವೆ.

ಕೈಕಾಲುಗಳ ಊನವಿರುವವರು, ದೃಷ್ಟಿದೋಷವಿರುವವರು, ಮೂಕರು, ಕಿವುಡರು, ಬುದ್ಧಿಮಾಂದ್ಯರು ಮತ್ತು ಮಾನಸಿಕ ಅಸ್ವಸ್ಥರು ಎಲ್ಲರೂ ವಿಕಲತೆಯ ಭಾಗಿದಾರರಾಗುತ್ತಾರೆ.

ಅಭಿವೃದ್ಧಿ ಹೊಂದಿದ ರಾಷ್ಟ್ರಗಳಲ್ಲಿ ವಿಕಲತೆಯ ಪ್ರಮಾಣ ಹೆಚ್ಚಿಲ್ಲ. ಅಲ್ಲಿ ವಿಕಲಾಂಗರಿಗೆ ಸಕಲ ಸೌಕರ್ಯಗಳು ಸಿಗುತ್ತವೆ. ಸಮಾಜ, ಸರಕಾರ ವಿಕಲಾಂಗರಿಗೆ ಎಲ್ಲ ತರಹದ ಸಹಾಯ ಸಹಕಾರ ನೀಡುತ್ತವೆ. ಭಾರತದಂತಹ ಬಡ ಹಾಗೂ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ವಿಕಲತೆ ಒಂದು ದೊಡ್ಡ ಸಮಸ್ಯೆಯೆನಿಸಿದೆ. ವಿಕಲರು ಸೌಲಭ್ಯಗಳಿಂದ ವಂಚಿತರಾಗಿದ್ದಾರೆ. ವಿಕಲತೆಗೆ ಕಾರಣವಾಗಿರುವ ಪೋಲಿಯೋ, ಕುಷ್ಠಗಳಂತಹ ಸೋಂಕುರೋಗಗಳನ್ನು ನಿಯಂತ್ರಿಸಲು, ಸರಕಾರ ಹಲವಾರು ಯೋಜನೆಗಳನ್ನು ಹಮ್ಮಿಕೊಂಡಿದೆ. ಕೇವಲ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರಿಂದ ಏನನ್ನೂ ಸಾಧಿಸಲಾಗದು. ಈ ನಿಟ್ಟಿನಲ್ಲಿ ವಿಕಲಾಂಗರು, ಸಮಾಜ ಸೇವಕರು, ಸಕ್ರಿಯವಾಗಿ ಕೆಲಸದಲ್ಲಿ ತೊಡಗಿಕೊಂಡರೆ ಪರಿಸ್ಥಿತಿ ಉತ್ತಮಗೊಳ್ಳುತ್ತದೆ.

ಒಂದು ಅಂದಾಜಿನ ಪ್ರಕಾರ ನಮ್ಮ ರಾಜ್ಯದಲ್ಲಿ ಸುಮಾರು ಐದು ಲಕ್ಷಕ್ಕೂ ಹೆಚ್ಚು ವಿಕಲಾಂಗರಿದ್ದಾರೆ. ೨೦೦೧ರ ಗಣತಿಯ ಪ್ರಕಾರ ಗುಲಬರ್ಗಾ ಜಿಲ್ಲೆಯೊಂದರಲ್ಲೇ ೩೦,೬೫೦ ಅಂಗವಿಕಲರಿರುವರೆಂದು ತಿಳಿದುಬಂದಿದೆ. ನಮ್ಮಲ್ಲಿ ವಿಕಲಾಂಗರ ಸಂಖ್ಯೆ ನಿಖರವಾಗಿ ದೊರಕದಿದ್ದರೂ ಈಗ ಲಭ್ಯವಿರುವ ವ್ಯಾವಹಾರಿಕ ಅಂಕಿ ಅಂಶಗಳು ತಿಳಿಸುವಂತೆ ಅವರ ಸಂಖ್ಯೆ ಇನ್ನೂ ಹೆಚ್ಚು ಇರುವಂತಿದೆ. ವಿಕಲಾಂಗರಿಗೆ ಮಾಸಿಕ ಪರಿಹಾರಧನ (ಮಾಸಾಶನ) ಸರಕಾರ ನೀಡುವ ಯೋಜನೆ ಇದೆ. ಪರಿಹಾರಧನ ಪಡೆಯಲು ಪ್ರಮಾಣಪತ್ರ ನೀಡಬೇಕಾಗುತ್ತದೆ. ಅದಕ್ಕಾಗಿ ಸರಕಾರಿ ವೈದ್ಯರಲ್ಲಿಗೆ ಹೋಗಬೇಕಾಗುತ್ತದೆ. ಈ ಮೊದಲಿಗೆ ಯಾವ ಆಸ್ಪತ್ರೆಯಿಂದ ಯಾವ ವೈದ್ಯ ಎಷ್ಟು ಜನರಿಗೆ ಪ್ರಮಾಣಪತ್ರ ನೀಡುತ್ತಿದ್ದಾರೆನ್ನುವುದು ಗೊತ್ತಾಗುತ್ತಿರಲಿಲ್ಲ. ಈ ಬಗ್ಗೆ ಸಾಕಷ್ಟು ಅವ್ಯವಹಾರಗಳು ಜರುಗಿವೆ. ಇದನ್ನು ನಿವಾರಿಸಲು ವೈದ್ಯಕೀಯ ಮಂಡಳಿಯಿಂದ ಪಡೆಯುವ ಪ್ರಮಾಣಪತ್ರವನ್ನು ಮಾತ್ರ ಮಾನ್ಯಮಾಡಲಾಗುತ್ತದೆ. ಅಲ್ಲದೆ ಹಲವಾರು ನೀತಿನಿಯಮಗಳನ್ನು ರೂಪಿಸಲಾಗಿದೆ.

ಸರಕಾರವು ಅಂಗವಿಕಲರಿಗಾಗಿ ಈ ಕೆಳಗಿನ ಕೆಲವು ಸೌಲಭ್ಯಗಳನ್ನು ಕಲ್ಪಿಸಿದೆ :

೧) ಬಡ ಅಂಗವಿಕಲರಿಗೆ ಮಾಸಾಶನ (ಪರಿಹಾರಧನ)
೨) ವಿದ್ಯಾರ್ಥಿ ವೇತನ
೩) ವೃತ್ತಿಶಿಕ್ಷಣ ಪ್ರವೇಶಾವಕಾಶ
೪) ಉದ್ಯೋಗಗಳಲ್ಲಿ ಶೇಕಡಾ ೩ರಷ್ಟು ಮೀಸಲಾತಿ
೫) ಕೃತಕಾಂಗ/ಬಗಲಬಡಿಗೆ/ಗಾಲಿಕುರ್ಚಿ/ಕ್ಯಾಲಿಪರ್/ತ್ರಿಚಕ್ರವಾಹನ ಸೌಕರ್ಯಗಳು
೬) ರಸ್ತೆ, ರೈಲು, ವಿಮಾನ ಪ್ರಯಾಣದಲ್ಲಿ ರಿಯಾಯಿತಿ
೭) ನೌಕರರಿಗೆ ವಾಹನ ಭತ್ಯೆ
೮) ವ್ಯಾಪಾರ ಆದಾಯದ ಸುಂಕದಲ್ಲಿ ವಿನಾಯತಿ

**ಅಭಿವೃದ್ಧಿ ಹೊಂದಿದ ರಾಷ್ಟ್ರಗಳಲ್ಲಿ ವಿಕಲತೆಯ ಪ್ರಮಾಣ ಹೆಚ್ಚಿಲ್ಲ. ಅಲ್ಲಿ ವಿಕಲಾಂಗರಿಗೆ ಸಕಲ ಸೌಕರ್ಯಗಳು ಸಿಗುತ್ತವೆ. ಸಮಾಜ, ಸರಕಾರ ವಿಕಲಾಂಗರಿಗೆ ಎಲ್ಲ ತರಹದ ಸಹಾಯ ಸಹಕಾರ ನೀಡುತ್ತವೆ. ಭಾರತದಂತಹ ಬಡ ಹಾಗೂ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ, ವಿಕಲತೆ ಒಂದು ದೊಡ್ಡ ಸಮಸ್ಯೆಯೆನಿಸಿದೆ. ವಿಕಲರು ಸೌಲಭ್ಯಗಳಿಂದ ವಂಚಿತರಾಗಿದ್ದಾರೆ.**

೯) ವಯಸ್ಸಿನ ಮಿತಿಯ ಸಡಿಲಿಕೆ
೧೦) ಆದಾಯ ತೆರಿಗೆಯ ರಿಯಾಯಿತಿ
೧೧) ಅಪಘಾತ (ರಸ್ತೆ, ಕೈಗಾರಿಕಾ)ಗಳಿಂದ ಇಲ್ಲವೆ ವೈದ್ಯಕೀಯ ನಿರ್ಲಕ್ಷ್ಯದಿಂದ ಸಂಭವಿಸಿದ ವಿಕಲತೆಗಳಿಗೆ ಪರಿಹಾರ, ಮುಂತಾದವು.

ಭಾರತೀಯ ವೈದ್ಯಕೀಯ ಮಂಡಳಿಯಲ್ಲಿ ನೋಂದಾಯಿಸಿದ ಪ್ರತಿಯೊಬ್ಬ ವೈದ್ಯನಿಗೆ ತಾನು ಚಿಕಿತ್ಸೆ ನೀಡಿದ, ಪರೀಕ್ಷೆ ಮಾಡಿದ ವ್ಯಕ್ತಿಗೆ ವಿಕಲತೆ ತಿಳಿಸುವ ಪ್ರಮಾಣಪತ್ರ ನೀಡುವ ಹಕ್ಕು ಇದೆ. ಕೇಂದ್ರ ಸರಕಾರ/ರಾಜ್ಯ ಸರಕಾರ ನಿಯಮಿಸಿದ ವೈದ್ಯಕೀಯ ಮಂಡಳಿಯಿಂದ ಪಡೆದ ಅಂಗವಿಕಲ ಪ್ರಮಾಣಪತ್ರವನ್ನು ಮಾನ್ಯಮಾಡಲಾಗುತ್ತದೆ. ಅಂಗವಿಕಲರು ಸಲ್ಲಿಸುವ ತಕರಾರುಗಳ ವಿಚಾರಣೆಗಾಗಿ ಮಂಡಳಿಯೊಂದಿದೆ. ಭಾರತ ಸರಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಮುಖ್ಯಸ್ಥರಾದ 'ಡೈರೆಕ್ಟರ್ ಜನರಲ್ ಆಫ್ ಹೆಲ್ತ್'ರವರು ತಕರಾರು ಪರಿಹರಿಸುವ ಅಂತಿಮ ಮತ್ತು ಅತ್ಯುನ್ನತ ಅಧಿಕಾರಿಯಾಗಿರುತ್ತಾರೆ.

**ವಿಕಲತೆ/ದೌರ್ಬಲ್ಯ ಗುರುತಿಸುವ ವಿಧಾನ**

ಅಂಗವಿಕಲತೆಯ ಪ್ರಮಾಣ ಕಂಡುಕೊಳ್ಳುವುದು ಅಗತ್ಯ. ವಿಕಲತೆಯ ಮಟ್ಟಕ್ಕೆ ತಕ್ಕಂತೆ ವ್ಯಕ್ತಿಯ ಲಿಂಗ, ವಯಸ್ಸು, ಕೌಟುಂಬಿಕ ಹಿನ್ನೆಲೆ ಹಾಗೂ ಆತನ ಆದಾಯಕ್ಕೆ ಅನುಗುಣವಾಗಿ ಪರಿಹಾರ ಸೂಚಿಸಲು ಅನುಕೂಲವಾಗುತ್ತದೆ. ವಿಕಲತೆಯ ಪ್ರಮಾಣ ಖಚಿತವಾಗಿ ಪ್ರಮಾಣೀಕರಿಸುವುದು ಸರಳ ಸುಲಭವಲ್ಲ. ಅನೇಕ ಮಾರ್ಗಸೂಚಿಗಳು ವಿವಿಧ ಸೂಕ್ತಸಲಹೆಗಳನ್ನು ಅನುಸರಿಸಬೇಕಾಗುತ್ತದೆ. ಇದರಿಂದಾಗಿ ಒಬ್ಬ ವೈದ್ಯ ಪ್ರಮಾಣೀಕರಿಸಿದ ವಿಕಲತೆ ಇನ್ನೊಬ್ಬ ವೈದ್ಯ ನೀಡುವ ಅಭಿಪ್ರಾಯಕ್ಕಿಂತ ಭಿನ್ನವಾಗಿರಲು ಸಾಧ್ಯವಿದೆ. ಸಧ್ಯಕ್ಕೆ ಬಳಕೆಯಲ್ಲಿರುವ ಕೆಲವು ಮಾರ್ಗಸೂಚಿಗಳು ಹೀಗಿವೆ :

**೧) ಪರಿಷ್ಕರಿಸಿದ ಕೆಸ್ಲರನ ವಿಧಾನ (Modified Kessler's Method). ವಿಕಲತೆಯ ಪ್ರಮಾಣ ತಿಳಿಯಲು ಮೂರು ಪರೀಕ್ಷೆಗಳಿವೆ.**

(ಅ) ಕೀಲುಗಳ ಚಲನೆ (ಆ) ಸ್ನಾಯುಗಳ ಬಲ (ಇ) ಅಂಗಭಾಗಗಳ ಕ್ರಿಯೆಯ ಅನ್ಯೋನ್ಯತೆ.

ಮೇಲ್ಭಾಗದ ಚಲನಾಂಗಗಳಲ್ಲಿ ತೋಳು, ಮುಂಗೈ ಮತ್ತು ಹಸ್ತವೆಂದು ಮೂರು ಭಾಗಗಳಲ್ಲಿ ವಿಂಗಡಿಸಿ ಮುಂಗೈ ಕೀಲು, ಮೊಳಕೈ ಕೀಲು ಹಾಗೂ ಭುಜದ ಕೀಲಿನ ಚಲನೆ ಪರೀಕ್ಷಿಸುತ್ತಾರೆ. ಇದೇ ರೀತಿಯಲ್ಲಿ ಕೆಳ ಚಲನಾಂಗದಲ್ಲಿ ತೊಡೆ, ಮುಂಗಾಲು, ಪಾದವೆಂದು ಮೂರು ಭಾಗಗಳಾಗಿ ವಿಂಗಡಿಸಿ ಮುಂಗಾಲು ಕೀಲು, ಮಂಡಿ ಮತ್ತು ಚಪ್ಪೆ ಕೀಲಿನ ಚಲನೆ ಪರೀಕ್ಷಿಸುತ್ತಾರೆ. ಚಲನೆಯಲ್ಲಿಯ ಅಸಹಜತೆ ಗುರುತಿಸುತ್ತಾರೆ.

ಕೀಲುಗಳನ್ನು ಮಡಚುವ, ಚಾಚುವ, ತಿರುಗಿಸುವ ಸ್ನಾಯುಗಳ ಬಲ ಪರೀಕ್ಷಿಸಿ ಅವುಗಳ ನ್ಯೂನತೆ ಕಂಡುಕೊಳ್ಳುತ್ತಾರೆ.

ಹಿಡಿಯುವ, ಜಗ್ಗುವ, ಚಿವುಟುವ ಕೈಬೆರಳುಗಳ ಕ್ರಿಯೆಯನ್ನು ಅವಲೋಕಿಸಿ ಕಂಡುಬರುವ ಲೋಪ ತಿಳಿಯುತ್ತಾರೆ. ಒಂದು ಅಂಗಭಾಗ ಇನ್ನೊಂದು ಅಂಗಭಾಗದೊಡನೆ ಅನ್ಯೋನ್ಯತೆಯಿಂದ ಕಾರ್ಯ ನಿರ್ವಹಿಸುವುದನ್ನು (ಉದಾಹರಣೆ : ತೋರುಬೆರಳು ತುದಿಯಿಂದ ಮೂಗಿನ ತುದಿ ಮುಟ್ಟುವುದು) ಪರೀಕ್ಷಿಸುತ್ತಾರೆ.

ಹೀಗೆ ಪರೀಕ್ಷಿಸಿ ಫಲಿತಾಂಶಗಳನ್ನು ಒಂದು ಸೂತ್ರದಂತೆ ಮೌಲ್ಯಮಾಪನ ಮಾಡಿ ದೌರ್ಬಲ್ಯದ ಪ್ರಮಾಣ ಕಂಡುಹಿಡಿಯುತ್ತಾರೆ.

**೨) ಮ್ಯಾಕ್‌ಬ್ರೈಡ್ ಸೂತ್ರ (Mcbride Formula) :** ಈ ಪದ್ಧತಿಯಲ್ಲಿ ದೈಹಿಕ ಅಸಮಾನತೆ, ಕಾರ್ಯ ಚಟುವಟಿಕೆಗಳ ನ್ಯೂನತೆ ಮತ್ತು ಕೈಗೊಂಡ ವೃತ್ತಿಯಲ್ಲಿ ಉಂಟಾಗುವ ದೌರ್ಬಲ್ಯಗಳನ್ನು ಗುರುತಿಸಿ ವಿಕಲನು ಅನುಭವಿಸಬಹುದಾದ ಆರ್ಥಿಕ ಹಾನಿಯ ಲೆಕ್ಕಹಾಕುತ್ತಾರೆ.

**೩) ಹ್ಯೂ ಸ್ಮಿತ್‌ನ ಅಂದಾಜಿನ ಅಳತೆ (Hugh Smith's Rule of Thumb) :** ದೈಹಿಕ ನ್ಯೂನತೆಯನ್ನು ಅಳತೆಗೋಲಾಗಿಟ್ಟುಕೊಂಡು ವಿಕಲಾಂಗನ ದೌರ್ಬಲ್ಯದ ಪ್ರಮಾಣ ಕಂಡುಹಿಡಿಯುತ್ತಾರೆ. ಮೇಲ್ಭಾಗದ ಚಲನಾಂಗಗಳಲ್ಲಿ ಪ್ರತಿಯೊಂದು ಭಾಗದ ನ್ಯೂನತೆ ಗುರುತಿಸುತ್ತಾರೆ. ಕೆಳ ಚಲನಾಂಗದಲ್ಲಿ ಪಾದ, ಮುಂಗಾಲು, ಕೀಲು ಮಂಡಿ ಮತ್ತು ಚಪ್ಪೆಯೆಂದು ನಾಲ್ಕು ಭಾಗಗಳಲ್ಲಿ ಗುರುತಿಸಿ ಅವುಗಳಲ್ಲಿನ ನ್ಯೂನತೆಯನ್ನು ಪರೀಕ್ಷಿಸುತ್ತಾರೆ.

ಅಮೆರಿಕದ ಅಸ್ಥಿತಜ್ಞರ ಮಂಡಳಿ (American Academy of Orthopaedic Surgeons)ಯ ಸಲಹೆಯ ಮೇರೆಗೆ ಶಾಶ್ವತ ಅಂಗವಿಕಲತೆ ಅಳೆಯುವ ಮಾರ್ಗಸೂಚಿಯೊಂದು ಪ್ರಕಟಗೊಂಡಿದೆ. ಅಂಗ ಕಿರಿದಾಗಿದ್ದು, ಸೊರಗಿದ್ದು, ಕೀಲುಚಲನೆ ಸ್ಥಗಿತ ಇಲ್ಲವೆ ಮೊಟಕುಗೊಂಡಿದ್ದುದನ್ನು ಪರಿಗಣಿಸಿ ಆಯಾ ಅಂಗಭಾಗದಲ್ಲಿ ಎಷ್ಟು ಪ್ರಮಾಣದ ವಿಕಲತೆಯುಂಟಾಗಿದೆ ಎನ್ನುವುದನ್ನು ಈ ಮಾರ್ಗಸೂಚಿ ತಿಳಿಸುತ್ತದೆ. ಕೈಗೆ, ಕೈಬೆರಳುಗಳಿಗೆ ಇಷ್ಟಿಷ್ಟು ಪ್ರತಿಶತವೆಂದು, ಅವುಗಳಲ್ಲಿ ಕಾಣುವ ನ್ಯೂನತೆ ಇಂತಿಷ್ಟು ವಿಕಲತೆ ಮಾಡುವದೆಂದು ಸೂಚಿಸುವುದನ್ನು ಇಲ್ಲಿ ಕಾಣಬಹುದು.

ಭಾರತ ಸರಕಾರವು ೧೯೮೬ರಲ್ಲಿ ವಿಕಲತೆ

## ಸೀರೆಯೆಂದರೆ...



ತೆಕ್ಕೆ ಬಳಸಿ ತೊಡೆಯೇರಿಸಿ
ತಟ್ಟಿ ಮಲಗಿಸುವ ಅಮ್ಮನ
ಬೆಚ್ಚನೆಯ ತೇಪೆ ಹಚ್ಚಿದ
ಸೀರೆಯೆಂದರೆ ತುಂಬ ಇಷ್ಟ ಆಗ.

ಓದುತ್ತ ಬೆಳೆದಂತೆ
ಕಾವ್ಯಕ್ಕೆ ಕಾರಣವಾದ
ಸೆರಗ ಸೆಳೆದ ದುಶ್ಶಾಸನರುಗಳಿಗೆ
ಮಣ್ಣು ಮುಕ್ಕಿಸಿದ ಬೆಂಕಿಯ
ಕೆಂಡದಂತಹ ದ್ರೌಪದಿಯ
ಸೆರಗೆಂದರೆ ಎಲ್ಲಿಲ್ಲದ ಅಭಿಮಾನ.

ಮೈ ಅರಳಿ ನಿಂತಾಗ
ಬೆಕ್ಕಿನ ನಡಿಗೆಗೂ ಮೈಸುತ್ತಿಕೊಳ್ಳುವ
ಗುಡ್ಡ ಕಣಿವೆ ಮೈದಾನಗಳನೆಲ್ಲ
ಮಾಟವಾಗಿ ಬಿಂಬಿಸುವ
ಸೀರೆಯೆಂದರೆ ಹುಚ್ಚು ವ್ಯಾಮೋಹ.

ಹಿಡಿಯ ಹೊರಟರೆ
ಪಕ್ಕನೆ ಹಾರಿ ಗಾಳಿಯಲ್ಲಿ ಬಿಚ್ಚಿಕೊಳ್ಳುವ
ಅಂಚು ಸೆರಗಿನ ತುಂಬೆಲ್ಲ ಕಂಡಿದ್ದು
ಬಣ್ಣ ಬಣ್ಣದ ಹೂಬಳ್ಳಿಗಳು ಮಾತ್ರ.

ಬಿಸಿಲಲ್ಲಿ ಮೆರೆದಾಡಿ
ಸಂಜೆ ಕಂತಿದ ಮೇಲೆ
ಕಳ್ಳ ಹೆಜ್ಜೆಯನಿಟ್ಟು ಸೆರಗ ಜೋತು
ಹಸಿದ ಹೊಟ್ಟೆಯ ತಿಕ್ಕುವಾಗ
ತಿಂಗಳ ಕೊನೆಯ ಡಬ್ಬಿಗಳ
ತೆರೆಯಲಾರದೆ ಮಾತ ಮರೆಯಿಸಿ

ಜಾರುವ ಈ ಸೀರೆ
ಒಪ್ಪವಾಗಿ ಹೆಣ್ಣಿನ ಮೈಮೇಲೆ ನಿಲ್ಲಲು
ಅಲ್ಲಲ್ಲಿ ಪಿನ್ನಿನ ಅವಶ್ಯಕತೆಯಿದೆಯೆಂದು
ನನಗೆ ತಿಳಿದದ್ದು
ಮುಂದೆ ನಾನೊಂದು ದಿನ
ಸೀರೆ ಉಟ್ಟು ನಿಂತಾಗಲೆ.

ಮಾಧವಿ ಭಂಡಾರಿ ಕೆರೆಕೋಣ
ಅರೇಅಂಗಡಿ ಅಂಚೆ, ಹೊನ್ನಾವರ ತಾಲ್ಲೂಕು, ಉತ್ತರ ಕನ್ನಡ - ೫೮೧ ೪೩೦

ಪರೀಕ್ಷಿಸಲು ಮಾರ್ಗಸೂಚಿಯೊಂದನ್ನು ಪ್ರಕಟಿಸಿತು. ಇದು ನಂತರದಲ್ಲಿ ಅನೇಕ ತಿದ್ದುಪಡಿಗಳನ್ನು ಕಂಡಿದೆ. ಸರಕಾರ ೧.೭.೨೦೦೧ರಂದು ಹೊಸ ಮಾರ್ಗಸೂಚಿ ಪ್ರಕಟಿಸಿದೆ. ಈ ಮಾರ್ಗಸೂಚಿಯಲ್ಲಿ ಸೂಕ್ತ ವಿಕಲತೆಯ ಪ್ರಮಾಣ ಕಂಡುಹಿಡಿಯಲು ಅನುಸರಿಸ ಬೇಕಾದ ಮಾರ್ಗ ಸ್ಪಷ್ಟವಾಗಿ ನಮೂದಿಸಿದೆ. ಇದರಲ್ಲಿ 'ವಿಕಲತೆ' 'ದೌರ್ಬಲ್ಯ' ಗಳೆಂದರೇನೆಂದು ತಿಳಿಸಿದೆ.

ವಿಕಲತೆಯಿಂದ ದೌರ್ಬಲ್ಯ ಉಂಟಾಗುತ್ತದೆ. ಎಲ್ಲ ವಿಕಲತೆಗಳು ದೌರ್ಬಲ್ಯ ಉಂಟುಮಾಡುತ್ತವೆ ಎಂದೇನಿಲ್ಲ. ವಿಕಲತೆಯ ಪ್ರಮಾಣಕ್ಕೂ ದೌರ್ಬಲ್ಯದ ಮಿತಿಗೂ ಅನ್ಯೋನ್ಯ ಸಂಬಂಧವಿದ್ದರೂ ಅಪರೂಪಕ್ಕೆ ಒಮ್ಮೆ ಇದು ಅಪವಾದವಾಗಲೂಬಹುದು. ಸುಟ್ಟ ಗಾಯದಿಂದ ಮುಖ ವಿಕಲಗೊಂಡ ವ್ಯಕ್ತಿ ದೈಹಿಕ, ಬೌದ್ಧಿಕ ಸ್ತರಗಳಲ್ಲಿ ನ್ಯೂನತೆ ಹೊಂದದಿದ್ದರೂ ಮಾನಸಿಕ ವಿಕಲತೆ ಹೊಂದಬಹುದು. ಕಾಲು ಕಳೆದುಕೊಂಡ ವ್ಯಕ್ತಿ ದೈಹಿಕ ನ್ಯೂನತೆ ಹೊಂದಿರುತ್ತಾನೆ. ಆದರೆ ಆತ ಮೊದಲಿನಂತೆ ತನ್ನ ಕಛೇರಿಯ ಕೆಲಸಗಳನ್ನು ಅದೇ ಸಾಮರ್ಥ್ಯದಿಂದ ಮಾಡುವಂತೆ ಇರುತ್ತಾನೆ. ಆದರೆ ಆತ ತನ್ನ ಸ್ವಂತದ ಕೆಲಸಗಳನ್ನು ಮಾಡಿಕೊಳ್ಳುವಲ್ಲಿ (ಕೂಡುವುದು, ಏಳುವುದು, ಓಡುವುದು, ಆಟ ಆಡುವುದು) ಮತ್ತು ಸಾಮಾಜಿಕ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಭಾಗವಹಿಸಲು ಪರದಾಡಬೇಕಾಗುತ್ತದೆ. ಅಲ್ಲದೆ, ಮಾನಸಿಕ ಹಿಂಸೆಗೆ ಒಳಗಾಗುತ್ತಾನೆ. ಇಂತಹವರು ತಮ್ಮ ವಿಕಲತೆ/ದೌರ್ಬಲ್ಯದ ಪ್ರಮಾಣಕ್ಕಿಂತ ಹೆಚ್ಚಿನ ಪರಿಹಾರಕ್ಕೆ ಅರ್ಹರಾಗಿರುತ್ತಾರೆ. ವಿಕಲಾಂಗ ಶಾಶ್ವತ ದೌರ್ಬಲ್ಯಕ್ಕೊಳಗಾಗಿದ್ದರೆ ಅಂಥವರು ಪೂರ್ಣ ಪ್ರಮಾಣದ ಪರಿಹಾರ ಪಡೆಯುತ್ತಾರೆ. ೪೦ ಪ್ರತಿಶತಕ್ಕಿಂತ ಕಡಿಮೆ ಪ್ರಮಾಣದ ವಿಕಲರು




ಸರಕಾರದಿಂದ ಸಿಗುವ ಯಾವುದೇ ತರಹದ ಸಹಾಯ/ಪರಿಹಾರಕ್ಕೆ ಅರ್ಹರಾಗುವುದಿಲ್ಲ. ೪೦ ಪ್ರತಿಶತಕ್ಕಿಂತ ಕಡಿಮೆಯ ವಿಕಲಾಂಗರು ವೈದ್ಯರಿಗೆ ಕಿರಿಕಿರಿಮಾಡುವ, ಆಮಿಷ ತೋರುವ ಸಂಭವಗಳಿವೆ.

ರಸ್ತೆ ಅಪಘಾತದಲ್ಲಿ ಗಾಯಗೊಂಡು ವಿಕಲಗೊಂಡು ದೌರ್ಬಲ್ಯಕ್ಕೆ ತುತ್ತಾದವರಿಗೆ ವಿಮಾ ಕಂಪನಿಯವರಾಗಲಿ, ಅಪಘಾತಕ್ಕೆ ಕಾರಣವಾದ ವಾಹನದ ಮಾಲಿಕರಾಗಲಿ ಇಲ್ಲವೇ ಚಾಲಕನಾಗಲಿ ಪರಿಹಾರ ನೀಡುವುದಕ್ಕೆ ಬಾಧ್ಯರಾಗಿರುತ್ತಾರೆ. ಗಾಯಗೊಂಡ ವ್ಯಕ್ತಿಯನ್ನು ಉಪಚರಿಸಿದ ವೈದ್ಯರು ಗಾಯಗಳ ಮಾಹಿತಿ ಒದಗಿಸುತ್ತಾರೆ. ಚಿಕಿತ್ಸೆ ಪೂರ್ತಿಗೊಂಡ ನಂತರ, ಚೇತರಿಕೆಯ ಹಂತ ಅಂತ್ಯಗೊಂಡಾದ ಮೇಲೆ ತಜ್ಞ ವೈದ್ಯರು ವಿಕಲತೆಯ ಪ್ರಮಾಣ ಪತ್ರ ನೀಡುತ್ತಾರೆ. ಅಂಗಭಾಗವು ಇಂತಿಷ್ಟು ಪ್ರಮಾಣದಲ್ಲಿ ವಿಕಲಗೊಂಡಿದ್ದು ವಿಕಲತೆಯು ಶಾಶ್ವತವಾದದ್ದೆಂದು ಪ್ರತಿಶತ ಲೆಕ್ಕದಲ್ಲಿ ತಿಳಿಸುತ್ತಾರೆ. ವಕೀಲರು, ರೋಗಿ, ರೋಗಿಯ ಆಪ್ತರು ತಜ್ಞ ವೈದ್ಯರಿಗೆ ಸಮಂಜಸವೆನಿಸದ ಹೆಚ್ಚಿನ ಪ್ರತಿಶತ ನೀಡಲು ಯಾಚಿಸುತ್ತಾರೆ, ಆಮಿಷ ತೋರಿಸುತ್ತಾರೆ. ಕೆಲವೊಮ್ಮೆ ಬೆದರಿಕೆ ಹಾಕಲೂಬಹುದು. ವಿಮಾ ಕಂಪನಿಯ ಅಧಿಕಾರಿಗಳು, ವಕೀಲರು, ವೈದ್ಯರು ನೀಡಿದ ವಿಕಲತೆಯ ಪ್ರಮಾಣ ಹೆಚ್ಚಾಯಿತೆಂದು ಗೊಣಗ ಬಹುದು. ವೈದ್ಯರು ಇದಾವುದಕ್ಕೂ ಮನ್ನಣೆ ನೀಡದೆ, ಕಾನೂನನ್ನು ಗಾಳಿಗೆ ತೂರದೆ, ವಿಕಲಾಂಗರ ಹಿತಕ್ಕೆ ಧಕ್ಕೆಯಾಗದಂತೆ ಉಚಿತ ಖಚಿತ ಪ್ರಮಾಣಪತ್ರ ನೀಡಬೇಕು. ಕಾರ್ಖಾನೆಗಳಲ್ಲಿ ಸಂಭವಿಸುವ ಅಪಘಾತಗಳಲ್ಲೂ ಇಂತಹುದೆ ಪರಿಸ್ಥಿತಿ ತಲೆದೋರುತ್ತದೆ. ವಿಕಲಾಂಗರ/ದೌರ್ಬಲ್ಯ ಪರಿಹಾರಕ್ಕೆಂದು ಕಾರ್ಮಿಕ ನ್ಯಾಯಾಲಯಗಳಿವೆ.

ವಿಕಲಾಂಗರು ಪರಿಹಾರ ಪಡೆಯಲು ಸರಕಾರ ಸಾಕಷ್ಟು (ಕಾನೂನಿನಲ್ಲಿ) ಆಸ್ಪದ ಮಾಡಿಕೊಟ್ಟಿದೆ. ಬುದ್ಧಿವಂತರು ಅದರ ದುರ್ಬಳಕೆ ಮಾಡದೆ ಅವ್ಯವಹಾರಕ್ಕೆ ಕೈಹಾಕದೆ ನ್ಯಾಯವಾದದ್ದನ್ನು ವಿಕಲರು ಪಡೆಯಲು ಸಹಕರಿಸಬೇಕು. ವಿಕಲಾಂಗರು ಆರ್ಥಿಕವಾಗಿ, ಬೌದ್ಧಿಕವಾಗಿ ಮತ್ತು ಮಾನಸಿಕವಾಗಿ ಸಹಜ ಸ್ವತಂತ್ರ ಜೀವನ ಸಾಗಿಸಲು ಸಮಾಜದ ಎಲ್ಲರೂ ಸಹಕರಿಸಬೇಕು.

ಡಾ|| ಎಸ್. ಎಸ್. ಪಾಟೀಲ
ಸಿದ್ಧರತ್ನ, ಧನ್ವಂತರಿ ಬಡಾವಣೆ, ಗುಲಬರ್ಗಾ - ೫೮೫ ೧೦೫

೪೨ನೇ ಪುಟದಿಂದ

ಅಮೆರಿಕದ ಪುಟ್ಟ ದೇಶ. ಸುಮಾರು ಒಂದೂವರೆ ಶತಮಾನಕ್ಕೂ ಹೆಚ್ಚು ಕಾಲದಿಂದ ಎರಡು ಬಲಪಂಥೀಯ ರಾಜಕೀಯ ಪಕ್ಷಗಳು ಆಡಳಿತ ನಡೆಸುತ್ತಿದ್ದುವು. ಬಹುರಾಷ್ಟ್ರೀಯ ಕಂಪನಿಗಳ ಕೈಗೊಂಬೆಗಳಂತಿದ್ದ ಈ ಪಕ್ಷಗಳ ಆಡಳಿತೆಯಲ್ಲಿ ದೇಶದ ಮೂರನೇ ಒಂದು ಭಾಗ ಜನ ಕಡುಬಡತನದ ಪಾಲಾಗಿದ್ದರು. ಕಳೆದ ಅಕ್ಟೋಬರ್‌ನಲ್ಲಿ ನಡೆದ ಚುನಾವಣೆಗಳಲ್ಲಿ ಎಡಪಕ್ಷಗಳ ನೇತೃತ್ವದಲ್ಲಿ ಸಮ್ಮಿಶ್ರ ಸರಕಾರವೊಂದು ಅಸ್ತಿತ್ವಕ್ಕೆ ಬಂದಿದೆ. ಟಬಾರೆ ವಾಸ್ಕ್‌ವೆಜ್ ಅಧ್ಯಕ್ಷರಾಗಿದ್ದಾರೆ. ಬಲಪಂಥೀಯ ಪಕ್ಷಗಳನ್ನು ಮೂಲೆಗೊತ್ತಿ ಅತ್ಯಧಿಕ ಬಹುಮತದಿಂದ ಅಧಿಕಾರಕ್ಕೆ ಬಂದಿರುವ ಹೊಸ ಸರಕಾರ ಸುಧಾರಣೆಗಳನ್ನು ಜಾರಿಗೊಳಿಸುವುದರಲ್ಲಿ ನಿರತವಾಗಿದೆ. ಇದೇ ರೀತಿಯಲ್ಲಿ ಇನ್ನೊಂದು ಪುಟ್ಟ ದೇಶ ಈಕ್ವೆಡೋರ್‌ನಲ್ಲೂ ಎಡಪಕ್ಷದ ಸರಕಾರವೊಂದು ೨೦೦೨ರ ನವೆಂಬರ್‌ನಿಂದ ಅಸ್ತಿತ್ವದಲ್ಲಿದೆ. ಲೂಸಿಯೊ ಗುಟೀರೆಜ್ ಎಂಬ ಈಕ್ವೆಡೋರ್‌ನ ಎಡಪಕ್ಷದ ನಾಯಕ ದೇಶದ ಅತ್ಯಂತ ಶ್ರೀಮಂತ ಎದುರಾಳಿ ಅಟವಾರೋ ನಟಾವೋನನ್ನು ಸೋಲಿಸಿ ರಾಷ್ಟ್ರಾಧ್ಯಕ್ಷನಾಗಿ ಆಯ್ಕೆ ಗೊಂಡಿದ್ದಾನೆ. ಬ್ರೆಜಿಲ್‌ನಲ್ಲಿ ೨೦೦೨ರ ಅಕ್ಟೋಬರ್‌ನಿಂದ ವರ್ಕರ್ಸ್ ಪಾರ್ಟಿಯ ನಾಯಕ ಲೂಲ ಡಿ ಸಿಲ್ವಾ ನೇತೃತ್ವದಲ್ಲಿ ಎಡಪಕ್ಷದ ಸರಕಾರ ಅಸ್ತಿತ್ವದಲ್ಲಿದೆ. ಹಾಗೆಯೇ ಚಿಲಿ ಮತ್ತು ಅರ್ಜೆಂಟೈನಾಗಳಲ್ಲಿ ಎಡಪಕ್ಷಗಳ ಸರಕಾರ ಇಲ್ಲದಿದ್ದರೂ ಎಡಪಂಥೀಯ ವಿಚಾರಗಳಿಗೆ ಒಲವಿರುವ ಸರಕಾರಗಳು ಅಸ್ತಿತ್ವದಲ್ಲಿವೆ.

ಇವೆಲ್ಲ ಸ್ವಾಗತಾರ್ಹವಾದ ಬೆಳವಣಿಗೆಗಳೇ. ಆದರೆ ಅಮೆರಿಕದ ಕಬಂಧ ಬಾಹುವಿಗೆ ಎಟುಕದಂತಾಗಲು ಈ ಎಲ್ಲ ಸರಕಾರಗಳ ನಡುವೆ ಐಕ್ಯತೆ, ಪರಸ್ಪರ ಸಹಕಾರ ಹಾಗೂ ಪ್ರಾಮಾಣಿಕವಾಗಿ ಸುಧಾರಣೆಗಳನ್ನು ಅನುಷ್ಠಾನಗೊಳಿಸುವುದು ಮುಖ್ಯ. ವಾಷಿಂಗ್ಟನ್ ಹೇರಿಸಿದ್ದ ಆರ್ಥಿಕ ನೀತಿಗಳನ್ನು ಕಿತ್ತೊಗೆದು ಹೊಸ ಜನಪರ ಆರ್ಥಿಕ ನೀತಿ ರೂಪಿಸುವುದು ಅಗತ್ಯ. ಈ ದಿಶೆಯಲ್ಲಿ ಈಗಾಗಲೇ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ. ಸಾಮೂಹಿಕ ಕಾರ್ಯಾಚರಣೆಯ ಮುಖ್ಯತ್ವವನ್ನು ಎಡಪಕ್ಷಗಳು ಅರಿತುಕೊಂಡು ಸಹಕಾರಕ್ಕಾಗಿ ಪ್ರಾದೇಶಿಕ ತಂಡಗಳನ್ನು ರಚಿಸಿಕೊಂಡಿವೆ. ಕಳೆದ ವರ್ಷ ಅಕ್ಟೋಬರ್‌ನಲ್ಲಿ ಅವು ತಮ್ಮೊಳಗೆ ಮುಕ್ತ ವಾಣಿಜ್ಯ ಒಪ್ಪಂದವನ್ನು ಮಾಡಿಕೊಂಡಿವೆ. ದಕ್ಷಿಣ ಅಮೆರಿಕದ ಎಲ್ಲ ದೇಶಗಳನ್ನೂ ಹೆಚ್ಚು ಕಡಿಮೆ ಮುಕ್ತ ವಾಣಿಜ್ಯ ವಲಯದ ವ್ಯಾಪ್ತಿಗೆ ತರಲಾಗಿದೆ. ಚಿಲಿ, ಗಯಾನ ಮತ್ತು ಸುರಿನಾಮ್‌ಗಳನ್ನೂ ಒಳಗೊಂಡಂತೆ ದಕ್ಷಿಣ ಅಮೆರಿಕದ ರಾಷ್ಟ್ರಗಳ ಸಮುದಾಯವೊಂದನ್ನು ನಿರ್ಮಿಸಲು ಪ್ರಯತ್ನಗಳು ನಡೆಯುತ್ತಿವೆ. ಅಮೆರಿಕದ ಮೇಲೆ ಅವಲಂಬನೆಯನ್ನು ತಗ್ಗಿಸಲು ಇತರ ದೇಶಗಳೊಂದಿಗೆ, ಮುಖ್ಯವಾಗಿ ಏಷ್ಯಾದ ದೇಶಗಳೊಂದಿಗೆ ವಾಣಿಜ್ಯ ವ್ಯವಹಾರಗಳನ್ನು ವಿಸ್ತರಿಸಲು ಕ್ರಮಗಳನ್ನು ಕೈಗೊಳ್ಳಲಾಗಿದೆ. ಏಷ್ಯಾದ ದೇಶಗಳೂ ಕೈಜೋಡಿಸಿದಲ್ಲಿ ಹೊಸ ಆರ್ಥಿಕ ವಲಯ ನಿರ್ಮಾಣವಾಗುವ ಸಾಧ್ಯತೆಗಳಿವೆ.

ಈ ಬೆಳವಣಿಗೆಗಳ ಹಿನ್ನೆಲೆಯಲ್ಲಿ ದಕ್ಷಿಣ ಅಮೆರಿಕದ ಎಡಪಕ್ಷಗಳ ಸರಕಾರಗಳಿಗೆ ಪ್ರಪಂಚದ ಎಲ್ಲ ಜನರ, ಪ್ರಜಾಪ್ರಭುತ್ವವಾದಿಗಳ ಪೂರ್ಣ ಬೆಂಬಲ ಸಕ್ರಿಯವಾಗಿ ಪ್ರಕಟಗೊಳ್ಳಬೇಕಾಗಿದೆ. ಅಮೆರಿಕ ಈ ಪ್ರದೇಶದಲ್ಲಿ ದುಶ್ಚರ್ಯೆಗಳಲ್ಲಿ ತೊಡಗದಂತೆ ತಡೆಯಲು ಪ್ರಪಂಚದ ಎಲ್ಲ ಜನರ ಬೆಂಬಲವೊಂದೆ ಆಧಾರ.

ಸೀಯಾರ್ಕೆ
'ಚೌಬೀನ', ೮೪೯, ೩ನೇ ಅಡ್ಡರಸ್ತೆ, ಬನಶಂಕರಿ ಮೂರನೇ ಹಂತ, ೧ನೇ 'ಎ' ಮುಖ್ಯರಸ್ತೆ
೩ನೇ ಬ್ಲಾಕ್ ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

# 'ಹತ್ತಿರ' ಎಂದರೆ ಎಷ್ಟು ದೂರ ?



''ನಿಮ್ಮ ಮನೆ ಎಲ್ಲಿ?'' ಎಂಬ ಪ್ರಶ್ನೆಗೆ ಬರುವ ಸಾಧಾರಣ ಉತ್ತರ ''... ಪಾಠಶಾಲೆಗೆ ಹತ್ತಿರ''. ಇಲ್ಲಿ ಹತ್ತಿರ ಎಂದರೆ ನೂರು ಮೀಟರ್ ಇರಬಹುದು, ಇನ್ನೂರು ಇರಬಹುದು ಅಥವಾ ಒಂದು ಕಿಲೋಮೀಟರ್ ಬೇಕಾದರೂ ಆಗಿರಬಹುದು. ಇಂತಹ ಪ್ರಶ್ನೆಗೆ ನಭಾವ ಲೋಕನದಲ್ಲಿ ಸಿಗುವ ಉತ್ತರ ನಿಮ್ಮನ್ನು ತಬ್ಬಿಬ್ಬುಗೊಳಿಸುವಂತಹುದು. ಚಂದ್ರ ಎಲ್ಲಿ ಎಂದು ನೀವು ಫೆಬ್ರವರಿ ೧೧ರಂದು ಸಂಜೆ ಹುಡುಕಿದಾಗ ಸಿಗುವ ಉತ್ತರ ಇಂತಹುದೇ – ''ಅಗೋ... ಮರದ ಪಕ್ಕದಲ್ಲಿ!'' ಮರದ ದೂರ ನೂರಿನ್ನೂರು ಮೀಟರ್ ಇದ್ದೀತು. ಆದರೆ ಚಂದ್ರನದು ? ಹಾಗಾದರೆ 'ಹತ್ತಿರ' ಹೇಗಾಯಿತು ? ಖಗೋಳ ವಿಜ್ಞಾನ ಬೆಳೆದು ಬಂದ ಬಗೆಯನ್ನೇ ಈ ಉತ್ತರ ಸೂಚಿಸುತ್ತದೆ. ಹತ್ತಿರ ಎಂದರೆ ಚಂದ್ರ ಮತ್ತು ಮರದ ನಡುವಿನ ಕೋನ ಕಡಿಮೆ ಇದೆ ಎಂದರ್ಥ. ದೂರ ಅಲ್ಲ.

ಕೋನದ ಈ ಬಗೆಯ ವ್ಯಾಖ್ಯೆಯ ಕಾರಣ ದಿಂದಲೇ ಚಂದ್ರನ ದಿಕ್ಕು ಸೂಚಿಸಲು ಇಪ್ಪತ್ತೇಳು ನಕ್ಷತ್ರಗಳು ಬೇಕಾಗಿವೆ. ವಾಸ್ತವವಾಗಿ ಚಂದ್ರನ ದೂರಕ್ಕೂ ನಕ್ಷತ್ರಗಳ ದೂರಕ್ಕೂ ಅಜಗಜಾಂತರ ವಿದೆ. ಇಲ್ಲಿ ಅಜ-ಗಜದ ಹೋಲಿಕೆಯೂ ಸರಿ ಬರಲಾರದು. ಗಜದ ಗಾತ್ರ ಅಜದ ಮೂರರಷ್ಟು ಇರಬಹುದಷ್ಟೇ. ಆದರೆ ನಕ್ಷತ್ರಗಳ ದೂರ ಚಂದ್ರನ ದೂರದ ಮಿಲಿಯನ್ ಪಟ್ಟು!

ಫೆಬ್ರವರಿಯ ರಾತ್ರಿಯ ಆಕಾಶದ ಕೆಲವೊಂದು ಉದಾಹರಣೆಗಳನ್ನೇ ತೆಗೆದು ಕೊಳ್ಳೋಣ. ಈ ರಾತ್ರಿಯ ರಾಜ 'ಶನಿ'– ರಾತ್ರಿ ಇಡೀ ಇವನ ದರ್ಬಾರು ನಡೆಯುತ್ತದೆ. ಪೂರ್ವಕ್ಕೆ ದೃಷ್ಟಿ ಹರಿಸಿ. ಪುನರ್ವಸು ನಕ್ಷತ್ರಗಳಿಗಿಂತ ಸ್ವಲ್ಪ ಪೂರ್ವಕ್ಕೆ ಕಾಣುವ ಈ ಚುಕ್ಕೆಯನ್ನು ಗಮನವಿಟ್ಟು ನೋಡಿ. ನಕ್ಷತ್ರಗಳನ್ನು ಮೀರಿಸುವ ಪ್ರಕಾಶ. ಆದರೆ ಮಿನುಗುತ್ತಿಲ್ಲ ಅದರ ದೂರ ಎಷ್ಟು? ಸುಮಾರು ೧೨೨೨ ಮಿಲಿಯನ್ ಕಿಲೋಮೀಟರ್‌ಗಳು! ಇದನ್ನು ಭೂಮಿ-ಸೂರ್ಯರ ದೂರದ ಖಗೋಳ ಮಾನದಲ್ಲಿ ಸೂಚಿಸುವುದು ರೂಢಿ. ೧ ಖ.ಮಾ. ಎಂದರೆ ೧೫೦,೦೦೦,೦೦೦ ಕಿ.ಮೀ.; ಶನಿಯ ದೂರ ೮.೧೪ ಖ.ಮಾ. ಕಳೆದ ತಿಂಗಳು ವಿಯುತಿಯಲ್ಲಿ ಇದರ ದೂರ ೮.೦೨ ಖ.ಮಾ ಇತ್ತು. ಅದರ ಪ್ರಕಾಶ ಗರಿಷ್ಠ ಮುಟ್ಟಿತ್ತು. ಕಳೆದ ತಿಂಗಳು ಹೈಗೆನ್ಸ್ ಎಂಬ ಉಪಕರಣ ಶನಿಯ ಉಪಗ್ರಹ ಟೈಟನ್ ಮೇಲೆ ಇಳಿದಾಗ ಹೊರಟ ಸಂದೇಶ ನಮ್ಮನ್ನು ಮುಟ್ಟಲು ಒಂದು ಗಂಟೆಗೂ ಹೆಚ್ಚು ಕಾಲ ಬೇಕಾಯಿತು!

ಈಗಲೂ ಶನಿಯ ಪ್ರಕಾಶ ತಗ್ಗಿಲ್ಲ ೨೨,೦೦೦,೦೦೦ ಕಿ.ಮೀ.ಗಳ ದೂರದ ಹೆಚ್ಚಳದಿಂದ ಉಂಟಾಗುವ ಪ್ರಕಾಶದ ಇಳಿತವನ್ನು ಬರಿಗಣ್ಣು ಗುರುತಿಸಲಾರದು. ಇದರ ಸಮೀಪದ ಪುನರ್ವಸುಗಳ ದೂರಗಳನ್ನು ಹೋಲಿಸಿ. ಒಂದರ ದೂರ ೩೪ ಜ್ಯೋತಿರ್ವರ್ಷಗಳು. ಇನ್ನೊಂದರದ್ದು ೫೨ ಜ್ಯೋತಿರ್ವರ್ಷಗಳು. (ಜ್ಯೋತಿರ್ವರ್ಷ ಎಂದರೆ ಒಂದು ವರ್ಷದಲ್ಲಿ ಬೆಳಕು ಕ್ರಮಿಸುವ ದೂರ ಸುಮಾರು ಒಂದು ಟ್ರಿಲಿಯನ್ ಕಿ.ಮೀ. ಒಂದರ ಪಕ್ಕ ೧೨ ಸೊನ್ನೆಗಳು!)

ಶನಿಯೊಡನೆ ಸ್ಪರ್ಧೆ ನಡೆಸುತ್ತಿರುವಂತಿರುವ ಲುಬ್ಧಕ ಆಕಾಶದ ಎಲ್ಲ ನಕ್ಷತ್ರಗಳಲ್ಲಿ ಅತಿ ಪ್ರಕಾಶಮಾನವಾದದ್ದು. ಇದರ ದೂರ ೮ ಜ್ಯೋತಿರ್ವರ್ಷಗಳಷ್ಟೇ. ಮಹಾಶ್ವಾನ ಅಥವಾ ಕ್ಯಾನಿಸ್ ಮೇಜರ್ ಪುಂಜದ ಇನ್ನಿತರ ನಕ್ಷತ್ರಗಳೆಲ್ಲಾ ಸುಮಾರು ೨೦೦೦ ಜ್ಯೋತಿರ್ವರ್ಷ ಗಳಷ್ಟು ದೂರದಲ್ಲಿವೆ!

ಆಕರ್ಷಕವಾಗಿ ಕಾಣುವ ಇನ್ನೊಂದು ಪುಂಜ ಒರೈಯನ್ ಮಹಾವ್ಯಾಧ. ಬೇಟೆಗಾರನ ಕಾಲ್ಪನಿಕ ಆಕೃತಿಯಲ್ಲಿ ನಡುಪಟ್ಟಿಯಂತಿರುವ ಮೂರು ನಕ್ಷತ್ರಗಳನ್ನು ಗಮನಿಸಿ. ಚಿಕ್ಕ ಸರಳ ರೇಖೆಯಂತಿದೆ ಅಲ್ಲವೇ ? ಆದರೆ ವಾಸ್ತವವಾಗಿ ಅವು ಮೂರೂ ಬೇರೆ ಬೇರೆ ದೂರ ಗಳಲ್ಲಿವೆ. ೧೦೦೦ದಿಂದ ೧೫೦೦ ಜ್ಯೋತಿರ್ವರ್ಷಗಳು. ನಡುಪಟ್ಟಿಗೆ ತಾಗಿ ಕೊಂಡಂತೆ ಖಡ್ಗವನ್ನು ಊಹಿಸಿಕೊಳ್ಳುವಿರಾದರೆ ಅಲ್ಲಿದೆ ಒರೈಯನ್ ನೆಬ್ಯುಲ-೫೦೦ ಜ್ಯೋತಿರ್ವರ್ಷ ದೂರದಲ್ಲಿ. ಇಷ್ಟೆಲ್ಲಾ ಅಗಾಧ ದೂರಗಳನ್ನೂ ಗೌಣವನ್ನಾಗಿಸಿ ನಮ್ಮ ಸುಪ್ತ ಸೌಂದರ್ಯಾರಾಧನೆಯನ್ನು ಕೆರಳಿಸುವ ವೈಶಿಷ್ಟ್ಯ ಖಗೋಳಕ್ಕೆ ಮಾತ್ರ ಸಾಧ್ಯ. ೨೭ರಂದು ಚಂದ್ರ ಗುರುಗ್ರಹದ ಮುಂದೆ ಹಾದು ಹೋಗುವ ಆಚ್ಛಾದನೆ ನಡೆಯಲಿದೆ. ಬಸ್ ಅಥವಾ ರೈಲಿನಲ್ಲಿ ಕುಳಿತು ಕಿಟಕಿಯಾಚೆ ನೋಡುವಾಗ ಹತ್ತಿರದ ಮರ ದೂರದ ಗುಡ್ಡವನ್ನು ಮುಚ್ಚಿಹಾಕುವಂತಹ ಸರಳವಾದ ಘಟನೆ ಇದು. ಆದರೆ ಆಕಾಶದಲ್ಲಿ ಅವು 'ಹತ್ತಿರ' ಅಂಟಿಕೊಂಡಂತೆ ಕಂಡಾಗ ನಿಬ್ಬೆರಗಾಗುವುದು ಸಹಜ. ೪ರ ಬೆಳಗಿನ ಜಾವ ಚಂದ್ರನಿಗೆ ಅಂಟಿಕೊಂಡಂತೆ ಕಾಣುವ ನಕ್ಷತ್ರ ಜ್ಯೇಷ್ಠಾ ಇದೂ ಆಚ್ಛಾದನೆಯೇ – ಪೂರ್ಣ ನೋಟ ಯೂರೋಪಿಯನ್ನರಿಗೆ ಲಭ್ಯ. ಮಾರ್ಚ್ ೩ರಂದು ಇನ್ನೊಂದು ಅವಕಾಶವೂ ಇದೆ.

ಸುಮಾರು ಹತ್ತುಗಂಟೆಯ ಹೊತ್ತಿಗೆ ಉದಯಿಸುವ ಗುರುಗ್ರಹದ ಪ್ರಕಾಶ ಕ್ರಮೇಣ ಹೆಚ್ಚುತ್ತಿದೆ. ವಿಯುತಿಯ ಸಂದೇಶವಾಗಿ ಹಿನ್ನಡೆ ಆರಂಭ ವಾಗಲಿದೆ. ಬೆಳಗಿನ ಜಾವ ನೆತ್ತಿಯಲ್ಲೇ ಕಾಣುವ ಇದರ 'ಹತ್ತಿರ' ಚಿತ್ತಾನಕ್ಷತ್ರ ವಿದೆ. ಮಂಗಳ ಗ್ರಹ ಕೂಡ ಬೆಳಗಿನ ಜಾವ ಕಾಣುತ್ತದೆ. ವೃಶ್ಚಿಕದಿಂದ ಮುಂದೆ ಸಾಗುವ ಇದು ಧನುರ್ರಾಶಿಯ ನೆಬ್ಯುಲ ಗಳನ್ನು ಹಾದುಹೋಗುತ್ತದೆ. ಫೆಬ್ರವರಿಯ ೬-೭ ಈ ದಿನಗಳಲ್ಲಿ ದೂರದರ್ಶಕದ ಮೂಲಕ ನೋಡಿದರೆ (ಚಿತ್ರ ತೆಗೆದು ನೋಡಿದ್ದಾದರೆ) ನೆಬ್ಯುಲಗಳೂ ಕಾಣುವುವು.

ಬುಧ ಮತ್ತು ಶುಕ್ರ ಎರಡೂ ಈ ತಿಂಗಳು ಕಾಣುವುದು ಕಷ್ಟ. ಸಂಧ್ಯಾ ಪ್ರಕಾಶದಲ್ಲಿ ಕರಗಿಹೋಗುತ್ತವೆ. ಮೆಕ್‌ಹೋಲ್ಸ್ ಧೂಮಕೇತು ಕಾಸಿಯೋಪಿಯ (ಕುಂತಿ) ಪುಂಜದ ಮೂಲಕ ಸಾಗುತ್ತಿದೆ. ದುರ್ಬೀನು ಇದ್ದವರು ಮಾತ್ರ ಗುರುತಿಸಬಲ್ಲರು.

### ಖಗೋಳ ದಿನಚರಿ

೨ ಚಾಂದ್ರಮಾಸದ ಕೊನೆಯ ಪಾದ
ಚಂದ್ರೋದಯ ನಡುರಾತ್ರಿಯಲ್ಲಿ
ಗುರುಗ್ರಹದ ಹಿನ್ನಡೆ ಆರಂಭ
೪ ಜ್ಯೇಷ್ಠಾ ನಕ್ಷತ್ರದ ಆಚ್ಛಾದನೆ*
೫ ಚಂದ್ರ - ಮಂಗಳದ ಸನಿಹದಲ್ಲಿ*
೯ ಅಮಾವಾಸ್ಯೆ ೦೩:೫೮ಕ್ಕೆ
೧೫ ಚಾಂದ್ರಮಾಸದ ಮೊದಲ ಪಾದ
ಚಂದ್ರಾಸ್ತ ನಡುರಾತ್ರಿಯಲ್ಲಿ
ಚಂದ್ರದ ಸನಿಹದಲ್ಲಿ ಕೃತ್ತಿಕಾಗುಚ್ಛ*
೨೦ ಚಂದ್ರನ ಹತ್ತಿರ ಶನಿ
೨೪ ಹುಣ್ಣಿಮೆ ೧೦:೨೪ಕ್ಕೆ ಚಂದ್ರನ ಪಕ್ಕ ಇರುವ ಪ್ರಕಾಶಮಾನ ನಕ್ಷತ್ರ ಮಘ
೨೭ ಚಂದ್ರ - ಗುರು ನಡುವೆ ಕನಿಷ್ಠಕೋನ*

*ಛಾಯಾಗ್ರಹಣಕ್ಕೆ ಒಳ್ಳೆಯ ಅವಕಾಶಗಳು

**ಡಾ|| ಬಿ. ಎಸ್. ಶೈಲಜಾ**
ಜವಹರಲಾಲ್ ನೆಹರೂ ತಾರಾಲಯ, ಬೆಂಗಳೂರು-೫೬೦ ೦೦೧

*ಕೂಗುತಿವೆ ಕಲ್ಲು : ಕಿವಿವೆತ್ತ ಕಿವುಡರಿರ, ಕೇಳಿ ಆ ಸೊಲ್ಲು*
*ಎಲ್ಲಿ ಕಣ್ಣಡಲಲ್ಲಿ, ಎಲ್ಲಿ ಕಿವಿಯಿಡಲಲ್ಲಿ*
*ಭೋರಿಡುತ್ತಿದೆ ಶಿಲಾಭೇರಿ, ಪ್ರಾಣ ಸಂಚಾರಿ* – ಕುವೆಂಪು

ಈ ಹಿನ್ನೆಲೆಯಿಂದ ನೋಡಿದರೆ ಒಂದೊಂದು ಕಲ್ಲೂ ಇಲ್ಲಿ ಕಥೆ ಹೇಳುತ್ತಿವೆ. ಆದರೆ ಈ ಅಹಲ್ಯೆಯಂಥವರ ಕಥೆ ಕೇಳುವ ವ್ಯವಧಾನ ರಾಮನಂಥವರಿಗೆ ಮಾತ್ರ ಸಾಧ್ಯ. ಈಗ ಪುರಾಣದ ಮಾತು ಹಾಗಿರಲಿ, ಚರಿತ್ರೆಯ ಕಾಲಕ್ಕೆ ಬಂದರೆ ನಮ್ಮ ನಾಡಿನ ವೀರಗಲ್ಲುಗಳು, ಮಾಸ್ತಿಕಲ್ಲುಗಳು, ಶಿಲಾಶಾಸನಗಳು ಇತ್ಯಾದಿಗಳು ವಿಪುಲ ಕಥಾ ಕೋಶಗಳಂತಿವೆ. ಹೀಗೆ ಕಲ್ಲಾದ ಕಥಾಮಂಜರಿಗಳಲ್ಲಿ ನಮ್ಮ ಆದಿಕವಿ ಪಂಪ (ಕ್ರಿ.ಶ. ೯೦೨-೯೪೧)ನ ತಮ್ಮ ಜಿನವಲ್ಲಭನು ಕ್ರಿ.ಶ. ಸುಮಾರು ೯೫೦ರಲ್ಲಿ ಬರೆಸಿದ ಗಂಗಾಧರಂ ಶಾಸನವೂ ಒಂದು. ಅದು ಈಗಿನ ಆಂಧ್ರಪ್ರದೇಶದ ಕರೀಂನಗರ ಜಿಲ್ಲೆಯ ಕುರಿಕ್ಯಾಲವೆಂಬ ಊರಿನ ಬಳಿಯ ಬೊಮ್ಮಲಗುಟ್ಟದ ಬಂಡೆಯೊಂದರ ಮೇಲೆ ಕೆತ್ತಲ್ಪಟ್ಟಿದೆ. ಅದರ ಸಾರಾಂಶ ಹೀಗಿದೆ :

ಈ ಶಾಸನದ ಕರ್ತೃವಾದ ಜಿನವಲ್ಲಭನು ಪಂಪನ ತಮ್ಮ; ಅವರಿಬ್ಬರ ತಂದೆ ರಾಷ್ಟ್ರಕೂಟರ ಸಾಮಂತ ನರಸಿಂಗನ ಆಸ್ಥಾನ ಪಂಡಿತ ಅಭಿರಾಮದೇವ; ತಾಯಿ ಅಣ್ಣಿಗೇರಿಯ ಸಿಂಘಾಜೋಯಿಸರ ಮೊಮ್ಮಗಳು ಅಬ್ಬಣಬ್ಬೆ ; ಪಂಪ ನರಸಿಂಗನ ಮಗ ಅರಿಕೇಸರಿಯ ಆಸ್ಥಾನ ಕವಿಯೂ ಕಲಿಯೂ ಆಗಿದ್ದ; ಅವನು ತನ್ನ ಆಶ್ರಯದಾತನನ್ನು ಅರ್ಜುನನೊಂದಿಗೆ ಒಂದಾಗಿಸಿ 'ವಿಕ್ರಮಾರ್ಜುನ ವಿಜಯ'ವೆಂಬ ಕಾವ್ಯವನ್ನು ರಚಿಸಿದ; ಅದಕ್ಕಾಗಿ ಅರಿಕೇಸರಿಯು ಧರ್ಮಪುರವೆಂಬ ಅಗ್ರಹಾರವನ್ನ ದತ್ತಿಯಾಗಿ ಬಿಟ್ಟ– ಇತ್ಯಾದಿ.

ಪ್ರಸ್ತುತ ಡಾ॥ ಕೆ. ವೈ. ನಾರಾಯಣ ಸ್ವಾಮಿಯವರ 'ಪಂಪಭಾರತ' ರಂಗನಾಟಕಕ್ಕೆ ಸ್ಫೂರ್ತಿ ಈ ಶಿಲಾಶಾಸನ. ಈ ಶಾಸನಗಲ್ಲಿನಿಂದ ಒಡಮೂಡಿಬಂದ ಪಂಪ ಮತ್ತು ಅದರ ಪರಿಸರದಲ್ಲಿ ಬಿಡುಗಡೆ ಇಲ್ಲದೆ ಅಲೆಯುತ್ತಿರುವ ಮಹಾಭಾರತದ ಭೂತ ಪಾತ್ರಗಳು ಈಗ ಮೈದೋರಿ ತಂತಮ್ಮ ಕಥೆ ಬಿಚ್ಚುತ್ತವೆ. ನಾಟಕದ ಆರಂಭ ಇಂತಿದೆ :

ಪ್ರಾಚ್ಯ ಸಂಶೋಧನ ವಿದ್ಯಾರ್ಥಿಗಳಿಬ್ಬರು ಜಿನವಲ್ಲಭನ ಈ ಶಾಸನದ ಅಧ್ಯಯನಕ್ಕೆಂದು ಇಲ್ಲಿ ಬಂದಿದ್ದಾರೆ.

# ಪಂಪಭಾರತ ನಾಟಕ
# ಕಲ್ಲೂ ಕಥೆ ಹೇಳುವುದು

ಆದರೆ ಶಾಸನದ ಮೇಲೆ ಮತಾಂತರ ನಿಷೇಧ ಕುರಿತ ಆದೇಶವುಳ್ಳ ಪೋಸ್ಟರ್ ಒಂದನ್ನು ಅಂಟಿಸಲಾಗಿತ್ತು. ಅದನ್ನವರು ಕಿತ್ತುಹಾಕಿ ಓದುವ ಸನ್ನಾಹದಲ್ಲಿರುವಾಗ ಸನಾತನ ಧರ್ಮದ ಗುತ್ತಿದಾರರಂತೆ ವರ್ತಿಸುವ ಚಡ್ಡಿಧಾರಿ ದಾಂಡಿಗರು ಬಂದು ಅವರನ್ನು ತಮ್ಮ ಲಾಠಿಗಳಿಂದ ಥಳಿಸಿ ಗದರಿಸಿ ಓಡಿಸುವರು. ಹಠಬಿಡದ ಆ ಸಂಶೋಧಕರು ರಾತ್ರಿ ವೇಳೆಯಲ್ಲಿ ಬಂದು ಟಾರ್ಚ್ ಬೆಳಕಿನಲ್ಲಿ ಓದಲು ಪುನಃ ಪ್ರಯಾಸ ಬೀಳುತ್ತಿರುವುದನ್ನು ಕಂಡ ವೃದ್ಧ ಕಾವಲುಭಟನೊಬ್ಬ, ಕಾಲಗರ್ಭದಿಂದ ಎದ್ದು ಬಂದವನಂತೆ ಬಂದು ಅವರಿಗೆ ದಿಗಿಲು ಹುಟ್ಟಿಸುವನು. ಆದರೆ ಅವನೇ ಇವರಿಗೆ ಸಾಂತ್ವನ ಮಾಡಿ ತಾನು ತಿಳಿದಷ್ಟು ಪಂಪನ ಪೂರ್ವಕಥೆಯನ್ನು ಹೇಳಲು ಉಪಕ್ರಮಿಸುವನು. ಆಗ 'ಭಾರತ ಕಣ್ಣಲಿ ಕುಣಿಯುವುದು; ಮೈಯಲಿ ಮಿಂಚಿನ ಹೊಳೆ ತುಳುಕಾಡುವುದು !' ಏಕೆಂದರೆ ಭೂತ ಭವಿಷ್ಯತ್ ವರ್ತಮಾನಗಳು ಒಂದೇ ಬಿಂದುವಿನಲ್ಲಿ ಸಂಧಿಸುವ ಅದೊಂದು ಅಪೂರ್ವ ಕ್ಷಣ! ಪುರಾಣೇತಿಹಾಸವನ್ನು ಸಮಕಾಲೀನ ಸಂದರ್ಭದಲ್ಲಿಟ್ಟು ವಿವರಿಸಿಕೊಳ್ಳುವ ಒಂದು ವಿಧಾನ.

ಹೀಗಿರುತ್ತ ಆ ಕಾವಲುಭಟನಲ್ಲೂ ಪಂಪನ ಅಂತ್ಯ ಹೇಗಾಯಿತೆಂಬ ಬಗ್ಗೆ ಮಾಹಿತಿ ಇಲ್ಲ. ಇಂಥ ಸನ್ನಿವೇಶದಲ್ಲಿ ತನ್ನ ಶಾಸನಗಲ್ಲನ್ನು ತಾನೇ ಸೀಳಿಕೊಂಡು ಬಂದು ಪಂಪ ಹಾಗೂ ಗಾಳಿರೂಹು ಪಡೆದಂತೆ ಬಂದ ಕರ್ಣ ಮುಖಾಮುಖಿಯಾಗುತ್ತಾರೆ. ಕವಿಯ ಕಾವ್ಯದ ಪಾತ್ರವೊಂದು ಎದುರಾಗಿ ಬಂದು ನನಗೇಕೆ ಅನ್ಯಾಯ ಮಾಡಿದೆಯೆಂದು ಕಟಕಟೆಗೆ ನಿಲ್ಲಿಸುವ ಅಪೂರ್ವ ಪ್ರಸಂಗವಿದು. ಹಾಗಾದರೆ ಅಂಥ ಪ್ರಮಾದ ಯಾವುದು ? ಪಂಪನೂ ತೂಕಡಿಸಿದನೆ ? ಇರಬಹುದು. ಕೆವೈಎನ್ ಅಂಥ ಒಂದು ಅನನ್ಯ ಪ್ರಸಂಗವನ್ನು ಸೃಜಿಸುತ್ತಾರೆ. ಅದೆಂದರೆ ದ್ರೌಪದಿಗೆ ಕರ್ಣನ ಮೇಲೆ ವಿವಾಹಪೂರ್ವ ಒಲವಿತ್ತು ಎಂಬ ಜಾನಪದದ ಆಶಯ. ಇದನ್ನು ಕುಮಾರವ್ಯಾಸನೂ ಜಂಬುನೇರಿಳೆ ಹಣ್ಣನ್ನು ಪುನಃ ತೊಟ್ಟಿಗೆ ಸೇರಿಸುವ ದ್ರೌಪದಿಯ ಪಾತಿವ್ರತ್ಯ ಪರೀಕ್ಷಾ ಸಂದರ್ಭದಲ್ಲಿ ಬಳಸಿಕೊಂಡಿದ್ದಾನೆ. ಇದರ ಜಾಡು ಹಿಡಿದ ಪ್ರಸ್ತುತ ನಾಟಕಕಾರರು ಹೆಣ್ಣು ಗಂಡುಗಳ ನಡುವಿನ ಏಕಮುಖ ಒಲವಿನ ಪರಿಣಾಮ ದುರಂತದಲ್ಲಿಯೇ ಪರ್ಯವಸಾನವಾಗುತ್ತದೆ ಎಂಬುದನ್ನು ವ್ಯಂಜಿಸುತ್ತಾರೆ.

ಆ ಪ್ರಕಾರ, ದ್ರೌಪದೀ ಸ್ವಯಂವರದಲ್ಲಿ ಮತ್ಸ್ಯಯಂತ್ರವನ್ನು ಮೊದಲು ಭೇದಿಸಿದವನು ಕರ್ಣ. ಪೌರುಷ ಪಕ್ಷಪಾತಿಯಾದ ಪಾಂಚಾಲಿಗೆ ಆಗ ಅವನ ಮೇಲೆ ಅನುರಾಗ ಹುಟ್ಟಿದ್ದು ಸಹಜ. ಆದರೆ ನಂತರ ಅದು ತೆಗೆದುಕೊಂಡ ತಿರುವು ಬೇರೆ. ಸೂತಪುತ್ರ ಕರ್ಣನಿಗೆ ಕ್ಷತ್ರಿಯ ಕನ್ಯೆಯನ್ನು ಕೊಡಲಾರದ ಪಾಂಚಾಲ ರಾಜನು ಉನ್ನತಮಟ್ಟದ ಆಯೋಗವೊಂದನ್ನು ರಚಿಸಿ, ತನ್ಮೂಲಕ ಕರ್ಣನು ಸ್ವಯಂವರದ ಪೂರ್ವ ನಿಬಂಧನೆಗಳನ್ನು ಸರಿಯಾಗಿ ಪಾಲಿಸಲಿಲ್ಲವೆಂಬ ಕಾರಣ ಕೊಟ್ಟು ಅವನ ಗೆಲುವನ್ನು ನಿರಾಕರಿಸುವನು. ಆ ಸಂದರ್ಭದಲ್ಲಿ 'ನನ್ನ ದೊಂದು ಮಾತಿದೆ' ಎಂದ ದ್ರೌಪದಿಯ ಮಾತನ್ನೂ ಉಪೇಕ್ಷಿಸಲಾಯಿತು. ಈ ಒಂದು ಕಹಿನೆನಪು ಅವಳ ಜೀವನ ಪರ್ಯಂತ ಉಳಿದು ಕರ್ಣನ ಸಾವಿಗೆ ನಿಮಿತ್ತವಾಯಿತು. ಇತ್ತ ಅವಮಾನಗೊಂಡ ಕರ್ಣ ಅವಳತ್ತ ಕಣ್ಣೆತ್ತಿಯೂ ನೋಡದೆ ನಿರ್ಗಮಿಸಿದನು.

ಮತ್ತೆ ದ್ಯೂತ ಪ್ರಸಂಗದಲ್ಲಿ ದುಶ್ಯಾಸನನಿಗೆ ಉತ್ತೇಜಿಸುತ್ತ ಅವನು ದ್ರೌಪದಿಯತ್ತ ಅಟ್ಟಹಾಸ ಬೀರಿದ್ದ. ಇದರ ಪ್ರತೀಕಾರಾರ್ಥವಾಗಿ ಕಾಯುತ್ತಿದ್ದ ದ್ರೌಪದಿಯು ಕರ್ಣಾವಸಾನದ ಹಿಂದಿನ ರಾತ್ರಿ ಕರ್ಣನ ಶಿಬಿರದಲ್ಲಿ ರಣಚಂಡಿಯಂತೆ ಕಾಣಿಸಿಕೊಂಡು 'ಕಡೆಗೂ ಈ ಭೂಮಿ ಮತ್ತು ಹೆಣ್ಣನ್ನು ಅರ್ಥಮಾಡಿಕೊಳ್ಳಬಲ್ಲ ಗಂಡಸರೇ ಇಲ್ಲವಲ್ಲ' ಎಂದು ಮಾರ್ಮಿಕವಾಗಿ ಹಂಗಿಸಿ ಹೋಗುವಳು. ಮರುದಿನದ ರಣರಂಗದಲ್ಲಿ ಅದೇ ಭೂಮಿ ಕರ್ಣನ ರಥವನ್ನು ನುಂಗಿ ಕೈಕೊಟ್ಟರೆ, ದ್ರೌಪದಿ ಸ್ವತಃ ಹಿಂದೆ ನಿಂತು ಅರ್ಜುನನಿಗೆ ಪ್ರಚೋದಿಸುವ ಮೂಲಕ ಕರ್ಣನ ಹತ್ಯೆಗೆ ಕಾರಣವಾಗುತ್ತಾಳೆ. ನಾಟಕದ ಐರನಿಯೆಂದರೆ ಕುಲೀನವೂ ಪುರುಷ ಪ್ರಧಾನವೂ ಆದ ಸಾಮಾಜಿಕ ವ್ಯವಸ್ಥೆ ಕುಲಹೀನ ಕರ್ಣನನ್ನೂ ಹೆಣ್ಣಾದ ದ್ರೌಪದಿಯನ್ನೂ ಒಟ್ಟಿಗೆ ಆಪೋಶನಗೈದಿತು ಎನ್ನುವುದು. ಹಾಗೆ ನೋಡಿದರೆ ಅನಾದಿಕಾಲದ ಈ ಶೋಷಣೆಗೆ ಕರ್ಣ ಮತ್ತು ದ್ರೌಪದಿ ಪಾತ್ರಗಳು ಪ್ರಾತಿನಿಧಿಕ ಆಕೃತಿಗಳಷ್ಟೆ. ಈ ಸಂದರ್ಭದ ಚೇತೋಹಾರಿ ಸಂಗತಿಯೆಂದರೆ ಗಂಗಾಪುತ್ರನಾದ ಕರ್ಣ ಅಗ್ನಿ ಪುತ್ರಿಯಾದ ದ್ರೌಪದಿಗೆ 'ತಲೆದಂಡ' ನೀಡಿ ಅರ್ಜುನನನ್ನು ಉಳಿಸಿದ್ದು.

ಎರಡನೆಯದಾಗಿ, ಕೆವೈಎನ್ ಎತ್ತಿಕೊಂಡಿರುವ ಇನ್ನೊಂದು ಸವಾಲೆಂದರೆ ಪಂಪ ಮಹಾಕವಿಯ ಅಂತ್ಯ ಕುರಿತದ್ದು. ಈ ಬಗ್ಗೆ ಪಂಪಭಾರತ ನಾಟಕ ಸ್ಫೋಟಿಸುವ ಸಂಗತಿ ಕುತೂಹಲಭರಿತವಾಗಿದೆ. ಕವಿಯ ಸಾವಿಗೆ ಅವನ ಆಶ್ರಯದಾತನೂ, ಪ್ರಾಣಸಖನೂ, ಅವನ ಕೃತಿಯ ನಾಯಕನೂ ಆಗಿರುವ ಸ್ವತಃ ಅರಿಕೇಸರಿಯೇ ಪರೋಕ್ಷ ಕಾರಣನೆಂದರೆ ನಂಬಲಾದೀತೆ ? ಆದರೆ ಈ ಪಾಪಪ್ರಜ್ಞೆಯಿಂದ ತೊಳಲುತ್ತಿದ್ದ ದೊರೆಯೇ ಬಂದು ಈಗ ಅದನ್ನು ಪ್ರಾಂಜಲವಾಗಿ ಒಪ್ಪಿಕೊಳ್ಳುತ್ತಿದ್ದಾನೆ. ಅದಕ್ಕೆ ಕಾರಣ ಅವನು ಅಧಿಕಾರದಲ್ಲಿ ಮುಂದುವರಿಯಬೇಕಿತ್ತು; ಅದರಲ್ಲಿ ಯಾರಿಗೂ ವಿನಾಯಿತಿ ಎಂಬುದಿಲ್ಲ. ಪಂಪಕವಿ ಸಾಮಂತನೊಬ್ಬನನ್ನು ಅರ್ಜುನನೊಂದಿಗೆ ಸಮೀಕರಿಸಿ 'ಜಗದೇಕಮಲ್ಲ', 'ನೃಪಪರಮಾತ್ಮ' ಮುಂತಾದ ಬಿರುದುಗಳಿಂದ ಹೊಗಳಿ 'ವಿಕ್ರಮಾರ್ಜುನ ವಿಜಯ'ವನ್ನು ಬರೆದದ್ದು ರಾಷ್ಟ್ರಕೂಟ ಚಕ್ರವರ್ತಿಯ ಸಹನೆಯನ್ನು ಕೆರಳಿಸಿತು. [ಆಗ ರಾಷ್ಟ್ರಕೂಟ ಮೂರನೆಯ ಕೃಷ್ಣ(೯೩೯-೯೬೭)ನ ಆಳ್ವಿಕೆಯ ಕಾಲ] ಆತ ಅರಿಕೇಸರಿಯ ಅತೃಪ್ತ ಮಲಮಗ ಬಲದೇವನನ್ನು ಸಂಚಿನಲ್ಲಿ ಬಳಸಿಕೊಂಡು ಸಾಮಂತನ ಪ್ರಾಣ ಸಖನನ್ನು ಸರೋವರದಲ್ಲಿ ಮುಳುಗಿಸಿ ಕೊಲ್ಲಲಾಯಿತೆಂದು ಈ ನಾಟಕದಲ್ಲಿ ಕಲ್ಪಿಸಲಾಗಿದೆ. ಆದರೆ ಪಂಪನಿಗೆ ಇಂಥ ದುರ್ಮರಣ ಸಂಭವಿಸಿರಬಹುದೆಂಬುದಕ್ಕೆ ಯಾವ

ಪ್ರೊ॥ ಶಿವರಾಮಯ್ಯ

ಚಾರಿತ್ರಿಕ ಆಧಾರಗಳೂ ಇಲ್ಲ, ಇದು ಕೇವಲ ನಾಟಕಕಾರರ ವಿವೇಕ.

ಹೀಗಲ್ಲದೆ, ೧೨ನೇ ಶತಮಾನದ ಶರಣರ ಹಾಗೂ ವೈದಿಕರ ನಡುವಿನ ಧರ್ಮ ಸಂಘರ್ಷ ಹೇಗೆ ಬಸವ ಮತ್ತು ಬಿಜ್ಜಳರನ್ನು ಬಲಿ ತೆಗೆದುಕೊಂಡಿತೊ ಹಾಗೆ ೧೦ನೇ ಶತಮಾನದ ಜೈನರ ಹಾಗೂ ವೈದಿಕರ ನಡುವಿನ ಧರ್ಮಸಂಘರ್ಷವೇ ಪಂಪ ಮತ್ತು ಅರಿಕೇಸರಿಯರನ್ನು ಬಲಿ ತೆಗೆದುಕೊಂಡಿದೆಯೆಂದು ಊಹಿಸುವುದು ಹೆಚ್ಚು ಸಮಂಜಸವೆನಿಸುತ್ತದೆ. ಏಕೆಂದರೆ ಪ್ರೊ|| ಎಲ್. ಬಸವರಾಜು ಅವರು ಸಕಾರಣ ವಾಗಿಯೇ ಊಹಿಸಿರುವಂತೆ ಅರಿಕೇಸರಿಯು ಪಂಪನಿಗೆ ಬ್ರಾಹ್ಮಣರ ಅಗ್ರಹಾರವನ್ನು ದತ್ತಿಕೊಟ್ಟದ್ದು ಅವರಿಗೆ ಹೊಟ್ಟೆಯುರಿ ಎಬ್ಬಿಸಿತ್ತು. ಇದರಿಂದ ವ್ಯಗ್ರರಾದ ವೈದಿಕರು ಪಂಪನನ್ನು ತಮ್ಮ ಅಗ್ರಹಾರದಿಂದ ಹೊರಹಾಕುವ ಸಂಚು ನಡೆಸಿರಬೇಕು. ಮಾನವ ಕುಲವೆಲ್ಲ ಒಂದೇ ಎಂದು ಪರಿಭಾವಿಸಿದ ಪಂಪನಿಗೆ ಇದು ತಿಳಿದುಬಂದು ಈ ಹೇಸಿಗೆ ಸಮಾಜದ ಸಹವಾಸವೇ ಬೇಡವೆಂದು ಆತ ವೈರಾಗ್ಯಪರನಾಗಿ ಅಗ್ರಹಾರವನ್ನು ತ್ಯಜಿಸಿ ಹೋಗಿರಬೇಕು. ಆದ್ದರಿಂದ ಪಂಪನ ಸಾವಿಗೆ ಚಕ್ರವರ್ತಿಯ ಅಸೂಯೆಯೇ ಕಾರಣವೆಂಬ ಈ ನಾಟಕಕಾರರ ಊಹೆ ದೂರಾನ್ವಯದಂತೆ ಕಂಡುಬರುತ್ತದೆ. ಇರಲಿ.

ಇನ್ನು ಪಂಪಭಾರತ ನಾಟಕವು ಗ್ರೀಕ್ ರುದ್ರ ನಾಟಕಗಳ ದೇಶ, ಕಾಲ ಹಾಗೂ ಕ್ರಿಯೆಗಳಲ್ಲಿ ಐಕ್ಯತೆಯನ್ನು ಸಾಧಿಸಿದೆಯಲ್ಲದೆ, ರನ್ನನ ಸಿಂಹಾವಲೋಕನ ಕ್ರಮ (ಫ್ಲ್ಯಾಶ್‌ಬ್ಯಾಕ್)ವನ್ನೂ ನೆನಪಿಸುತ್ತದೆ. ಜಾನಪದದ ಮಾಯಾಬಜ್ಜಾರಿನಂತೆ ಒಂದೇ ರಾತ್ರಿ ಬೆಳಗಾಗುವುದರಲ್ಲಿ ಸಂಪೂರ್ಣ ಮಹಾಭಾರತ ಆ ಜಿನವಲ್ಲಭನ ಶಾಸನ ಪರಿಸರದಲ್ಲಿ ಜರುಗಿಹೋಗುತ್ತದೆ. ಚದುರಂಗ ಆಟವನ್ನಾಡಿ ದಂಡು ದಳವನ್ನು ಪುನಃ ಡಬ್ಬಿಯಲ್ಲಿ ತುಂಬಿಟ್ಟಂತೆ ಪಂಪಾದಿಗಳು ಆ ಶಾಸನ ಗಲ್ಲಿನಲ್ಲಿ ಐಕ್ಯರಾದಾಗ ನಾಟಕ ಮುಕ್ತಾಯವಾಗುತ್ತದೆ.

ಕಡೆಯದಾಗಿ, ಸನಾತನಧರ್ಮ ದಂಡಧಾರಿ ಉಗ್ರರು ಸಂಶೋಧಕರನ್ನು ಅದೇ ಶಾಸನಕ್ಕೆ ಬಿಗಿದು ಕಟ್ಟಿರುವ ದೃಶ್ಯವು, ಚರಿತ್ರೆಯಿಂದ ಮನುಷ್ಯ ಯಾವತ್ತೂ ಪಾಠವನ್ನು ಕಲಿಯಲಾರನೋ ಎಂಬ ಸಂಶಯವನ್ನು ಬಿತ್ತುತ್ತದೆ. ಇದುವರೆಗೆ ಪಂಪನೊಂದಿಗೆ 'ಮನುಕುಲವೆಲ್ಲ ಒಂದೇ' ಎಂದು ಅನುಸಂಧಾನ ಮಾಡಿದ ಪ್ರೇಕ್ಷಕ ಈ ಚಡ್ಡಿಧಾರಿಗಳ ರಕ್ತ ಚೆಲ್ಲುವ ಮಾತಿನಿಂದ ಬೆಚ್ಚಿ ವಾಸ್ತವ ಲೋಕಕ್ಕೆ ಬರುತ್ತಾನೆ. ಆ ಫ್ಯಾಸಿಸ್ಟ್ ನೀತಿ ಇವನ ಅಂತರಂಗ ಶೋಧನೆಗೆ ಹಚ್ಚುತ್ತದೆ. ನಾಟಕದ ಆಶಯವೇ ಇದು. ಹೀಗೆ ಕೆವೈಎನ್ ಭೂತದ ಬೆಂಬತ್ತಿ ಹೋಗಿ ಅದರ ಕ್ರೂರ ಹಲ್ಲುಗಳು ಉಗುರುಗಳನ್ನು ಸಮಕಾಲೀನ ವಿವೇಕದ ಅರದಿಂದ ಉಜ್ಜಿ ನಯಗೊಳಿಸುವ ಪ್ರಯತ್ನಮಾಡುವ ಮೂಲಕ ಒಬ್ಬ ಭರವಸೆಯ ನಾಟಕಕಾರರಾಗಿ ಗಮನ ಸೆಳೆಯುತ್ತಾರೆ.

ಪ್ರೊ|| ಶಿವರಾಮಯ್ಯ
ನಂ. ೧೭೨, ಐಸೆಕ್ ರೋಡ್, ಟೀಚರ್ಸ್ ಕಾಲೋನಿ, ನಾಗರಬಾವಿ
ಬೆಂಗಳೂರು - ೫೬೦ ೦೭೨

## ನನ್ನ ನಿನ್ನ ನಡುವೆ...



ಮಾತು
ಮಾತನು ಸೋಲಿಸಿ,
ಮೌನವಾಗಿಸಿತು ;
ಮೌನ
ಮೌನವ ಮುರಿದು
ಮಾತನಾಡಿಸಿತು.

ಅಲಕ ತೀರ್ಥಹಳ್ಳಿ
ಅಲಕ, ನಂ. ೮೨, ತ್ಯಾಗರಾಜ ರಸ್ತೆ
ಸೀಬಿನಕೆರೆ ಅಂಚೆ,
ತೀರ್ಥಹಳ್ಳಿ - ೫೭೭ ೪೩೨

# ಸ್ತ್ರೀವಾದದ ಇತ್ತೀಚಿನ ಒಲವುಗಳು

**ಕ**ಳೆದೆರಡು ದಶಕಗಳಲ್ಲಿ ಜಾಗತಿಕ ವಿದ್ಯಮಾನಗಳಲ್ಲಿ ಉಂಟಾಗುತ್ತಿರುವ ಬದಲಾವಣೆಗಳು ಭಾರತೀಯ ಹೆಣ್ಣಿನ ಸ್ಥಿತಿಗತಿಯ ಮೇಲೂ ತನ್ನ ಪರಿಣಾಮಗಳನ್ನು ಉಂಟುಮಾಡುತ್ತಿವೆ. ಈ ಬದಲಾಗುತ್ತಿರುವ ವಿದ್ಯಮಾನಗಳೊಂದಿಗೆ ಯಾವುದೇ ಜೀವಂತ ಚಿಂತನೆಯಾದರೂ ಬದಲಾಗುವ ತುರ್ತು ಇದ್ದೇ ಇರುತ್ತದೆ. ಭಾರತದಂತಹ ಬಹುಮುಖೀ ಸಮಾಜದ ನಾನಾಸ್ತರಗಳಲ್ಲಿರುವ ಮಹಿಳೆಯು ತನ್ನದೇ ವಿಭಿನ್ನ ಸಮಸ್ಯೆಗಳನ್ನು ನಿಭಾಯಿಸುವುದರಲ್ಲಿ ಮಗ್ನಳಾಗಿದ್ದಾಳೆ. ಉನ್ನತ ಶಿಕ್ಷಣ, ಉದ್ಯೋಗಗಳು ಬಿಡುಗಡೆಯ ದಾರಿ ಎಂದು ನಂಬಿದ್ದ ಮಹಿಳೆಯು ಇವುಗಳನ್ನು ಪಡೆದುಕೊಂಡ ಮೇಲೂ ಇವುಗಳ ಒಳಸುಳಿಯೊಳಗೆ ಸಿಲುಕಿ ಮತ್ತೆ ಬಿಡುಗಡೆಯ ಹಾದಿಯನ್ನು ಹುಡುಕಬೇಕಾದ ಸಂದಿಗ್ಧದಲ್ಲಿದ್ದಾಳೆ. ಈ ಪರಿಸ್ಥಿತಿಗಳೇ ಸ್ತ್ರೀವಾದವು ಒಡ್ಡಿಕೊಳ್ಳಬೇಕಾದ ಸಂಕೀರ್ಣ ಸ್ಥಿತಿಯನ್ನು ವಿಶ್ಲೇಷಿಸುತ್ತವೆ.

ಕಳೆದ ಕಾಲು ಶತಮಾನದಲ್ಲಿ ಭಾರತೀಯ ಸ್ತ್ರೀವಾದವು ಚಿಂತನೆಯ ಹೊಸ ಹೊಸ ಮಗ್ಗುಲುಗಳಿಗೆ ಚಾಚಿಕೊಳ್ಳುತ್ತಾ ತನ್ನ ಚಲನಶೀಲತೆಯ ಮೂಲಕ ವ್ಯಾಪಕ ವಿಸ್ತಾರವನ್ನು ಗಳಿಸಿಕೊಳ್ಳುತ್ತಿದೆ. ಭಾರತದಲ್ಲಿ ಸ್ತ್ರೀವಾದೀ ಪ್ರಜ್ಞೆಯು ತೀರಾ ಇತ್ತೀಚಿನದಲ್ಲವಾದರೂ ಸ್ತ್ರೀವಾದವು ಒಂದು ಸಿದ್ಧಾಂತವಾಗಿ ಪ್ರಚಲಿತವಾಗಿ ಬೇರೂರಲು ಆರಂಭಿಸಿದ್ದು ಕಳೆದ ಕಾಲು ಶತಮಾನದಿಂದೀಚೆಗೆ. ಆರಂಭದ ಹಂತದಲ್ಲಿ ಪಾಶ್ಚಾತ್ಯ ಸ್ತ್ರೀವಾದೀ ಚಿಂತನೆಗಳು ನಮ್ಮ ಮೇಲೆ ಸಾಕಷ್ಟು ಪ್ರಭಾವಗಳನ್ನು ಬೀರಿವೆ. ಕಾಲಾಂತರದಲ್ಲಿ ಇವುಗಳನ್ನು ಮೀರಿ ಭಾರತೀಯ ಸಂದರ್ಭಗಳಿಗೆ ಅನುಗುಣವಾಗಿ ಸ್ತ್ರೀವಾದವನ್ನು ನಿರ್ವಚಿಸಿಕೊಂಡಿದ್ದು ಭಾರತೀಯ ಸ್ತ್ರೀವಾದದ ಮುಖ್ಯ ಬೆಳವಣಿಗೆಯಾಗಿದೆ.

ಸ್ತ್ರೀವಾದದ ಅಸ್ತಿತ್ವವನ್ನು ಎರಡು ನೆಲೆಗಳಲ್ಲಿ ಗುರುತಿಸಬಹುದಾಗಿದೆ. ಒಂದು, ಬೌದ್ಧಿಕಮಟ್ಟದ ಉನ್ನತ ಚಿಂತನೆಗಳಾದರೆ ಇನ್ನೊಂದು ಶ್ರಮಜೀವಿ ಮಹಿಳೆಯರಿಗೆ ಪ್ರಾಯೋಗಿಕವಾಗಿ ಬಿಡುಗಡೆ ಸಾಧ್ಯವಾಗಿಸಬಲ್ಲ ಚಳುವಳಿಗಳು. ಬೌದ್ಧಿಕಮಟ್ಟದ ಉನ್ನತ ಚಿಂತನೆಗಳು ಆರಂಭದಲ್ಲಿ ಶೈಕ್ಷಣಿಕ ವಲಯದ ಬುದ್ಧಿಜೀವಿಗಳಿಗೆ ಸೀಮಿತಗೊಂಡರೂ, ಅದು ಮುಂದೆ ಶ್ರಮಜೀವಿಗಳ ತನಕವೂ ಹರಿದುಬರುವುದಕ್ಕೆ ವೇದಿಕೆಯಾಗಿರುತ್ತದೆ ಎನ್ನುವುದನ್ನು ಮರೆಯುವಂತಿಲ್ಲ.

ಇಂದಿಗೂ ಕೂಡ ಅನೇಕರಿಗೆ ಸ್ತ್ರೀವಾದವು ಪಾಶ್ಚಾತ್ಯಪ್ರಣೀತ ಹಾಗೂ ಮಧ್ಯಮವರ್ಗದ ಬುದ್ಧಿಜೀವಿಗಳ ಹಳಹಳಿಕೆಯಂತೆ ಕಾಣಿಸುತ್ತಿದೆ. ಪಾಶ್ಚಾತ್ಯರ ಅನುಭವ ಮೂಲದಿಂದ ಹುಟ್ಟಿದ ಈ ವಾದವು ಭಾರತೀಯ ಸಮಾಜಕ್ಕಾಗಲೀ, ಸಂದರ್ಭಕ್ಕಾಗಲೀ ಒಗ್ಗುವಂಥದಲ್ಲ ಎಂಬ ವ್ಯಂಗ್ಯಗಳ ನಡುವೆಯೇ ಇಂದು ಭಾರತೀಯ ಸ್ತ್ರೀವಾದ ಈ ಮಿತಿಗಳನ್ನು ದಾಟಿದೆ. ಈ ಪ್ರಶ್ನೆಗಳಿಗೆ ಉತ್ತರಿಸಿದೆ.

ವೈಯಕ್ತಿಕ ನೆಲೆಯಿಂದ ಸಾರ್ವಜನಿಕದೆಡೆಗೆ ಹೆಜ್ಜೆಯಿಟ್ಟ ಸ್ತ್ರೀವಾದೀ ಚಿಂತನೆಯು ಇಂದೂ ಕೂಡ ಈ ಎರಡೂ ನೆಲೆಗಳಲ್ಲಿ ಅಸ್ತಿತ್ವದಲ್ಲಿದೆ ಎನ್ನುವುದೂ ಕೂಡ ಸತ್ಯವೇ. ಯಾಕೆಂದರೆ ಈಗಲೂ ಭಾರತೀಯ ಸಮಾಜದಲ್ಲಿ 'ಸ್ತ್ರೀವಾದ'ದ ಪರಿಚಯವೇ ಇಲ್ಲದ ಲಕ್ಷಾಂತರ ಸ್ತ್ರೀ ಪುರುಷರು ನಮ್ಮ ನಡುವೆ ಇದ್ದಾರೆ. ಇವರನ್ನು ಹೊಸದಾಗಿ ತಲುಪಬೇಕಾದಾಗೆಲ್ಲಾ, ಆರಂಭದಲ್ಲಿ ವೈಯಕ್ತಿಕ ನೆಲೆಯಿಂದಲೇ ಪ್ರಾರಂಭಿಸಬೇಕಾದ ಅನಿವಾರ್ಯತೆ ನಮಗಿದೆ. ಕ್ಲೀಷೆ ಎನಿಸಿದರೂ ಮತ್ತೆ ಮತ್ತೆ ಶೋಷಣೆಯ ಮಾತನ್ನು, ಹೆಣ್ಣಿನ ಹಕ್ಕುಗಳ ಪರಿಚಯವನ್ನು, ವ್ಯವಸ್ಥೆ ಮತ್ತು ಪುರುಷಾಧಿಕಾರದ ಕರಾಳ ಮುಖಗಳನ್ನೂ ಸರಳ ಮಾತುಗಳಲ್ಲಿ ತಿಳಿಹೇಳಬೇಕಾದ ಅಗತ್ಯವಿದೆ. ಈ ಹಂತದಲ್ಲಿನ ಸ್ತ್ರೀವಾದವು ಮಹಿಳೆಯ ಮೇಲಿನ ದಬ್ಬಾಳಿಕೆಯ ಚಾರಿತ್ರಿಕ ವಿಶ್ಲೇಷಣೆಯೆಡೆಗೆ ಮುಖಮಾಡುತ್ತದೆ.

ಇತ್ತೀಚಿನ ಸ್ತ್ರೀವಾದೀ ಚಿಂತನೆಗಳು ಮುಖ್ಯವಾಗಿ ದೇಶೀವಾದ, ಸಂಸ್ಕೃತಿ ಚಿಂತನೆಗಳ ಪ್ರಭಾವಲಯದಲ್ಲಿ ವಿಭಿನ್ನ ಮಗ್ಗುಲುಗಳಲ್ಲಿ ಮೈಚಾಚಿಕೊಳ್ಳುತ್ತಿವೆ. ಸ್ತ್ರೀವಾದವು ರಾಜಕೀಯ, ಸಾಂಸ್ಕೃತಿಕ, ಸಾಹಿತ್ಯಕ ವಲಯಗಳಲ್ಲಿ ತನ್ನನ್ನು ಗುರುತಿಸಿಕೊಂಡಿದೆ. ಅಂತಃಶಾಸ್ತ್ರೀಯ ಅಧ್ಯಯನಗಳ ಮೂಲಕ ಬೆಳೆದುಬಂದಿದೆ. ಪಾಶ್ಚಾತ್ಯರ ಮೂಲಕ ಬಂದ ತಿಳಿವಿನಲ್ಲಿ ಭಾರತೀಯ ಸಂಸ್ಕೃತಿ ಸಂಪ್ರದಾಯಗಳನ್ನು ನಿರಾಕರಿಸುವುದು ಪ್ರಗತಿಪರತೆಯ ಸಂಕೇತವಾಗಿ ಕಾಣತೊಡಗಿತು. ವಸಾಹತು ಕಾಲಘಟ್ಟದಲ್ಲಿ ಹುಟ್ಟಿಕೊಂಡ ಹೊಸ ಚಿಂತನಕ್ರಮವು ಬ್ರಿಟಿಷರು ಕಲಿಸಿದ ಮಾದರಿಯಲ್ಲಿ ಆಧುನಿಕತೆಯನ್ನು ಗ್ರಹಿಸಿತು. ಭಾರತದಲ್ಲಿನ ಕೆಲವೊಂದು ಆಚರಣೆಗಳು ಅನಾಗರಿಕವಾಗಿದ್ದು ಅವನ್ನು ಬದಲಾಯಿಸುವುದರ ಮೂಲಕ ಭಾರತೀಯರನ್ನು ತಾವು ಉದ್ಧರಿಸಲು ಸಮರ್ಥರು ಎಂಬ ನಂಬಿಕೆಯನ್ನು ಬ್ರಿಟಿಷರು ನಮ್ಮಲ್ಲಿ ಹುಟ್ಟುಹಾಕಿದರು. ಈ ಹಿನ್ನೆಲೆಯಲ್ಲಿಯೇ ಭಾರತದ 'ಸತಿ' ಪದ್ಧತಿಯ ಕರಾಳತೆಯನ್ನು ಜಗತ್ತಿಗೆ ತೋರಿದರು. ಭಾರತೀಯರು ಇವುಗಳ ವಿರುದ್ಧ ಯೋಚಿಸಲು ಇಂತಹ ಕ್ರಮಗಳು ಕಾರಣವಾದುದು ನಿಜವಾದರೂ ಕಾಲಕ್ರಮೇಣ ಈ ಯೋಚನಾಕ್ರಮದ ಹಿಂದಿರುವ ಹುನ್ನಾರಗಳನ್ನು ಕೆಲಚಿಂತಕರು ಬಯಲು ಮಾಡಿದ್ದಾರೆ. ಇಂತಹ ಚಿಂತಕರಿಂದ ಪ್ರೇರಿತರಾದವರಲ್ಲಿ ಸ್ತ್ರೀವಾದಿಗಳೂ ಇದ್ದಾರೆ. ಅನೇಕ ವರ್ಷಗಳ ಕಾಲ ಸಹಗಮನ, ಬಾಲ್ಯವಿವಾಹ, ವಿಧವಾ ವಿವಾಹ, ವರದಕ್ಷಿಣೆಯಂತಹ ವಿಚಾರಗಳ ವಿರುದ್ಧ ಹೋರಾಡಿದ ಸ್ತ್ರೀವಾದಿಗಳು ಈ ಹೊಸದಿಕ್ಕಿನ ಚಿಂತನೆಯ ಪ್ರಭಾವಕ್ಕೆ ವಿಭಿನ್ನವಾದ ನೆಲೆಯಲ್ಲಿ ಯೋಚಿಸಲು ಪ್ರಾರಂಭಿಸಿದ್ದನ್ನೂ ಕಾಣಬಹುದು.

'ವರದಕ್ಷಿಣೆ ವಿರೋಧಿ ಚಳುವಳಿಯಲ್ಲಿ ಅನೇಕ ವರ್ಷಗಳ ಕಾಲ ಭಾಗಿಯಾಗಿದ್ದ ನಾನು ತಪ್ಪು ನಿಲುವನ್ನು ತಳೆದಿದ್ದೆ' ಎನ್ನುವ ಮಧು ಕಿಶ್ವರ್, 'ವರದಕ್ಷಿಣೆಯು ಎಷ್ಟೋ ಸಂದರ್ಭದಲ್ಲಿ ಹೆಣ್ಣಿಗೆ ಸಿಗಬಹುದಾದ ಏಕಮಾತ್ರ ಆಸ್ತಿ, ಅದನ್ನು ಕೊಡದಿರುವಂತೆ ಹೇಳಲು ನನಗೆ ಯಾವ ಹಕ್ಕೂ ಇಲ್ಲ' ಎಂದು ಹೇಳುವಲ್ಲಿ ಈ

**ಸಬಿತಾ**

ವಿರುದ್ಧನೆಲೆಯ ಚಿಂತನೆ ಇದೆ. ಅವರ ಈ ಹೇಳಿಕೆ ತಕ್ಷಣಕ್ಕೆ ನಮಗೆ ಗೊಂದಲವನ್ನುಂಟುಮಾಡುವುದರಲ್ಲಿ ಯಾವ ಆಶ್ಚರ್ಯವೂ ಇಲ್ಲ. ಯಾಕೆಂದರೆ, ಈ ವರದಕ್ಷಿಣೆಯ ಹಣ ಯಾವ ಹಂತದಲ್ಲೂ ಹೆಣ್ಣಿಗೆ ಸಿಕ್ಕಿರುವುದಿಲ್ಲ ಎನ್ನುವ ವಾಸ್ತವವನ್ನು ನಾವು ಮರೆಯುವಂತಿಲ್ಲ. ಹಾಗೆಯೇ, ಈ ಸಮಸ್ಯೆ ಬಾಧಿಸುತ್ತಿರುವುದು ಸಂಸ್ಕೃತೀಕರಣಗೊಂಡ ಜಾತಿಜನಾಂಗಗಳಲ್ಲೇ ಹೊರತು ಎಷ್ಟೋ ಕೆಳವರ್ಗದ ಜನರಿಗೆ ಇದೊಂದು ಅಸ್ತಿತ್ವದಲ್ಲಿಲ್ಲದ ಪದ್ಧತಿ ಎಂಬ ಸೂಕ್ಷ್ಮವನ್ನು ನಾವು ಗಮನಿಸದೇ ಇರುವುದೂ ಸರಿಯಲ್ಲ. ನಾವು ಹೋರಾಟ ಮಾಡಬೇಕಾಗಿರುವುದು ಅಥವಾ ನಮ್ಮ ಶ್ರಮವನ್ನು ಇಷ್ಟೊಂದು ವರ್ಷಗಳ ಕಾಲ ವ್ಯಯ ಮಾಡಿರುವುದು ಇಂತಹ ಮೇಲ್ಮಟ್ಟದ ವಿಚಾರಗಳಿಗಷ್ಟೇ ಸೀಮಿತವಾಗಿದೆ ಎಂಬುದು ಮಧು ಕಿಶ್ವರ್ ಅವರ ವಾದ. ಅದರ ಬದಲಿಗೆ ಅವಳಿಗೆ ಆಸ್ತಿಯ ಹಕ್ಕನ್ನು ಒದಗಿಸಲು ಹೋರಾಟ ಮಾಡುವುದು ಹೆಚ್ಚು ಉಪಯುಕ್ತವಾದದ್ದು ಎಂಬ ಕಡೆಗೆ ನಮ್ಮ ಗಮನವನ್ನು ಅವರು ಸೆಳೆಯುತ್ತಾರೆ ಎಂಬುದನ್ನೂ ಗಮನಿಸಬೇಕಾಗುತ್ತದೆ.

ಹಾಗೆಯೇ, ಸ್ತ್ರೀಯರ ವಿಮೋಚನೆಯ ಮಾದರಿಗಳನ್ನು ಮೌಖಿಕ ಪರಂಪರೆಯಲ್ಲಿ, ಜನಪದ ಸಂಸ್ಕೃತಿಯಲ್ಲಿ ಗುರುತಿಸುವ ಇನ್ನೊಂದು ರೀತಿಯ ಸಿದ್ಧಾಂತದ ಕ್ರಮವು ಬಹಳ ಪ್ರಚಲಿತದಲ್ಲಿರುವುದನ್ನು ಕಾಣಬಹುದು. ಈ ಕ್ರಮವು ಅನೇಕ ಒಳನೋಟಗಳನ್ನು ಒದಗಿಸಿದೆ. ಅನಕ್ಷರಸ್ಥ ಹೆಣ್ಣುಮಕ್ಕಳು ಕೆಲವು


**ವೈಯಕ್ತಿಕ ನೆಲೆಯಿಂದ ಸಾರ್ವಜನಿಕದೆಡೆಗೆ ಹೆಜ್ಜೆಯಿಟ್ಟ ಸ್ತ್ರೀವಾದೀ ಚಿಂತನೆಯು ಇಂದೂ ಕೂಡ ಈ ಎರಡೂ ನೆಲೆಗಳಲ್ಲಿ ಅಸ್ತಿತ್ವದಲ್ಲಿದೆ ಎನ್ನುವುದೂ ಕೂಡ ಸತ್ಯವೇ. ಯಾಕೆಂದರೆ ಈಗಲೂ ಭಾರತೀಯ ಸಮಾಜದಲ್ಲಿ 'ಸ್ತ್ರೀವಾದ'ದ ಪರಿಚಯವೇ ಇಲ್ಲದ ಲಕ್ಷಾಂತರ ಸ್ತ್ರೀ ಪುರುಷರು ನಮ್ಮ ನಡುವೆ ಇದ್ದಾರೆ. ಇವರನ್ನು ಹೊಸದಾಗಿ ತಲುಪಬೇಕಾದಾಗೆಲ್ಲಾ, ಆರಂಭದಲ್ಲಿ ವೈಯಕ್ತಿಕ ನೆಲೆಯಿಂದಲೇ ಪ್ರಾರಂಭಿಸಬೇಕಾದ ಅನಿವಾರ್ಯತೆ ನಮಗಿದೆ.**

ಸಮಸ್ಯೆಗಳನ್ನು ತಾವೇ ನಿಭಾಯಿಸುವಾಗ ಅವರಲ್ಲಿರುವ ಸಾಮರ್ಥ್ಯ, ಛಲ, ಜಾಣ್ಮೆಗಳನ್ನು ಅನಾವರಣಗೊಳಿಸುವುದರಲ್ಲಿ ಈ ಕ್ರಮವು ಸಫಲವಾಗಿದೆ. ಆದರೆ, ಇಲ್ಲಿ ಜನಪದ ಮಾದರಿಗಳನ್ನು ವೈಭವೀಕರಿಸುವ ಪ್ರಯತ್ನಗಳೂ ಕಾಣುತ್ತವೆ. ಕರಾವಳಿ ಜಾನಪದ ಸಾಹಿತ್ಯದಲ್ಲಿ ಸ್ತ್ರೀವಾದೀ ನೆಲೆಗಳು ಎಂಬ ಕೃತಿಯಲ್ಲಿ ಗಾಯತ್ರೀ ನಾವಡರು ಉಲ್ಲೇಖಿಸುವ 'ದ್ರೌಪದೀ ಪಗಡೆ ಆಟ ಆಡಿದ್ದು' ಬಹಳ ವಿಶಿಷ್ಟವಾದ ಉದಾಹರಣೆ. ಆದರೆ ಅದರ ಬೆನ್ನಲ್ಲೇ 'ಸಿರಿ'ಯ ವೈಭವೀಕರಣವನ್ನೂ ಕಾಣಬಹುದು. ಮಾತೃಮೂಲೀಯ ಪಾತ್ರಗಳು ಹಲವು ಬಾರಿ 'ಮಾದರಿ'ಗಳೆಂಬಂತೆ ಚಿತ್ರಿತವಾಗುತ್ತವೆ. ಆದರೆ ಈ ಮಾದರಿಗಳೆಲ್ಲವೂ ವಾಸ್ತವದಲ್ಲಿ ವಿಮೋಚನೆಯನ್ನು ಸಾಧಿಸಿವೆಯೇ ? ಇಂದಿಗೂ ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅಸ್ತಿತ್ವದಲ್ಲಿರುವ ಮಾತೃಮೂಲೀಯ ಕುಟುಂಬಗಳಲ್ಲಿ ಹೆಣ್ಣು ವಿಮೋಚಿತಳಾಗಿದ್ದಾಳೆಯೇ ಎಂಬುದನ್ನು ಪರೀಕ್ಷಿಸುವ ಅಗತ್ಯವಿದೆ. ಈ ಕುಟುಂಬಗಳು ಸಂಸ್ಕೃತೀಕರಣಕ್ಕೆ ಒಳಗಾಗಿದ್ದು ಹೆಣ್ಣಿನ ಪಾಲಿಗೆ ಆಸ್ತಿ ಬರುವುದು ಕೇವಲ ಕಾಗದದ ಮೇಲಿನ ಹಕ್ಕಾಗಿದೆ. ಈ ಜಾತಿಗಳಲ್ಲಿ ವರದಕ್ಷಿಣೆ ಪದ್ಧತಿಯು ತಾರಕಕ್ಕೇರಿದ್ದು ಈ ಕಾರಣಕ್ಕಾಗಿಯೇ. ಆಕೆ ಉನ್ನತ ಶಿಕ್ಷಣದ ಸಾಧ್ಯತೆಗಳಿಂದ ವಂಚಿತಳಾಗಿದ್ದಾಳೆ. (ಆಸ್ತಿ ಹೆಣ್ಣಿಗೆ ದಕ್ಕಿಯೂ ವರದಕ್ಷಿಣೆ ವಿಪರೀತವಾಗಿರುವ ಈ 'ವಿಪರೀತ' ಪರಿಸ್ಥಿತಿಯ ಬಗೆಗೂ ಗಂಭೀರವಾಗಿ ಯೋಚಿಸಬೇಕಿದೆ. ಮಧು ಕಿಶ್ವರ್ ಇಲ್ಲಿ ಮತ್ತೊಮ್ಮೆ ನೆನಪಾಗುತ್ತಾರೆ.) ಸಂಸ್ಕೃತಿ ಚಿಂತಕರು ತಮ್ಮ ಬಹುಮುಖೀ ತತ್ವಗಳನ್ನು ಕೇಂದ್ರ ಮತ್ತು ಅಂಚುಗಳ ಪರಿಕಲ್ಪನೆಯ ಮೂಲಕ ಒಡೆದು ನೋಡಲು ಪ್ರಯತ್ನಿಸುತ್ತಾರೆ. ಈ ವಿಧಾನವೂ ಇತ್ತೀಚಿನ ದಿನಗಳಲ್ಲಿ ವ್ಯಾಪಕವಾಗಿ ಅಸ್ತಿತ್ವದಲ್ಲಿದೆ. ಇದು ಇಡೀ ಸ್ತ್ರೀಕುಲದ ಸಮಸ್ಯೆಗಳನ್ನು ಏಕವಾಗಿ ಗಣಿಸದೇ ಅದರೊಳಗಿನ ಮಜಲುಗಳನ್ನು ದೃಷ್ಟಿಯಲ್ಲಿಟ್ಟುಕೊಳ್ಳುತ್ತದೆ. 'ಭಾರತೀಯ ಮಹಿಳೆ' ಎಂದಾಗ ಅದರ ಅಂಚಿನಲ್ಲಿರುವ ದಲಿತ ಮಹಿಳೆಗೆ ಅನ್ಯಾಯವಾಗುತ್ತದೆ. ಯಾಕೆಂದರೆ ಅವಳ ಸಮಸ್ಯೆಗೂ ಮೇಲ್ಜಾತಿ ಮಹಿಳೆಯೊಬ್ಬಳ ಸಮಸ್ಯೆಗೂ ಅಜಗಜಾಂತರವಿದೆ. ನಗರ-ಹಳ್ಳಿಯ ಮಹಿಳೆಯರ ಸಮಸ್ಯೆಗಳು ಒಂದೇ ತೆರನಾದವಲ್ಲ. ಹೀಗಾಗಿ ಇಂತಹ ಏಕಕೇಂದ್ರಿತ ಚಿಂತನೆಯನ್ನು ನಿರಾಕರಿಸಿ ಪ್ರತಿ ಪ್ರಾದೇಶಿಕ, ಜನಾಂಗಿಕ ಸಂಸ್ಕೃತಿಯೊಂದರಿಂದ ರೂಪಿಸಲ್ಪಟ್ಟ ಮಹಿಳೆಯನ್ನು ಆ ಹಿನ್ನೆಲೆಯಲ್ಲೇ ನೋಡಬೇಕೆಂದು ಈ ಚಿಂತನೆ ಒತ್ತಾಯಿಸುತ್ತದೆ. ಹಾಗೆಯೇ, ಇದುವರೆಗೂ ಬಂದಿರುವ ಸ್ತ್ರೀವಾದಿ ಚಿಂತನೆಯು ನಗರಕೇಂದ್ರಿತ ಮೇಲ್‌ಮಧ್ಯಮ ವರ್ಗದ ಚಿಂತನೆಯಷ್ಟೇ ಆಗಿ ಕಂಡಿದ್ದನ್ನು ಇವರು ನಿರಾಕರಿಸುತ್ತಾರೆ. ಈ ವಾದವೂ ಕೂಡ ಸಮರ್ಥ ಮಾನದಂಡವಾಗಿರುವುದು ನಿಜ. ಆದರೆ, ಕೆಲವೊಮ್ಮೆ ಈ ಒಡೆದು ನೋಡುವ ಪರಿಕಲ್ಪನೆಯೂ ಒಂದು ರೀತಿಯ 'ಗೀಳಾ'ಗಿ ಮಾರ್ಪಡುವುದು ಇದರ ಮಿತಿಯಾಗುತ್ತದೆ. ಪ್ರತಿ ಮಹಿಳೆಯ ಸಮಸ್ಯೆಯೂ ಭಿನ್ನವೇ ಆಗಿರಬಹುದಾದರೂ ಮಹಿಳೆಯರೆಲ್ಲರಿಗೂ ಸಾಮಾನ್ಯವಾದ ಕೆಲವು ಸಮಸ್ಯೆಗಳಿವೆ ಎಂಬುದನ್ನೂ ಮರೆಯುವಂತಿಲ್ಲ!

ಪಶ್ಚಿಮದ ಸ್ತ್ರೀವಾದವನ್ನು ಇಲ್ಲಿ ನೇರವಾಗಿ ಅನ್ವಯ ಮಾಡದೆ, ಭಾರತದಂತಹ ಸಮಾಜಗಳು ಹೊಂದಿರುವ ವಿಶಿಷ್ಟತೆಗಳನ್ನು ಗಮನದಲ್ಲಿಟ್ಟುಕೊಂಡು ಅಧ್ಯಯನ ಮಾಡಬೇಕೆಂಬ ವಾದವಿದೆ. ಲೈಂಗಿಕತೆ, ತಾಯ್ತನ, ಸ್ತ್ರೀತ್ವಗಳ ಕುರಿತು ಮೊದಲ ವಿಶ್ವದ ಸ್ತ್ರೀವಾದವು ಹೇಳುವ ತಾತ್ವಿಕತೆಯನ್ನು ತೃತೀಯ ಜಗತ್ತಿನ ತಾತ್ವಿಕತೆಯನ್ನಾಗಿ ಹೇರುವ ಪ್ರವೃತ್ತಿಯನ್ನು ಇವರು ವಿರೋಧಿಸುತ್ತಾರೆ. ಮಹಾಶ್ವೇತಾದೇವಿಯವರ ಸ್ತನದಾಯಿನೀ ಕತೆಯನ್ನು ಆಧಾರವಾಗಿಟ್ಟುಕೊಂಡು 'ತಾಯ್ತನ'ದ ಭಿನ್ನ ವ್ಯಾಖ್ಯಾನ ಮಾಡುವ ಗಾಯತ್ರೀ ಸ್ಪೀವಾಕ್‌ರಂತಹ ಚಿಂತಕರು ಹೊಸ ರೀತಿಯ ಓದಿನ ಹಿನ್ನೆಲೆಯಲ್ಲಿ ಸ್ತ್ರೀವಾದವನ್ನು ಜಾಗತಿಕಗೊಳಿಸಬೇಕಾದ ಅಗತ್ಯವಿಲ್ಲ ಎನ್ನುತ್ತಾರೆ. ಹಾಗೆಯೇ ಎಡ್ವರ್ಡ್ ಸಯಿದರ 'ಓರಿಯಂಟಲಿಸಂ' ಸ್ತ್ರೀವಾದದ ಮೇಲೂ ಪ್ರಭಾವ ಬೀರಿದೆ. ಓರಿಯಂಟಲಿಸಂ ಮನೋಗತಿಗೆ ವಿರುದ್ಧವಾದ ಓದಿನ (ಉದಾ : ಸೂಸಿ ಥಾರು ಮತ್ತು ಕೆ. ಲಲಿತಾ) ಕ್ರಮವು ಹಲವು ಒಳನೋಟಗಳನ್ನು ದಾಖಲಿಸುತ್ತವೆ.

ಈ ಎಲ್ಲದರ ನಡುವೆ ಆರಂಭದಿಂದ ಇಲ್ಲಿಯವರೆಗೂ ಎಡಪಂಥೀಯ ಒಲವುಳ್ಳ ಸ್ತ್ರೀವಾದಿ ಚಿಂತಕರು ತಮ್ಮದೇ ಆದ ಮಾರ್ಗದಲ್ಲಿ ಮುನ್ನಡೆದಿದ್ದಾರೆ. ಯಾವುದೇ ದೇಶದ ಸರ್ಕಾರಗಳು ತೆಗೆದುಕೊಳ್ಳುವ ಆರ್ಥಿಕ ನಿಲುವುಗಳು ಆ ದೇಶದ ಪ್ರತಿಯೊಬ್ಬರ ಹಣೆಬರಹವನ್ನೂ ನಿರ್ಣಯಿಸುತ್ತವೆ. ಅದು ಮೊದಲು ಪರಿಣಾಮ ಬೀರುವುದೇ ಬಡವರು, ದಮನಿತರು ಮತ್ತು ಮಹಿಳೆಯರ ಮೇಲೆ. ಹೀಗಿರುವಾಗ ಮಾರ್ಕ್ಸ್‌ವಾದಿ ದೃಷ್ಟಿಕೋನವನ್ನು ಪಾಶ್ಚಾತ್ಯ ಮೂಲದ್ದೆಂದಾಗಲೀ, ಸವಕಲು ವಾದವೆಂದಾಗಲೀ ತಳ್ಳಿಹಾಕಲು ಸಾಧ್ಯವಿಲ್ಲ. ಮಾರ್ಕ್ಸ್‌ವಾದಿಗಳ ಸಾಂಸ್ಕೃತಿಕ ನೋಟಗಳು – ಗ್ರಾಮ್ಷೀ ಮೊದಲಾದವರ ಚಿಂತನೆಗಳು ಖಂಡಿತವಾಗಿಯೂ ಯಜಮಾನಿಕೆ, ದಬ್ಬಾಳಿಕೆಗಳ ಸರಿಯಾದ ವಿಶ್ಲೇಷಣೆಗಳಿಗೆ ಸೂಕ್ತ ಹತ್ಯಾರುಗಳೇ ಆಗಿವೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಜಾಗತೀಕರಣವು ಉಂಟುಮಾಡುತ್ತಿರುವ ಪರಿಣಾಮಗಳ ಹಿನ್ನೆಲೆಯಲ್ಲಿ ಮಹಿಳೆಯನ್ನು ನೋಡುವ ಗಂಭೀರ ಪ್ರಯತ್ನವು ಇತ್ತೀಚಿನ ಎಡಪಂಥೀಯ ಸ್ತ್ರೀವಾದಿಗಳ ತುರ್ತಾಗಿರುವುದನ್ನು ಗುರುತಿಸಬಹುದು.

ಜಾಗತೀಕರಣದ ಕಾರಣವಾಗಿ ಸಾರ್ವಜನಿಕ ಶಿಕ್ಷಣ, ಆರೋಗ್ಯ, ಉದ್ಯೋಗ ಕ್ಷೇತ್ರಗಳಲ್ಲಿನ ಬದಲಾವಣೆಗಳು ಮೊದಲು ಪರಿಣಾಮ ಬೀರುವುದು ಮಹಿಳೆಯ ಮೇಲೆ. ಈಗಿನ್ನೂ ಮೀಸಲಾತಿಯಂತಹ ಯೋಜನೆಗಳ ಫಲವನ್ನು ಅನುಭವಿಸಲು ಆರಂಭಿಸಿರುವ ದಲಿತ, ಶೂದ್ರ ಮಹಿಳೆಯರಿಗೆ ಜಾಗತೀಕರಣದ ಪ್ರಕ್ರಿಯೆಯಿಂದಾಗಿ ಮತ್ತೆ ಹಿನ್ನಡೆ ಉಂಟಾಗುತ್ತದೆ. ಮಾತ್ರವಲ್ಲ, ಅಸಂಘಟಿತ ವಲಯಗಳಲ್ಲಿ ದುಡಿಯುತ್ತಿರುವ ಮಹಿಳೆಯರು ಅಭದ್ರತೆಯಿಂದ ನರಳುವಂತಾಗುತ್ತದೆ. ಅನಿಶ್ಚಿತ ಉದ್ಯೋಗ ಪರಿಸ್ಥಿತಿಗಳು ಅವಳ ಆದಾಯ ಮೂಲಗಳ ಮೇಲೆ ವಿಪರೀತ ಪರಿಣಾಮಗಳನ್ನು ಬೀರುತ್ತಿವೆ.

ಎಡಪಂಥೀಯ ಚಿಂತಕರು ಮಹತ್ವ ನೀಡುವ ಇನ್ನೊಂದು ಅಂಶವೆಂದರೆ, ಮತೀಯ ಮೂಲಭೂತವಾದದ ಬಗೆಗಿನ ಆತಂಕ. ಮಹಿಳೆಯು ಮತ್ತೆ ಮನೆಯೊಳಗೆ ಬಂಧಿಯಾಗುವ ವಿಪರೀತ ವಾತಾವರಣ ನಿರ್ಮಾಣಕ್ಕೆ ಇದು ಕಾರಣವಾಗುವುದರಿಂದ ಇದರ ಬಗೆಗೂ ಸ್ತ್ರೀವಾದಿಗಳು ದನಿ ಎತ್ತುತ್ತಿದ್ದಾರೆ. ಹಾಗೆಯೇ ಬಂಡವಾಳಶಾಹಿ ಜಗತ್ತು ಹೆಣ್ಣನ್ನು ಸರಕಾಗಿ ನೋಡುವ ಹಿನ್ನೆಲೆಯಲ್ಲಿ ಸೌಂದರ್ಯ ಸ್ಪರ್ಧೆಗಳು, ಫ್ಯಾಷನ್ ಶೋಗಳು, ಜಾಹೀರಾತುಗಳು ಹೆಚ್ಚಿನ ಮುನ್ನೆಲೆಗೆ ಬರುತ್ತಿದ್ದು ಇದು ಇಂದಿನ ಯುವತಿಯರ ಪ್ರಧಾನ ಆಕರ್ಷಣೆಗಳಾಗುತ್ತಿರುವ ಅಪಾಯದ ವಿರುದ್ಧವೂ ಸ್ತ್ರೀವಾದ ದನಿಯೆತ್ತುತ್ತಿದೆ.

ಇವುಗಳೆಲ್ಲದರ ನಡುವಿನ ಇನ್ನೊಂದು 'ಪ್ರತಿದಾರಿ'ಯ ಬೆಳವಣಿಗೆಗಳು ಸದ್ಯದ ಸಮಾಜದೊಳಗಿನಿಂದ – ಈ ಯಾವ ತತ್ವಸಿದ್ಧಾಂತದ ಅಡಿಪಾಯಗಳೂ ಇಲ್ಲದೇ ತಲೆ ಎತ್ತುತ್ತಿದೆ. ಇದು ಒಂದು ರೀತಿಯಲ್ಲಿ ಮೇಲೆ ವಿಶ್ಲೇಷಿಸಲಾದ ಎಲ್ಲಾ ಮಾದರಿಯ ಚಿಂತನೆಗಳಿಗೂ ವಿರುದ್ಧ ಹಾಗೂ ಮಾರಕವಾದದ್ದರಿಂದ ಇದನ್ನು ಅವಗಣಿಸುವಂತಿಲ್ಲ. ಮೇಲಿನ ಕೆಲವು ವಿಚಾರಗಳನ್ನೇ – ಉದಾಹರಣೆಗೆ: ಫ್ಯಾಷನ್ ಶೋ, ಸೌಂದರ್ಯ ಸ್ಪರ್ಧೆ ಇತ್ಯಾದಿಗಳನ್ನು ವಿರೋಧಿಸುವ ಬಿಜೆಪಿ ಪ್ರಣೀತ ಮಹಿಳಾ ಘಟಕಗಳು ಇದಕ್ಕೆ ಕಂಡುಕೊಳ್ಳುವ ಉತ್ತರಗಳು ಮಾತ್ರ ಮತ್ತೆ ವೇದಕಾಲೀನ ಮಾದರಿಗೆ ಹಿಂದಿರುಗುವುದು. ಈ ಹಂತದಲ್ಲಿ ಗಮನಿಸಬೇಕಾದ ಇನ್ನೊಂದು ವಿಚಾರವೆಂದರೆ, ಬಿಜೆಪಿ ಜೋರುಮಾತಿನ ಮಹಿಳಾ ಮಣಿಗಳಿಗೆ ಅಧಿಕಾರದ ಮಣೆಯನ್ನು ಉತ್ಸುಕತೆಯಿಂದ ನೀಡುತ್ತಿರುವುದು. ಆದರೆ, ಇವರುಗಳೆಲ್ಲ 'ಬಲಿಪಶು'ಗಳ ರೀತಿಯಲ್ಲೇ ಬಳಕೆಯಾಗುತ್ತಿದ್ದಾರೆ. ಇದರ ಅರಿವಿಲ್ಲದ ಮಧ್ಯಮ ವರ್ಗದ ಮಹಿಳೆಯರು ಈ ಬೆಳವಣಿಗೆಗಳ ಪ್ರಭಾವಲಯಕ್ಕೆ ಹೆಚ್ಚು ಆಕರ್ಷಿತರಾಗುವ ಸಾಧ್ಯತೆಗಳಿವೆ. ಈ ಚಿಂತನೆಗಳ ಹಿಂದಿನ ಹುನ್ನಾರವನ್ನು ಸಾಮಾನ್ಯ ಮಹಿಳೆಯರು ಅರಿಯದೇ ಹೋಗುವ ವಿಪರ್ಯಾಸಗಳೂ ನಮ್ಮ ನಡುವೆ ಇದ್ದು ಸ್ತ್ರೀವಾದವು ಇದನ್ನು ವಿರೋಧಿಸುತ್ತದೆ.

ಗ್ರಾಮಮಟ್ಟದಲ್ಲಿ ಇಂದು ಅಧಿಕಾರ ವಿಕೇಂದ್ರೀಕರಣದಿಂದಾಗಿ ಸ್ವಲ್ಪಮಟ್ಟಿಗಾದರೂ ಹೆಣ್ಣು ಅಸ್ತಿತ್ವವನ್ನು ಪಡೆಯುತ್ತಿದ್ದಾಳೆ. ಮುಖ್ಯವಾಗಿ ಸ್ವಸಹಾಯ ಸಂಘಗಳು, ಅಂಗನವಾಡಿ ಕಾರ್ಯಕರ್ತೆಯರಲ್ಲಿ ಸಂಘಟನಾತ್ಮಕತೆಯನ್ನು ಬೆಳೆಸುವಲ್ಲಿ ಸ್ತ್ರೀವಾದವು ಕೇವಲ ಬೌದ್ಧಿಕ ಮಟ್ಟದಲ್ಲೇ ಉಳಿಯದೆ, ಸಾಮಾನ್ಯ ಸ್ತ್ರೀಯರೆಡೆಗೂ ತಲುಪುವಲ್ಲಿನ ಮೊದಲ ಹೆಜ್ಜೆಗಳು ಎಂದು ಗುರುತಿಸಬೇಕಾಗುತ್ತದೆ. ಪ್ರಾಯೋಗಿಕವಾಗಿಯೂ ಕಾರ್ಯಪ್ರವೃತ್ತವಾಗುತ್ತಿರುವ ಸೂಚನೆಗಳು ಇವು. ಅಂಚಿನಲ್ಲಿರುವ ಅನಕ್ಷರಸ್ಥ ಮಹಿಳೆಯರನ್ನು ಬೇರೆ ರೀತಿಯಲ್ಲಿ ತಲುಪುವುದು ಸಾಧ್ಯವಿಲ್ಲದ ಮಾತು. ಮುಂದಿನ ತಲೆಮಾರಿಗಾದರೂ ಎಚ್ಚರ ಮೂಡಿಸಲು ಬಳಸಿಕೊಳ್ಳಬಹುದಾದ ವೇದಿಕೆಗಳು ಇವು. ಸ್ತ್ರೀವಾದದ ಬೌದ್ಧಿಕಮಟ್ಟದ ಉನ್ನತ ಚಿಂತನೆಗಳು ಸಾಮಾನ್ಯ ಸ್ತ್ರೀಗೆ ಬಿಡುಗಡೆ ತರಬಲ್ಲ ಚಳುವಳಿಗಳಲ್ಲಿ ಪ್ರವಹಿಸಬೇಕಾಗಿದೆ. ಹಾಗಿದ್ದಲ್ಲಿ ಮಾತ್ರ ಅದು ಅರ್ಥಪೂರ್ಣವೆನಿಸಿಕೊಳ್ಳುತ್ತದೆ. ಅಂತಹ ಪ್ರಯತ್ನಗಳೂ ನಮ್ಮ ನಡುವೆ ಇವೆ.

ಸಬಿತಾ
ಕನ್ನಡ ಉಪನ್ಯಾಸಕರು, ಸರ್ ಎಂ. ವಿ. ಸರ್ಕಾರಿ ಕಾಲೇಜು, ಭದ್ರಾವತಿ



# ಎಂ. ಎಸ್. ಕೃಷ್ಣನ್ ಸ್ಮರಣ ಸಂಸ್ಥೆ (ನೋಂ.)

(ನೋಂದಣಿ ಸಂಖ್ಯೆ : ಜಿಎಎನ್-4-00223-2004-05/25.08.2004)
ಸಂಖ್ಯೆ 15, ಎಂಬಿಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - 560 001
ದೂರವಾಣಿ / ಫ್ಯಾಕ್ಸ್ : 22203580/81 e-mail: msktrust@rediffmail.com

## ವಿನಮ್ರ ಮನವಿ

ಕಾರ್ಮಿಕ ವರ್ಗದ ಮುಂದಾಳು, ಭಾರತ ಕಮ್ಯುನಿಸ್ಟ್ ಪಕ್ಷದ ಅದ್ವಿತೀಯ ನಾಯಕ ಹಾಗೂ ಮೂರು ಬಾರಿ ರಾಜ್ಯದ ವಿಧಾನಸಭೆಯ ಸದಸ್ಯರಾಗಿ ನಿಸ್ವಾರ್ಥ ಸೇವೆ ಸಲ್ಲಿಸಿದ ದಿ|| ಎಂ. ಎಸ್. ಕೃಷ್ಣನ್ ಕರ್ನಾಟಕದ ಎಲ್ಲ ವಿಭಾಗಗಳ ಜನತೆಗೆ ಪರಿಚಿತರಾಗಿದ್ದವರು.

ಮಾಜಿ ಸಂಸತ್ ಸದಸ್ಯರು, ಶಾಸಕರು ಆಗಿದ್ದ ರಾಜ್ಯದ ಕಮ್ಯುನಿಸ್ಟ್ ಚಳುವಳಿಯ ರೂವಾರಿ ಶ್ರೀ ಬಿ. ವಿ. ಕಕ್ಕಿಲ್ಲಾಯ, ಖ್ಯಾತ ಸಾಹಿತಿ ಶ್ರೀ ವ್ಯಾಸರಾಯ ಬಲ್ಲಾಳ, ಹೆಸರಾಂತ ವಿಜ್ಞಾನಿ, ಶಿಕ್ಷಕರು ಮತ್ತು ವಿಜ್ಞಾನ ಸಾಹಿತ್ಯ ಬರಹಗಾರರೂ ಆದ ಪ್ರೊ|| ಜೆ. ಆರ್. ಲಕ್ಷ್ಮಣರಾವ್, ಲೇಖಕರು, ವಿಚಾರವಾದಿ, 'ಹೊಸತು' ತಿಂಗಳ ಪತ್ರಿಕೆಯ ಸಂಪಾದಕರೂ ಆದ ಡಾ|| ಜಿ. ರಾಮಕೃಷ್ಣ, ನವಕರ್ನಾಟಕ ಪ್ರಕಾಶನ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಆರ್. ಎಸ್. ರಾಜಾರಾಮ್, ಮಾಜಿ ಶಾಸಕರು, ಹಿರಿಯ ವಕೀಲರು ಮತ್ತು ಎ.ಐ.ಟಿ.ಯು.ಸಿ ಕಾರ್ಮಿಕ ಸಂಘಟನೆಯ ನಾಯಕರಾದ ಶ್ರೀ ಎಂ. ಸಿ. ನರಸಿಂಹನ್, ಶ್ರೀಮತಿ ಪುಷ್ಪಾ ಕೃಷ್ಣನ್ ಮತ್ತು ಕರ್ನಾಟಕ ಪತ್ರಕರ್ತರ ಸಂಘದ ಸಂಸ್ಥಾಪಕ ಸದಸ್ಯರಲ್ಲೊಬ್ಬರಾದ ಹಿರಿಯ ಪತ್ರಕರ್ತ ಶ್ರೀ ಸಿ. ಆರ್. ಕೃಷ್ಣರಾವ್, ಸಮಾಜ ಸೇವಾಕರ್ತ, ಭಾರತ ಸರಕಾರದಲ್ಲಿ ಟೆಲಿಕಾಂ ಇಂಜಿನಿಯರ್ ಆಗಿ ಸೇವೆ ಸಲ್ಲಿಸಿ ನಿವೃತ್ತರಾಗಿರುವ ಶ್ರೀ ಕೆ. ಎಸ್. ಪಾರ್ಥಸಾರಥಿ, ಇವರು ಈ ಸ್ಮರಣ ಸಂಸ್ಥೆಯ ಸಂಸ್ಥಾಪಕರಾಗಿದ್ದಾರೆ.

ಸಂಸ್ಥೆಯು ಈಗ ಹನ್ನೆರಡು ಮಂದಿ ಟ್ರಸ್ಟಿಗಳನ್ನು ಹೊಂದಿದ್ದು ಈ ಕೆಳಗೆ ಹೆಸರಿಸಿದವರು ಪದಾಧಿಕಾರಿಗಳಾಗಿದ್ದಾರೆ :

1. ಶ್ರೀ ಕೋ. ಚೆನ್ನಬಸಪ್ಪ - ಅಧ್ಯಕ್ಷರು
2. ಶ್ರೀ ಕೆ. ಎಸ್. ಪಾರ್ಥಸಾರಥಿ - ಕಾರ್ಯನಿರ್ವಾಹಕ ಟ್ರಸ್ಟಿ
3. ಶ್ರೀ ಕೆ. ಶ್ರೀನಿವಾಸಮೂರ್ತಿ - ಖಜಾಂಚಿ

ಇತರ ಟ್ರಸ್ಟಿಗಳು : ಶ್ರೀಮತಿ ಸುರೇಖ ಶೆಟ್ಟಿ, ಶ್ರೀಯುತರಾದ ಮುರಳೀಧರ, ಆರ್. ಎಸ್. ರಾಜಾರಾಮ್, ಚಿ. ಶ್ರೀನಿವಾಸರಾಜು, ಸಿದ್ದನಗೌಡ ಪಾಟೀಲ, ಎಚ್. ವಿ. ಅನಂತಸುಬ್ಬ ರಾವ್, ಎಸ್. ಸುರೇಂದ್ರ, ಎ. ರಮೇಶ ಉಡುಪ, ಎಂ. ಡಿ. ಹರಿಗೋವಿಂದ್.

ಎಂ. ಎಸ್. ಕೃಷ್ಣನ್ ಅವರು ಜೀವನವಿಡೀ ದುಡಿದು ಕನಸುಕಂಡ, ಹಂಬಲಿಸಿದ ಆಶಯಗಳನ್ನು ಕಾರ್ಯರೂಪಕ್ಕೆ ತರುವ ನಿಟ್ಟಿನಲ್ಲಿ ಅರ್ಥಪೂರ್ಣ ಯೋಜನೆಗಳು ಹಾಗೂ ಕ್ರಿಯಾಶೀಲ ಚಟುವಟಿಕೆಗಳನ್ನು ಹಮ್ಮಿಕೊಳ್ಳುವ ಧ್ಯೇಯೋದ್ದೇಶಗಳನ್ನು ಸ್ಮರಣ ಸಂಸ್ಥೆ ಹೊಂದಿದೆ.

ವೃದ್ಧಾಶ್ರಮ, ಅಬಲೆಯರು ಮತ್ತು ಬಡಮಕ್ಕಳಿಗೆ ವಸತಿ ಗೃಹವೇ ಅಲ್ಲದೆ ಅವರ ಆರ್ಥಿಕ ಸ್ವಾವಲಂಬನೆಗೆ ಅಗತ್ಯವಾದ ತಾಂತ್ರಿಕ ಶಿಕ್ಷಣ ತರಬೇತಿ, ಸಮಾಜ ವಿಜ್ಞಾನಕ್ಕೆ ಸಂಬಂಧಪಟ್ಟಂತೆ ಸಂಶೋಧನಾ ಕೇಂದ್ರ, ಅನಕ್ಷರತೆ, ಮೂಢನಂಬಿಕೆ, ಅಸ್ಪೃಶ್ಯತೆ ಮುಂತಾದ ಸಾಮಾಜಿಕ ಪಿಡುಗುಗಳ ನಿರ್ಮೂಲನಾ ಕಾರ್ಯಕ್ರಮ, ಭೂಕಂಪ ಪ್ರವಾಹಗಳಂತಹ ಪ್ರಕೃತಿ ವಿಕೋಪಗಳು ಸಂಭವಿಸಿದ ಸಂದರ್ಭಗಳಲ್ಲಿ ನೊಂದ ಸಂತ್ರಸ್ತರಿಗೆ ನೆರವು – ಇವೇ ಮೊದಲಾದ ಯೋಜನೆಗಳಿಗೆ ಸಂಸ್ಥೆ ಆದ್ಯತೆ ನೀಡುತ್ತದೆ.

ತಮ್ಮ ಕಡೆಯ ದಿನಗಳವರೆಗೂ ಮಾನವೀಯ ಅನುಕಂಪ, ಸಜ್ಜನಿಕೆಗಳಿಂದ ಕೂಡಿದ ಸಾರ್ಥಕ ಬದುಕಿನಿಂದ ಎಂ. ಎಸ್. ಕೃಷ್ಣನ್ ಎಲ್ಲರಿಗೂ ಆತ್ಮೀಯರಾಗಿದ್ದವರು. ಅವರ ಆಶಯ, ಕನಸುಗಳನ್ನು ಕಾರ್ಯರೂಪಕ್ಕೆ ತರಲು ಉದ್ದೇಶಿಸಿರುವ ಎಂ. ಎಸ್. ಕೃಷ್ಣನ್ ಸ್ಮರಣ ಸಂಸ್ಥೆಗೆ ಸಮಾಜದ ಎಲ್ಲ ವಿಭಾಗದ ಜನರು, ಅವರ ಸಂಗಾತಿಗಳು, ಅಭಿಮಾನಿಗಳು ಸಂಸ್ಥೆಯ ಬಗ್ಗೆ ಆದರವಿಟ್ಟು ಉದಾರ ಕೊಡುಗೆ, ಬೆಂಬಲ ಸಹಕಾರಗಳನ್ನು ನೀಡಬೇಕೆಂದು ಮನವಿಮಾಡಿಕೊಳ್ಳುತ್ತೇವೆ. ಚೆಕ್/ಡಿ.ಡಿ./ಎಂ.ಒ.ಗಳನ್ನು **ಎಂ. ಎಸ್. ಕೃಷ್ಣನ್ ಸ್ಮರಣ ಸಂಸ್ಥೆ (ನೋಂ.)** ಅಥವಾ **M. S. Krishnan Memorial Trust (Regd.)** ಹೆಸರಲ್ಲಿ ಕಳಿಸಿ ಅಥವಾ **ಕೆನರಾ ಬ್ಯಾಂಕ್**, ಮಾಧವನಗರ ಶಾಖೆ, ಬೆಂಗಳೂರು - 560 001 ಇಲ್ಲಿ ಈ ಸಂಸ್ಥೆಯ **ಉಳಿತಾಯ ಖಾತೆ ಸಂಖ್ಯೆ 56309ಗೆ** ಜಮಾ ಮಾಡಬೇಕಾಗಿ ಕೋರಿಕೆ.

ವಿವರಗಳಿಗೆ ಸಂಪರ್ಕಿಸಿ : ಕೆ. ಎಸ್. ಪಾರ್ಥಸಾರಥಿ, ಮೊಬೈಲ್ : 94480 93966
ಇ-ಮೇಯಿಲ್ : kspsarathy@rediffmail.com

(ಕೋ. ಚೆನ್ನಬಸಪ್ಪ)
ಅಧ್ಯಕ್ಷರು

(ಕೆ. ಎಸ್. ಪಾರ್ಥಸಾರಥಿ)
ಕಾರ್ಯನಿರ್ವಾಹಕ ಟ್ರಸ್ಟಿ

# ಅಗ್ರಪಂಕ್ತಿಯ ಅನುವಾದ

**ಪ್ರೊ॥** ಹಿರಿಯಣ್ಣನವರು ಹೇಳಿಕೇಳಿ ಅಂತರ್ಮುಖಿಗಳು. ಹೆಚ್ಚಾಗಿ ಬಾಹ್ಯಜಗತ್ತಿಗೆ ಅಂಟಿಕೊಂಡವರಲ್ಲ. ಅವರ ನಡುವಯಸ್ಸಿನಲ್ಲಿಯೇ ಹೆಂಡತಿ ತೀರಿಕೊಂಡಿದ್ದರು. ಮುಂದೆ ತಪಸ್ವಿಗಳ ಹಾಗೆಯೇ ಅವರು ಕಾಲವನ್ನು ಕಳೆದರು. ಅವರ ಅಭ್ಯಾಸದ ರೀತಿ, ವಿನಯ ಅನುಕರಣೀಯ. ಆ ವಯಸ್ಸಿನಲ್ಲೂ ಉದ್ದಾಮ ಪಂಡಿತರಾದ ಪೆರಿಯಸ್ವಾಮಿ ತಿರುಮಲಾಚಾರ್ಯರ ಹತ್ತಿರ ವೇದಾಂತವನ್ನೂ, ತಿರುಪತಿ ಸಜ್ಜಯಾಚಾರ್ಯರ ಹತ್ತಿರ ತರ್ಕ, ನ್ಯಾಯ, ವೈಶೇಷಿಕ ದರ್ಶನಗಳನ್ನೂ ಸಂಪ್ರದಾಯಬದ್ಧವಾಗಿ ಅಭ್ಯಾಸ ಮಾಡಿದರು. ಹೀಗಿದ್ದೂ ಪಾಲಕ್ಕಾಡು ನಾರಾಯಣ ಶಾಸ್ತ್ರಿಗಳ ಹತ್ತಿರ ಶಿಸ್ತಿನ ವಿದ್ಯಾರ್ಥಿಯಂತೆ – ಆ ಹೊತ್ತಿಗೆ ಕಾಲೇಜಿನಿಂದ ನಿವೃತ್ತಿಯಾಗಿದ್ದರು – ಪುಸ್ತಕಗಳನ್ನು ಹೊತ್ತು ನಡೆದುಬಂದು ಅಭ್ಯಾಸ ಮಾಡುತ್ತಿದ್ದರು. ಇದು ಅವರ ವಿನಯಕ್ಕೆ, ನಿಷ್ಠೆಗೆ, ಕಾರ್ಯತತ್ಪರತೆಗೆ ಸಾಕ್ಷಿ. ಅವರು ಯಾವಾಗಲೂ ಯಾವುದಾದರೊಂದು ವಿಷಯದ ಬಗೆಗೆ ಅಧ್ಯಯನ ಮಾಡುತ್ತಲೇ ಇರುತ್ತಿದ್ದರು, ಇಲ್ಲವೇ ತೀವ್ರವಾಗಿ ಚಿಂತಿಸುತ್ತಿದ್ದರು. ಅವರು ಬರಹದಲ್ಲೇ ಅಲ್ಲ ಬದುಕಿನಲ್ಲಿಯೂ ವೇದಾಂತಿಗಳು. ಪಾಠ ಹೇಳಬೇಕಾದುದು ಪುಸ್ತಕದಿಂದಲ್ಲ, ಬದುಕಿನಿಂದ ಎಂಬುದು ಅವರ ನಿಷ್ಠೆ.

ಪ್ರೊ॥ ಹಿರಿಯಣ್ಣನವರ ಮೂಲ ಆಂಗ್ಲ ಪುಸ್ತಕದ ಬಗೆಗೆ ಹೇಳುವುದಾದರೆ – ನಾವು ವಿದ್ಯಾರ್ಥಿಗಳಾಗಿದ್ದಾಗ ಭಾರತೀಯ ದರ್ಶನಗಳ ಬಗೆಗೆ ಮೂರು ಪ್ರಸಿದ್ಧ ಪುಸ್ತಕಗಳಿದ್ದವು. ಪ್ರೊ॥ ರಾಧಾಕೃಷ್ಣನ್ ಅವರ 'ಇಂಡಿಯನ್ ಫಿಲಾಸಫಿ', ಇನ್ನೊಂದು ಸುರೇಂದ್ರನಾಥ್ ದಾಸ್‌ಗುಪ್ತ ಅವರ ಐದು ಸಂಪುಟಗಳ 'ಹಿಸ್ಟರಿ ಆಫ್ ಇಂಡಿಯನ್ ಫಿಲಾಸಫಿ' ಮತ್ತು ಪ್ರೊ॥ ಹಿರಿಯಣ್ಣನವರ 'ಔಟ್‌ಲೈನ್ಸ್ ಆಫ್ ಇಂಡಿಯನ್ ಫಿಲಾಸಫಿ'. ಭಾರತೀಯ ದರ್ಶನಗಳ ಕುರಿತಂತೆ ಈ ಮೂರೂ ಮೇರುಕೃತಿಗಳು.



ಡಾ॥ ಸರ್ವೆಪಲ್ಲಿ ರಾಧಾಕೃಷ್ಣನ್ ಅವರಿಗೆ ಜಗತ್ಪ್ರಸಿದ್ಧಿ ಲಭಿಸಿದ್ದರೂ, ಅವರ ಬರವಣಿಗೆಯಲ್ಲಿ ಸಲಿಲವಾಗಿ, ಸುಲಭವಾಗಿ, ನಿರರ್ಗಳವಾಗಿ ಬರೆದುಕೊಂಡು ಹೋಗುವಂತಹ ಕ್ರಮ ಅವರಿಗೆ ಇದ್ದರೂ ವಿಷಯ ನಿರೂಪಣೆಯಲ್ಲಿ ಆಳವಿಲ್ಲ ಎಂಬುದು ಗೊತ್ತಾಗುತ್ತಿತ್ತು. ಕಾರಣ, ಅವರಿಗೆ ಪ್ರಾಚೀನ ವಿದ್ಯಾಭ್ಯಾಸ ಇರಲಿಲ್ಲ. ಪಾಶ್ಚಾತ್ಯ ತತ್ವಶಾಸ್ತ್ರವನ್ನು ಓದಿಕೊಂಡು ಅವರು ಭಾರತೀಯ ತತ್ವಶಾಸ್ತ್ರಕ್ಕೆ ಬಂದವರು. (ಇಲ್ಲಿಂದ ಅಲ್ಲಿಗೆ ಹೋದದ್ದಲ್ಲ, ಅಲ್ಲಿಂದ ಇಲ್ಲಿಗೆ ಬಂದದ್ದು!) ಆ ಕೃತಿ ಪಾಶ್ಚಾತ್ಯರಿಗೆ ತುಂಬ ಹಿಡಿಸಿದಂತಹ ಕೃತಿಯಾದರೂ, ಬರವಣಿಗೆ ತುಂಬಾ ಸೊಗಸಾಗಿದ್ದರೂ ನಿರೂಪಣೆಯೆಲ್ಲ ಮೇಲ್ಪದರದ್ದು, ಮೇಲ್ಮೈನದು.

ಮೂಲ : ಎಂ. ಹಿರಿಯಣ್ಣ; ಅನುವಾದ : ಪ್ರಭುಶಂಕರ
ಪ್ರಕಾಶನ : ಅಭಿನವ, ಮಾರೇನಹಳ್ಳಿ, ವಿಜಯನಗರ
ಪರಿಷ್ಕೃತ ಮೊದಲ ಮುದ್ರಣ : ೨೦೦೪
ಬೆಲೆ : ರೂ. ೨೭೫/- ಪುಟ : ೪೮೦

ಎರಡನೆಯದು – ಸುರೇಂದ್ರ ದಾಸ್‌ಗುಪ್ತರಿಗೆ ಪ್ರಾಚೀನ ವಿದ್ಯಾಭ್ಯಾಸವಿದ್ದರೂ ಕೂಡ, ಸಾಂಪ್ರದಾಯಿಕವಾಗಿ ಅವರು ಅಭ್ಯಾಸ ಮಾಡಿದ್ದರೂ, ಬರವಣಿಗೆಯಲ್ಲಿ ಎಲ್ಲ ವಿವರಗಳನ್ನೂ ಹೇಳಿಬಿಡಬೇಕೆಂಬ ಆಸಕ್ತಿ. ಹೀಗಾಗಿ ಬರವಣಿಗೆಯಲ್ಲಿ ಒಂದು ಬಗೆಯ ಗಡಸು, ಸಾಲು ಸಾಲಿಗೆ ಪ್ರಮಾಣ ವಾಕ್ಯಗಳನ್ನು ಉದ್ಧರಿಸುವುದು (ಮೂಲವನ್ನೇ ಕೊಟ್ಟುಬಿಡುವುದು), ಆ ಬಗೆಗೆ ಬೇರೆಬೇರೆಯವರು ಏನೆಲ್ಲ ಹೇಳಿದ್ದಾರೆಯೋ ಅದನ್ನೆಲ್ಲ ಹೇಳಿಬಿಡುವುದು – ಹೀಗೆ ಅವರ ಬರವಣಿಗೆಯಲ್ಲಿ ಒಂದು ರೀತಿಯ ತೊಡಕುಗಳನ್ನು ಕಾಣುತ್ತಿದ್ದೆವು.

ಆದರೆ, ಹಿರಿಯಣ್ಣನವರ ಬರವಣಿಗೆ ಹಾಗಲ್ಲ. ಅವರ ಬರವಣಿಗೆ ನೇರವಾಗಿ ವಿಷಯ ನಿರೂಪಣೆಗೆ ತೊಡಗುತ್ತದೆ. ಪ್ರಮಾಣ ವಾಕ್ಯಗಳು ಅಲ್ಲಿ... ಇಲ್ಲಿ... ಎಲ್ಲೋ ಒಂದೊಂದು ಕಡೆ, ಅಷ್ಟೆ. ಮಿಕ್ಕಂತೆ ಆ ದರ್ಶನದ ಮೂಲಭೂತ ವಿಚಾರವೇನಿದೆಯೋ ಅದರ ಕಡೆಗೆ ಮಾತ್ರ ಗಮನ. [ಈ ಪುಸ್ತಕವನ್ನು ಬರೆಯುವುದಕ್ಕೆ ಮೊದಲು (೧೯೩೨ ಮೊದಲ ಮುದ್ರಣ) ಅವರು ಸುರೇಶ್ವರಾಚಾರ್ಯರ 'ನೈಷ್ಕರ್ಮ್ಯಸಿದ್ಧಿ'ಯನ್ನು ಸಂಪಾದನೆ ಮಾಡಿದ್ದರು. ಸದಾನಂದರ 'ವೇದಾಂತಸಾರ'ವೆಂಬ ಪುಸ್ತಕವನ್ನು ಇಂಗ್ಲಿಷಿಗೆ ಅನುವಾದ ಮಾಡಿದ್ದರು ಮತ್ತು ಡಿ. ವೆಂಕಟರಾಮಯ್ಯನವರೂ, ಇವರೂ ಸೇರಿ ಈಶ, ಕೇನ, ಕಠ, ಬೃಹದಾರಣ್ಯಕ ಮತ್ತು ಶಂಕರ ಭಾಷ್ಯ ಮುಂತಾದವನ್ನು ಇಂಗ್ಲಿಷ್‌ಗೆ ವ್ಯಾಖ್ಯಾನ ಮಾಡಿದ್ದರು. ಬಹುಶಃ ಇದೊಂದೇ ಅವರು ಸ್ವತಂತ್ರವಾಗಿ ಬರೆದ ಕೃತಿ.]

ತನ್ನ ವ್ಯಾಖ್ಯಾನವನ್ನು ಬರೆಯುವಾಗ ಮಲ್ಲಿನಾಥನು ಹೇಳುತ್ತಾನೆ – 'ನಾಮೂಲಂ ಲಿಖ್ಯತೇ ಕಿಂಚಿತ್ ನಾನಪೇಕ್ಷಿತಮುಚ್ಯತೇ' ಎಂದು. ಹಾಗೆಯೇ ಮೂಲದಲ್ಲಿ ಇಲ್ಲದಿರುವುದನ್ನು ನಾನು ಹೇಳುವುದಿಲ್ಲ; ಮತ್ತು ಯಾವುದು ಅಪೇಕ್ಷಿತವಲ್ಲವೋ, ಪ್ರಸಕ್ತವಲ್ಲವೋ ಅದನ್ನು ಕೂಡ ಹೇಳುವುದಿಲ್ಲವೆಂದು ಹಿರಿಯಣ್ಣನವರು ವ್ರತ ಕೈಗೊಂಡಿದ್ದರು.

ಕನ್ನಡದಲ್ಲಿ ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯರು ಬರೆದ 'ಹಿಂದೂ ದರ್ಶನ ಸಾರ' ಎಂಬ ಪುಸ್ತಕ ಓದಿದರೆ ಹಿರಿಯಣ್ಣನವರ ಮನೋಧರ್ಮ ಸ್ಪಷ್ಟವಾಗುತ್ತದೆ. ಶ್ರೀನಿವಾಸಾಚಾರ್ಯರು ಎಲ್ಲ ದರ್ಶನಗಳಲ್ಲೂ ಗುಣವನ್ನೇ ಕಂಡಿದ್ದಾರೆ. ದೋಷಗಳನ್ನು ಹೇಳಿಲ್ಲ. ಕಡೆಗೆ 'ಚಾರ್ವಾಕ ದರ್ಶನದಲ್ಲಿ ಕೂಡ ಒಂದು ಗುಣ ಇದೆ, ಅಪೇಕ್ಷಿತ ಸ್ವಭಾವವಿದೆ, ಅದನ್ನೂ ತಳ್ಳಿಹಾಕುವ ಹಾಗಿಲ್ಲ' ಎನ್ನುತ್ತಾರೆ. ಶ್ರೀನಿವಾಸಾಚಾರ್ಯರ ದೃಷ್ಟಿಯೇ ಹಾಗೆ – 'ಬೌದ್ಧ ದರ್ಶನವನ್ನು ಬರೆಯುವಾಗ ನಾನು ಬೌದ್ಧನೆಂದು ತಿಳಿದೇ ಆ ದರ್ಶನದ ಬಗೆಗೆ ಬರೆಯಬೇಕು. ನಾನು ವಿಶಿಷ್ಟಾದ್ವೈತಿ ಎಂದುಕೊಂಡು ಬರೆದರೆ ಅದು ಪ್ರಾಮಾಣಿಕವಾಗಲಾರದು. ಜೈನ ದರ್ಶನದ ಬಗೆಗೆ ಬರೆಯುವಾಗ ನಾನು ಜೈನನೇ ಆಗಿದ್ದೆ' ಎಂದು ಹೇಳುತ್ತಿದ್ದರು. ಆದರೆ ಈ ಮನೋಧರ್ಮ ಹಿರಿಯಣ್ಣನವರ ವಿಚಾರದಲ್ಲಿ ನೂರಕ್ಕೆ ನೂರರಷ್ಟು ಸರಿಯೆಂದು ಹೇಳಲಾಗುವುದಿಲ್ಲ. ಹಿರಿಯಣ್ಣನವರದು ಸ್ವಲ್ಪ ವಾಸ್ತವಿಕ ದೃಷ್ಟಿಯಿಂದ, ವಿಚಾರ ದೃಷ್ಟಿಯಿಂದ ದರ್ಶನಗಳನ್ನು ಪರಿಶೀಲಿಸುವ ಸ್ವಭಾವ. ಒಂದೊಂದು ದರ್ಶನದಲ್ಲಿಯೂ ಸೂತ್ರವೆಂಬ ಭಾಗವಿದೆ. ಆ ಸೂತ್ರದ ವ್ಯಾಖ್ಯಾನದಿಂದಾಗಿ ಆ ದರ್ಶನ ಬೆಳೆಯುತ್ತಾ ಬಂದಿದೆ. ಸಾಂಖ್ಯ ದರ್ಶನಕ್ಕೆ ಸಾಂಖ್ಯ ಸೂತ್ರಗಳು ಹಾಗೆಯೇ ನ್ಯಾಯಸೂತ್ರಗಳು, ವೈಶೇಷಿಕ ಸೂತ್ರಗಳು... ಹೀಗೆ. ಆ ಸೂತ್ರಗಳಿಗೆ ಭಾಷ್ಯಗಳೂ ಇವೆ. ಅವುಗಳನ್ನೂ ಹಿಡಿಯಬೇಕು ಎಂಬುದು ಅವರ ನಿಲುವು. ಅವರ ಪ್ರಕಾರ ಸೂತ್ರ ಎನ್ನುವುದಕ್ಕೆ ಎರಡು ಅರ್ಥಗಳಿವೆ – 'ವೇದಾಂತ ವಾಕ್ಯ ಕುಸುಮ ಗ್ರಥನತ್ವಾತ್ ಸೂತ್ರಾಣಾಂ' ಎನ್ನುತ್ತಾರೆ ಶಂಕರಾಚಾರ್ಯರು. ಒಂದು ದರ್ಶನದ ತಾತ್ವಿಕ ನಿಲುವನ್ನು ಈ ಸೂತ್ರಗಳಲ್ಲಿ ದಾರದಲ್ಲಿ ಪೋಣಿಸಿದ ಹಾಗೆ ಕಾಣುತ್ತೇವೆ ಎಂಬುದು ಒಂದು ಅರ್ಥವಾದರೆ, 'ಸೂಚನಾತ್ ಸೂತ್ರಂ' ಎಂಬ ಅರ್ಥ ಇನ್ನೊಂದು. ಪ್ರೊ॥ ಹಿರಿಯಣ್ಣನವರ ಒತ್ತು ಎರಡನೆಯ ಅರ್ಥದ ಕಡೆಗೇ ಹೆಚ್ಚು. ಅವರ ಪ್ರಕಾರ ಸೂತ್ರ ಏನಿದ್ದರೂ ಸೂಚನೆಯನ್ನು ಕೊಡುವುದು. ಆದರೆ ಸೂತ್ರವು ಆ ದರ್ಶನದ ವಿಷಯವನ್ನು ವಿಶದವಾಗಿ ಹೇಳುವುದಿಲ್ಲ. ಅದಕ್ಕಾಗಿ ಆ ಸೂತ್ರಗಳಿಗೆ ಬಂದಿರುವ ಭಾಷ್ಯಗಳನ್ನು ಇಟ್ಟುಕೊಂಡು ನೋಡಿದಾಗ ಮಾತ್ರ ಆ ದರ್ಶನಗಳ ಸಮಗ್ರ ಸಾರವತ್ತಾದ ಸ್ವಭಾವ ನಮಗೆ ಗೊತ್ತಾಗುತ್ತದೆ. ಒಂದೊಂದು ದರ್ಶನಕ್ಕೂ ಸೂತ್ರಗಳಿವೆ. ಸೂತ್ರಗಳ ಕುರಿತಂತೆ ಪ್ರಸಿದ್ಧವಾದ ಭಾಷ್ಯಗಳಿವೆ. ಈ ಭಾಷ್ಯ ಸೂತ್ರ ಸಮನ್ವಯದಿಂದ ನಾವು ದರ್ಶನದ ನಿಲುವು, ದರ್ಶನದ ಧೋರಣೆ ಅದರ ಸಾಧನಾಭಾಗ, ಇವನ್ನು ನಿರ್ಧರಿಸಬೇಕಾಗುತ್ತದೆ. ದರ್ಶನ ಕ್ಷೇತ್ರದಲ್ಲಿ ಸೂತ್ರಕಾಲ, ವ್ಯಾಖ್ಯಾನಕಾಲ, ವಿಚಾರಕಾಲ ಎಂಬ ಎಣಿಕೆಯಿದೆ. ವಿಚಾರ ಕಾಲದಲ್ಲಿ ದರ್ಶನ ಸಿದ್ಧಾಂತ, ಸಾಧನ ಎರಡೂ ಸಿದ್ಧವಾಗುತ್ತದೆ. ಈ ಕೆಲಸ 'ಔಟ್‌ಲೈನ್ಸ್ ಆಫ್ ಇಂಡಿಯನ್ ಫಿಲಾಸಫಿ'ಯಲ್ಲಿ ಆಗಿದೆ.

ನಿದರ್ಶನಕ್ಕೆ, ಅವರ ವಿಚಾರ ಸರಣಿಗಳಲ್ಲಿ 'ವೇದ ಎಂದರೆ ಏನು ?' – 'ವಿದ್' ಧಾತುವಿನಿಂದ ಬಂದಿರುವುದರಿಂದ ತಿಳಿವಳಿಕೆ, ಜ್ಞಾನ ಎಂಬ ಅರ್ಥ ಇದೆ ಎನ್ನೋಣ. ಅದು ಒಂದು ಅರ್ಥ ಅಷ್ಟೆ. ಆ ಪದದ ಪರ್ಯಾಪ್ತಿ ಅದಲ್ಲ. 'ವಿಚಾರ ಮಾಡುವುದು' ಎಂದೂ ಆ ಪದದ ಅರ್ಥ. 'ವೇತ್ತಿವಿಂತೇ ವಿಚಾರಣೇ' ಎಂಬ ಕಾರಿಕೆಯೇ ಇದೆ. ಕೇವಲ ಪಾಣಿನಿಯ ಸೂತ್ರಗಳನ್ನು ನೋಡಿದರೆ ಸಾಲದು, ಪತಂಜಲಿಗಳ ಮಹಾಭಾಷ್ಯವನ್ನು ನೋಡಿದರೂ ಪ್ರಯೋಜನವಿಲ್ಲ. ಅದರ ಜೊತೆಗೇ ಕಾರಿಕೆಗಳನ್ನೂ ಗಮನಿಸಬೇಕು. ಕಾರಿಕೆಗಳಲ್ಲಿ ಹೊಸ ವಿಚಾರಗಳನ್ನು ಹೇಳುತ್ತಾರೆ. ವೇದ ಎನ್ನುವ ಮಾತಿಗೆ ತಿಳಿವಳಿಕೆ ಎಂಬ ಅರ್ಥ ಮಾತ್ರವಲ್ಲ; ವಿದಲ್ಬ ಲಾಭೇ : ವಿದಲ್ಬ ಎಂಬ ಧಾತುವಿನಿಂದ ಪಡೆದು

**ಪ್ರೊ॥ ಎಸ್. ಕೆ. ರಾಮಚಂದ್ರ ರಾವ್**

ಕೊಳ್ಳುವುದು – ಪುರುಷಾರ್ಥಗಳನ್ನು ಪಡೆದುಕೊಳ್ಳುವುದು ಎಂಬ ಅರ್ಥವೂ ಇದೆ. ಹೀಗಾಗಿ ಈ ಅನೇಕ ಅರ್ಥಗಳಲ್ಲೆಲ್ಲ ವಿಚಾರದ ಭಾಗವೇ ಮುಖ್ಯವಾದದ್ದು. 'ತಮಾರ್ಥಂ ಸರ್ವಶಾಸ್ತ್ರಾಣಿ ವಿಹಿತಾನಿ ಮನೀಷಿಭಿಃ' – ಮನುಷ್ಯನಿಗೆ ಶಾಂತಿ, ನೆಮ್ಮದಿ ಸಿಗಲಿ. ಹೃದಯಕ್ಕೆ ಸಾಂತ್ವನ ಸಿಗಲಿ – ಎನ್ನುವ ಕಾರಣದಿಂದಲೇ ದರ್ಶನಗಳಿರುವುದು ಎಂಬ ನಿಲುವು ಅವರದು. ವಿಚಾರ ಈ ದೆಸೆಯಲ್ಲಿರಬೇಕು.

ಸುರೇಶ್ವರಾಚಾರ್ಯರು ನೈಷ್ಕರ್ಮ್ಯಸಿದ್ಧಿಯ ಮೊದಲಲ್ಲಿ ಬರೆದ ಒಂದು ಶ್ಲೋಕವನ್ನು ಹಿರಿಯಣ್ಣನವರು ಗ್ರಹಿಸಿದ್ದರು: "ನ ಖ್ಯಾತಿಲಾಭ ಪೂಜಾರ್ಥಂ ಗ್ರಂಥೋಽಸ್ಮಾಭಿರುದೀರ್ಯತೇ।" ಎಂದರೆ ಪೂಜೆ, ಖ್ಯಾತಿ, ಲಾಭಕ್ಕಾಗಿ ಈ ಪುಸ್ತಕವನ್ನು ಬರೆಯುವುದಲ್ಲ. ಮತ್ತೆ ಏತಕ್ಕಾಗಿ? ಎಂದರೆ "ಸ್ವಬೋಧ ಪರಿಶುದ್ಧ್ಯರ್ಥಂ ಬ್ರಹ್ಮವಿನ್ನಿಕಷಾಶ್ಮಸು", ಅಂದರೆ ಒಂದು ಗ್ರಂಥವನ್ನು ಬರೆಯುವವನು ತಾನು ಏನನ್ನು ತಿಳಿದುಕೊಂಡಿರುವನೋ ಅದು ತನ್ನಲ್ಲಿ ಆಳವಾಗಿ ಇಳಿಯಲಿ ಎಂಬ ಕಾರಣಕ್ಕೆ ಬರೆಯಬೇಕು ಎಂಬ ನಿಲುವು ಹಿರಿಯಣ್ಣನವರದು. ಈ ಅಂಶವನ್ನು ನಾವು ಅವರ 'ಔಟ್‌ಲೈನ್ಸ್ ಆಫ್ ಇಂಡಿಯನ್ ಫಿಲಾಸಫಿ' ಪುಸ್ತಕದಲ್ಲಿ ಕಾಣಬಹುದು. ಹೀಗಾಗಿ ಕುಮಾರವ್ಯಾಸನಂತೆ 'ಪದವಿಟ್ಟಳುಪದೊಂದಗ್ಗಳಿಕೆ' ಎಂಬ ಮಾತು ಹಿರಿಯಣ್ಣನವರದಲ್ಲ. ಬರವಣಿಗೆಯೆಂದರೆ ಅದೊಂದು ಕಲಿಕೆ ಇದ್ದಹಾಗೆ. ಬರೆದದ್ದನ್ನೆ ಮತ್ತೆ ಮತ್ತೆ ಬದಲಿಸಿ ಪರಿಷ್ಕರಿಸಿ ಬರೆಯುವಂಥದು. ಅದೊಂದು ತಪಸ್ಸು. ಅದರಿಂದ ಆಧ್ಯಾತ್ಮಿಕ ಉನ್ನತಿ, ಸಾಧನೆಗೆ ಒಂದು ದಾರಿ ಎಂದೇ ಅವರು ಬಗೆದಿದ್ದರು.

ಇನ್ನು – ಪ್ರಭುಶಂಕರರ ಅನುವಾದದ ಬಗೆಗೆ ಹೇಳುವುದಾದರೆ ಇಡೀ ಕನ್ನಡ ಬರವಣಿಗೆಯಲ್ಲಿ ಇಂತಹ ಅನುವಾದ ಅಗ್ರಪಂಕ್ತಿಯಲ್ಲಿ ನಿಲ್ಲುವಂಥದು. ಪ್ರೊ॥ ಹಿರಿಯಣ್ಣನವರ ಕೃತಿಯನ್ನು ಅನುವಾದ ಮಾಡುವುದಿದೆಯಲ್ಲಾ ಅದು ಬಹಳ ಕಷ್ಟ. ಹಿರಿಯಣ್ಣನವರೇ ಸಂಸ್ಕೃತದಿಂದ ಇಂಗ್ಲಿಷಿಗೆ ಪಾರಿಭಾಷಿಕ ಪದಗಳನ್ನು ಬಳಸುವಾಗ – ಉದಾಹರಣೆಗೆ ಪ್ರಮಾಣ ಎಂಬ ಮಾತಿದೆ, ಅರ್ಥಾಪತ್ತಿ – ಅರ್ಥಾಪತ್ತಿಯ ವಿಚಾರ ಹೇಳಬೇಕು. ಬ್ರಹ್ಮಕಾರ ವೃತ್ತಿ ಎಂಬ ಮಾತು ಬರುತ್ತದೆ. ಇದನ್ನು ಇಂಗ್ಲಿಷಿನಲ್ಲಿ ಹೇಳಬೇಕಾದರೆ ಒಂದೊಂದು ಪದಕ್ಕೂ ಎರಡು-ಮೂರು ಗಂಟೆಗಳ ಕಾಲ ಯೋಚಿಸಿದ್ದಾರೆ. ಅವರಷ್ಟೇ ಕಷ್ಟಪಟ್ಟು ಪ್ರಭುಶಂಕರ ಅವರೂ ಕನ್ನಡಕ್ಕೆ ತಂದಿದ್ದಾರೆ. ಅಷ್ಟೇ ಅಲ್ಲ, ಆ ಪಾರಿಭಾಷಿಕ ಪದಗಳಲ್ಲಿ ಇರುವ ಸೊಗಸನ್ನು ತರಲು ವಿಶೇಷ ಶ್ರಮ ವಹಿಸಿದ್ದಾರೆ. ಇದೊಂದು ಸಾಹಸವೇ ಸರಿ.

ಮೊದಲೇ ಹೇಳಿದಂತೆ ಹಿರಿಯಣ್ಣನವರ ಬರವಣಿಗೆ ಮಿತವಾದ್ದು. ಎಷ್ಟು ಹೇಳಬೇಕೋ ಅಷ್ಟೇ. ಒಂದು ಮಾತು ಹೆಚ್ಚಿಲ್ಲ; ಕಡಮೆಯಿಲ್ಲ. ಅವರ ವಾಕ್ಯದಿಂದ ಒಂದು ಪದ ತೆಗೆದರೂ ಅದು ಪೂರ್ಣವಲ್ಲ. ಅವರ ಬದುಕಿನಲ್ಲಿಯೂ ಹಾಗೆಯೇ ಇದ್ದವರು. ಹೆಚ್ಚು ಮಾತನಾಡಿದವರಲ್ಲ. ಹೆಚ್ಚು ಓಡಾಡಿದವರು ಅಲ್ಲ. ಅದು ಒಂದು ದೋಷ ಎನ್ನಲಾಗದು. ಗುಣಾಭಾವ ಎನ್ನೋಣ. ಯಾರಿಗೆ ಆ ಓದಿನ ಸಂಸ್ಕಾರವಿಲ್ಲವೋ, ಪೂರ್ವಸಿದ್ಧತೆ ಇಲ್ಲವೋ ಅಂತಹವರಿಗೆ ಅರ್ಥವಾಗುವುದು ಕಷ್ಟ. ಅಂದರೆ ಎಲ್ಲ ಓದುಗರಿಗೂ ತಿಳಿಯಾಗಿ ಅರ್ಥವಾಗುವಂತಹ ಗುಣದ ಕೊರತೆ ಸ್ವಲ್ಪ ಕಾಣುತ್ತದೆ. ಈ ಬಗೆಯ ಓದಿನ ರುಚಿ ಇಲ್ಲದವರಿಗೆ ಕ್ಲಿಷ್ಟವಾಗಿ, ಗುಹ್ಯವಾಗಿ, ಕಠಿಣವಾಗಿ ಕಾಣುತ್ತದೆ. ಆದರೆ ಆ ಗುಣಾಭಾವವನ್ನು ಪ್ರಭುಶಂಕರರು ತಮ್ಮ ಅನುವಾದದಲ್ಲಿ ಕರಗಿಸಿದ್ದಾರೆ. ಒಂದು ನೆಲೆಯಲ್ಲಿ ಮೂಲಕೃತಿಗಿಂತಲೂ ಇದು ಒಂದು ಪಟ್ಟು ಹೆಚ್ಚು ಎಂದೇ ಹೇಳಬೇಕು. ಮೂಲಕೃತಿಯ ಬಿಗಿತವನ್ನು ಇವರು ಬಹುಮಟ್ಟಿಗೆ ಸಡಲಿಸಿದ್ದಾರೆ. ಒಂದೊಂದು ವಾಕ್ಯವನ್ನು ಅನುವಾದ ಮಾಡುವಾಗಲೂ ಆ ತಾತ್ವಿಕ ವಿವರಣೆ ಸೂಚನೆಯನ್ನು ತಂದಿದ್ದಾರೆ.

ಎಷ್ಟೋ ಕೃತಿಗಳನ್ನು ಓದುವಾಗ ನಮಗೆ ಮೂಲಕೃತಿ ಹೇಗಿದೆಯೋ ಒಮ್ಮೆ ನೋಡೋಣ ಎನಿಸುತ್ತದೆ. ಆದರೆ ಈ ಅನುವಾದವನ್ನು ನೋಡಿದರೆ ಮೂಲಕೃತಿಯನ್ನು ನೋಡಬೇಕೆಂದು ಅನ್ನಿಸುವುದಿಲ್ಲ. ಭಾರತೀಯ ದರ್ಶನಗಳಲ್ಲಿ ಆಸಕ್ತಿ ಇರುವವರಿಗೆ, ಈ ವಿಚಾರದಲ್ಲಿ ಮಾಹಿತಿ ಬೇಕಾದವರಿಗೆ, ದರ್ಶನಗಳ ನೇರವಾದ ಪರಿಚಯ ಬೇಕೆನ್ನುವವರಿಗೆ ಈ ಕೃತಿ ಉಪಯುಕ್ತವಾದದ್ದು.

*(ದಿನಾಂಕ ೧೨.೪.೨೦೦೪ರಂದು ಬೆಂಗಳೂರಿನ ನ್ಯಾಷನಲ್ ಕಾಲೇಜಿನ ಸಭಾಂಗಣದಲ್ಲಿ ಪುಸ್ತಕ ಬಿಡುಗಡೆಗೊಳಿಸಿ ಮಾಡಿದ ಭಾಷಣದ ಸಂಕ್ಷಿಪ್ತರೂಪ. ಬರಹ : ಕೆಂದೂಳೆ ಸುಬ್ರಹ್ಮಣ್ಯಂ)*

**ಪ್ರೊ॥ ಎಸ್. ಕೆ. ರಾಮಚಂದ್ರ ರಾವ್**
೩೦೫, ೬ನೇ ಕ್ರಾಸ್, ೧ನೇ ಹಂತ, ಜಯನಗರ, ಬೆಂಗಳೂರು - ೫೬೦ ೦೧೧

ಚಂದ್ರರ ಈ ಜೀವನ ಚರಿತ್ರೆಯಲ್ಲಿ ಮುಖಸ್ತುತಿ ಇಲ್ಲ. ಬರೀ ವೈಜ್ಞಾನಿಕ ವಿಷಯಗಳ, ಸೂತ್ರಗಳ ಶುಷ್ಕ ವಿವರಗಳಿಲ್ಲ. ಓದುಗನ ಮೇಲೆ ಆಪ್ತತೆಯ ಮೋಡಿ ಹಾಕುವ ಗುಣವಿದೆ. ಅನೇಕ ವೈಜ್ಞಾನಿಕ ವಿಷಯಗಳು ಸಾಮಾನ್ಯ ಓದುಗನಿಗೆ ಕಬ್ಬಿಣದ ಕಡಲೆಗಳಾಗದಂಥ ರೀತಿಯಲ್ಲಿವೆ. ಆಂಗ್ಲ ಭಾಷೆಯ ವೈಜ್ಞಾನಿಕ ಪದಗಳಿಗೆ ಬಳಸಿರುವ ತತ್ಸಮ ಕನ್ನಡ ಪದಗಳು ಕ್ಲಿಷ್ಟಕರವಾಗಿಲ್ಲ. ಇದಕ್ಕಾಗಿ ಅನುವಾದಕರು ಅಭಿನಂದನಾರ್ಹರು.



# ಚಂದ್ರ - ಜೀವನ ಚರಿತ್ರೆ

ಆಕಾಶಕಾಯಗಳಾದ ಶ್ವೇತಕುಬ್ಜ ಹಾಗೂ ಕಾಳರಂಧ್ರಗಳ ಬಗ್ಗೆ ಮಹತ್ವದ ಕೊಡುಗೆಗಳನ್ನು ನೀಡಿದ ಪ್ರೊ॥ ಸುಬ್ರಹ್ಮಣ್ಯನ್ ಚಂದ್ರಶೇಖರ್ ಭಾರತದ ವಿಜ್ಞಾನ ಕ್ಷೇತ್ರದಲ್ಲಿ ದೊಡ್ಡ ಹೆಸರು. ಜೆ.ಸಿ. ಬೋಸ್, ಮೇಘನಾದ್ ಸಹಾ, ಸಿ. ವಿ. ರಾಮನ್, ಎಸ್. ಎನ್. ಬೋಸ್ ಮುಂತಾದ ಖ್ಯಾತ ವಿಜ್ಞಾನಿಗಳ ಸಾಲಿಗೆ ಸೇರಿದ ಈ ವಿಜ್ಞಾನಿಯಿಂದ ಖಭೌತಶಾಸ್ತ್ರಕ್ಕೆ ಸಂದ ಕೊಡುಗೆಗಳು ಅಪೂರ್ವ ಹಾಗೂ ಅದ್ವಿತೀಯ. ೧೯೮೩ರ ನೊಬೆಲ್ ಪ್ರಶಸ್ತಿಯೂ ಸೇರಿದಂತೆ ಅನೇಕ ಪುರಸ್ಕಾರಗಳು ಅವರನ್ನು ಅರಸಿ ಬಂದದ್ದು ಅವರ ವಿಜ್ಞಾನ ಸಾಧನೆಗಳಿಗೆ ಹಿಡಿದ ಕೈಗನ್ನಡಿ.

ಅಕ್ಟೋಬರ್ ೧೯, ೧೯೧೦ರಂದು ಪ್ರೊ॥ ಎಸ್. ಚಂದ್ರಶೇಖರ್ ಲಾಹೋರ್‌ನಲ್ಲಿ ಜನಿಸಿದರು. ಅವರ ವಂಶಕ್ಕೆ ವಿಶಿಷ್ಟ ಹಿನ್ನೆಲೆಯಿತ್ತು. ಜೀವನದಲ್ಲಿ ಅಸಾಂಪ್ರದಾಯಿಕತೆಯ ಆಯ್ಕೆ ಆ ಕುಟುಂಬದ ಗಮನೀಯ ಅಂಶವಾಗಿತ್ತು. 'ಚಂದ್ರ' ಎಂದೇ ಸಂಬೋಧಿಸಲ್ಪಡುತ್ತಿದ್ದ ಅವರ ವಿದ್ಯಾಭ್ಯಾಸವು ಅಸಾಂಪ್ರದಾಯಿಕ ರೀತಿಯಲ್ಲಿ ಮದರಾಸಿನಲ್ಲಿ ಜರುಗಿತು. ನಂತರ ಅವರು ಇಂಗ್ಲೆಂಡ್‌ನಲ್ಲಿ ಭೌತಶಾಸ್ತ್ರದಲ್ಲಿ ಉನ್ನತ ವ್ಯಾಸಂಗ ಮಾಡಿ, ಅಮೆರಿಕವನ್ನು ತಮ್ಮ ಕರ್ಮಭೂಮಿಯನ್ನಾಗಿ ಆಯ್ಕೆಮಾಡಿಕೊಂಡರು.

ಅವರ ಜೀವನ ಚರಿತ್ರೆಯನ್ನು 'ಚಂದ್ರ' ಎಂಬ ಹೆಸರಿನಲ್ಲಿ ಮೂಲತಃ ಕನ್ನಡದವರೇ ಆದ ಕಾಮೇಶ್ವರ ಚ. ವಾಲಿಯವರು ಆಂಗ್ಲ ಭಾಷೆಯಲ್ಲಿ ಬರೆದರು. ವಾಲಿಯವರು ನ್ಯೂಯಾರ್ಕ್‌ನ ಸೈರಾಕ್ಯೂಸ್ ವಿಶ್ವವಿದ್ಯಾನಿಲಯದಲ್ಲಿ ಭೌತಶಾಸ್ತ್ರದ ಪ್ರಾಧ್ಯಾಪಕರಾಗಿದ್ದರು. ಧಾರವಾಡದ ಕರ್ನಾಟಕ ವಿಶ್ವವಿದ್ಯಾನಿಲಯದ ಭೌತಶಾಸ್ತ್ರ ಪ್ರಾಧ್ಯಾಪಕರಾಗಿದ್ದ ಸಂಪಿಗೆ ತೋಂಟದಾರ್ಯರವರು ಈ ಕೃತಿಯ ಕನ್ನಡ ಅನುವಾದವನ್ನು (೫೪೨ ಪು.) ಮಾಡಿದ್ದಾರೆ.

ಈ ಕೃತಿಯನ್ನು ಓದುತ್ತಾಹೋದಂತೆ, ಚಂದ್ರರ ಜೀವನಗಾಥೆ ಯಶೋಗಾಥೆಯಾದದ್ದರ ಹಿಂದೆ ಎಂಥ ಕಠಿಣ ಶ್ರಮ, ದೃಢ ಮನಸ್ಸು, ತಾಳ್ಮೆ, ತಾದಾತ್ಮ್ಯ ಇದ್ದವು ಎಂಬುದು ವೇದ್ಯವಾಗುತ್ತದೆ. ಸಾಮಾನ್ಯವಾಗಿ ಜನಸಾಮಾನ್ಯರಲ್ಲಿ ವಿಜ್ಞಾನಿಯೆಂದರೆ ಆತನೊಬ್ಬ ವಿಕ್ಷಿಪ್ತ ಮನೋಭಾವದ, ಯಾರೊಂದಿಗೂ ಹೆಚ್ಚಾಗಿ ಬೆರೆಯದ, ತನ್ನ ಕಾರ್ಯಕ್ಷೇತ್ರದಲ್ಲೇ ತದೇಕಚಿತ್ತನಾಗಿರುವ ವಿಶೇಷಜ್ಞನೆಂಬ ಗ್ರಹಿಕೆಯಿರುವುದು ಸಹಜ. ಆದರೆ ಚಂದ್ರ ವಿಜ್ಞಾನವೇ ಅಲ್ಲದೆ ಇತರ ವಿಷಯಗಳಲ್ಲೂ ಗಾಢ ಆಸಕ್ತಿ, ಜಿಜ್ಞಾಸೆ ಹೊಂದಿದ್ದವರು ಎಂಬುದಕ್ಕೆ ಹಲವು ನಿದರ್ಶನಗಳನ್ನು ಆ ಕೃತಿಯಲ್ಲಿ ದಾಖಲಿಸಲಾಗಿದೆ. ಕಾಲೇಜಿನಲ್ಲಿ ಅವರು ಇಂಗ್ಲಿಷ್ ಮತ್ತು ಸಂಸ್ಕೃತ ಭಾಷೆಗಳನ್ನು ಅಭ್ಯಾಸ ಮಾಡಿದರು. ಆ ಮೂಲಕ ಆಲಿವರ್ ಗೋಲ್ಡ್‌ಸ್ಮಿತ್‌ನ 'ದಿ ಸಿಟಿ ನೈಟ್ಸ್', ರಾಬರ್ಟ್ ಲೂಯಿ ಸ್ಟೀವನ್‌ಸನ್‌ನ 'ಆ್ಯನ್ ಆಟಮ್ ಎಫೆಕ್ಟ್', ಎಡ್ವರ್ಡ್ ವಿ. ಲ್ಯೂಕಾಸ್‌ನ 'ಎ ಫಿಲಾಸಫರ್ ದಟ್ ಫೇಯಲ್ಡ್', ಥಾಮಸ್ ಹಾರ್ಡಿಯ 'ದಿ ರಿಟರ್ನ್ ಆಫ್ ದಿ ನೇಟಿವ್', ಷೇಕ್ಸ್‌ಪಿಯರ್‌ನ 'ಮರ್ಚೆಂಟ್ ಆಫ್ ವೆನಿಸ್' ಮುಂತಾದ ಕೃತಿಗಳು ಅವರಿಗೆ ಮೆಚ್ಚುಗೆಯಾದವು. ೧೯೭೦ರ ದಶಕದಲ್ಲಿ ಅವರು ಹೃದಯಾಘಾತಕ್ಕೆ ತುತ್ತಾಗಿ ವಿಶ್ರಾಂತಿ ಪಡೆಯುತ್ತಿದ್ದಾಗಿನ ಮೂರು ತಿಂಗಳ ಅವಧಿಯಲ್ಲಿ ಷೇಕ್ಸ್‌ಪಿಯರ್‌ನ ನಾಟಕಗಳನ್ನು, ಅವನ ಜೀವನ ಚರಿತ್ರೆಯನ್ನು ಆಳವಾಗಿ ಅಭ್ಯಾಸಮಾಡಲು, ಎಲ್ಲಾ ದುರಂತ ನಾಟಕಗಳ ಟೇಪುಗಳನ್ನು ಆಲಿಸಲು ಹೆಚ್ಚು ಸಮಯ ವಿನಿಯೋಗಿಸಿದರು. ಬಹುಶಃ ಇಂತಹ ಮನೋಭಾವವಿದ್ದುದರಿಂದಲೇ ಅವರಿಗೆ 'ಟ್ರೂತ್ ಆ್ಯಂಡ್ ಡ್ಯೂಟಿ: ಏಸ್ತಟಿಕ್ಸ್ ಆ್ಯಂಡ್ ಮೋಟಿವೇಷನ್ ಇನ್ ಸೈನ್ಸ್' ಎಂಬ ಕೃತಿಯನ್ನು ಬರೆಯಲು ಸಾಧ್ಯವಾಯಿತೇನೋ!

ಚಂದ್ರರ ನೇರ ನುಡಿಗಳು ಅವರ ಜೀವನದಲ್ಲಿ ಢಾಳಾಗಿ ಕಾಣುವ ಇನ್ನೊಂದು ಅಂಶ. ಈ ನಿಟ್ಟಿನಲ್ಲಿ ಹಲವು ಉದಾಹರಣೆಗಳು 'ಚಂದ್ರ' ಕೃತಿಯಲ್ಲಿವೆ. ವಾಲಿಯವರೊಡನೆ ತಮ್ಮ ಚಿಕ್ಕಪ್ಪ ಖ್ಯಾತ ವಿಜ್ಞಾನಿ ಸಿ. ವಿ. ರಾಮನ್ ಅವರ ವ್ಯಕ್ತಿತ್ವದ ಬಗ್ಗೆ ಹಂಚಿಕೊಂಡ ಅವರ ಅನುಭವಗಳು, ಬಿಚ್ಚುಮನಸ್ಸಿನ ಅನಿಸಿಕೆಗಳು ಇದಕ್ಕೆ ಒಂದು ದೃಷ್ಟಾಂತ. ಭಾರತದಲ್ಲೇ ಇದ್ದು ಸೇವೆ ಸಲ್ಲಿಸಿದ್ದರೆ ಹೆಚ್ಚಿನ ತೃಪ್ತಿ ಸಿಗುತ್ತಿತ್ತು ಎಂಬ ಅವರ ಮಾತುಗಳು, ಅಂದಿನ ಪ್ರಧಾನಿ ಇಂದಿರಾ ಗಾಂಧಿ ಹೇರಿದ ತುರ್ತು ಪರಿಸ್ಥಿತಿ ಪರವಾದ ಅವರ ನಿಲುವು, ಭಾರತಕ್ಕೆ ಶುದ್ಧ ಅಥವಾ ಆನ್ವಯಿಕ ವಿಜ್ಞಾನ ಅವಶ್ಯವೋ? ಎಂಬಿತ್ಯಾದಿ ವಿಷಯಗಳ ಕುರಿತು ಅವರ ಅಭಿಪ್ರಾಯಗಳೂ ಇದನ್ನು ಸಮರ್ಥಿಸುತ್ತವೆ.

ಈ ಕೃತಿಯಲ್ಲಿ ನನ್ನನ್ನು ಬಹಳವಾಗಿ ಆಕರ್ಷಿಸಿದ ಭಾಗವೆಂದರೆ – 'ಚಂದ್ರರ ಜೊತೆಗಿನ ಮಾತುಕತೆಗಳು'. ಇದರಲ್ಲಿ ಚಂದ್ರರ ಬಹುಮುಖೀ ವ್ಯಕ್ತಿತ್ವದ ಹಲವು ಆಯಾಮಗಳು ಒಂದೊಂದಾಗಿ ಅನಾವರಣಗೊಳ್ಳುತ್ತಾ ಹೋಗುತ್ತವೆ. ಅವರ ಇಡೀ ಬದುಕನ್ನು ಪ್ರತಿಫಲಿಸುವ ಈ ಅಧ್ಯಾಯ ಇಡೀ ಕೃತಿಗೆ ವಿಶೇಷ ಮೆರುಗನ್ನು ಕೊಟ್ಟಿದೆ.

ತಮ್ಮ ವೈಜ್ಞಾನಿಕ ಪಯಣದಲ್ಲಿ ರುದರ್‌ಫೋರ್ಡ್, ಡಿರ್‍ಯಾಕ್, ಫೌಲರ್, ಎಡಿಂಗ್ಟನ್, ಜಾನ್ ಫಾನ್ ನ್ಯೂಮನ್, ಎನ್ರಿಕೊ ಫೆರ್ಮಿ ಹಾಗೂ ಇನ್ನೂ ಅನೇಕ ಮೇಧಾವಿ ವಿಜ್ಞಾನಿಗಳ ಸಾಂಗತ್ಯ, ಶ್ರೀಮತಿ ಇಂದಿರಾ ಗಾಂಧಿ, ನೆಹರು ಮುಂತಾದ ರಾಜಕೀಯ ಗಣ್ಯರೊಡನೆ ಜರುಗಿದ ಮುಖಾಮುಖಿ, ಅವರ ಶಿಸ್ತಿನ ಕಾರ್ಯವೈಖರಿ ಮುಂತಾದವುಗಳನ್ನು ಮನೋಜ್ಞವಾಗಿ ಚಿತ್ರಿಸಲಾಗಿದೆ.

ಚಂದ್ರರ ಈ ಜೀವನ ಚರಿತ್ರೆಯಲ್ಲಿ ಮುಖಸ್ತುತಿಯಿಲ್ಲ. ಬರೀ ವೈಜ್ಞಾನಿಕ ವಿಷಯಗಳ, ಸೂತ್ರಗಳ ಶುಷ್ಕ ವಿವರಗಳಿಲ್ಲ. ಓದುಗನ ಮೇಲೆ ಆಪ್ತತೆಯ ಮೋಡಿ ಹಾಕುವ ಗುಣವಿದೆ. ಅನೇಕ ವೈಜ್ಞಾನಿಕ ವಿಷಯಗಳು ಸಾಮಾನ್ಯ ಓದುಗನಿಗೆ ಕಬ್ಬಿಣದ ಕಡಲೆಗಳಾಗದಂಥ ರೀತಿಯಲ್ಲಿವೆ. ಆಂಗ್ಲ ಭಾಷೆಯ ವೈಜ್ಞಾನಿಕ ಪದಗಳಿಗೆ ಬಳಸಿರುವ ತತ್ಸಮ ಕನ್ನಡ ಪದಗಳು ಕ್ಲಿಷ್ಟಕರವಾಗಿಲ್ಲ. ಇದಕ್ಕಾಗಿ ಅನುವಾದಕರು ಅಭಿನಂದನಾರ್ಹರು. ಕೃತಿಯಲ್ಲಿರುವ ಕಪ್ಪು-ಬಿಳುಪು ಛಾಯಾಚಿತ್ರಗಳು ಕೃತಿಯ ಅಂದವನ್ನು ಹೆಚ್ಚಿಸಿವೆ. ಚಂದ್ರರ ಮನೆಯನ್ನ ಲಂಕರಿಸಿದ 'ಏಣಿ ಏರುತ್ತಿರುವ ಮನುಷ್ಯ'ನ ಚಿತ್ರವಂತೂ ಚಿಂತನೆಗೆ ಗ್ರಾಸ ಒದಗಿಸುತ್ತದೆ.

ಹೀಗೆ ಅನೇಕ ಒಳನೋಟಗಳನ್ನು ನೀಡುವ ಈ ಗಮನಾರ್ಹ ಕೃತಿ ಕನ್ನಡ ವೈಜ್ಞಾನಿಕ ಸಾಹಿತ್ಯಕ್ಕೆ ಒಂದು ಉತ್ತಮ ಕೊಡುಗೆ. ಚಂದ್ರರ ಬಗ್ಗೆ ಜಿ. ಟಿ. ನಾರಾಯಣರಾವ್ ಅವರು ಕನ್ನಡದಲ್ಲಿ ಕೃತಿಯೊಂದನ್ನು ಬರೆದಿದ್ದಾರೆ. ಇತ್ತೀಚೆಗೆ ದೆಹಲಿಯ ರೂಪ ಪಬ್ಲಿಕೇಷನ್ಸ್, ದಿಲೀಪ್ ಎಂ. ಸಾಲ್ವಿ ಬರೆದ 'ಎಸ್. ಚಂದ್ರಶೇಖರ್ – ದಿ ಸ್ಕಾಲರ್ ಸೈಂಟಿಸ್ಟ್' ಎಂಬ ಅವರ ಜೀವನ ಚರಿತ್ರೆಯನ್ನು ಪ್ರಕಟಿಸಿದೆ.

ಇಂತಹ ಗ್ರಂಥಗಳು ಶ್ರೀಸಾಮಾನ್ಯನಿಗೆ ಎಟುಕುವಂತಾದರೆ, ಲೇಖಕರ ಶ್ರಮ ಸಾರ್ಥಕವಾದಂತೆಯೇ. ಈ ನಿಟ್ಟಿನಲ್ಲಿ, ಸರ್ಕಾರ ಹಾಗೂ ಇತರ ಸಂಘ, ಸಂಸ್ಥೆಗಳು ಸೂಕ್ತ ಯೋಜನೆಗಳನ್ನು ಹಮ್ಮಿಕೊಳ್ಳಬೇಕಾಗಿದೆ.




ಮ. ಶ್ರೀ. ಮುರಳಿಕೃಷ್ಣ
ನಂ. ೮೮೩/೧೦೧೬ (ಔಟ್ ಹೌಸ್)
೧ನೇ 'ಬಿ' ಮುಖ್ಯರಸ್ತೆ, ಗಿರಿನಗರ ೨ನೇ ಹಂತ
ಬೆಂಗಳೂರು - ೫೬೦ ೦೮೫



**ಧರ್ಮ ನಿರಪೇಕ್ಷತೆಯ ದೃಷ್ಟಿಕೋನಗಳು**
ಸಂ.: ಡಾ॥ ಅಸ್ಗರ್ ಅಲಿ ಇಂಜಿನಿಯರ್
**ಪುಟ : ೬೬** **ಬೆಲೆ : ರೂ. ೩೦**
**ಪೀಪಲ್ಸ್ ಲೀಗಲ್ ಫೋರಂ,** ೧೧೮೨, ಬಾಲಕೃಷ್ಣರಾವ್ ರೋಡ್, ಚಾಮರಾಜಪುರಂ, ಮೈಸೂರು-೫೭೦ ೦೦೫

ನಮ್ಮದು ಧರ್ಮನಿರಪೇಕ್ಷ ಜಾತ್ಯತೀತ ರಾಷ್ಟ್ರ. ಎಂದರೆ ಇಲ್ಲಿ ಇಂಥದೇ ಧರ್ಮ/ಜಾತಿಯ ಪ್ರಜೆಗಳು ಮಾತ್ರ ವಾಸಿಸಬಹುದು/ಬಾರದು ಎಂಬ ನಿಯಮವನ್ನು ನಮ್ಮ ಸಂವಿಧಾನ ಅಪೇಕ್ಷಿಸುವುದಿಲ್ಲ. ಎಲ್ಲ ಧರ್ಮೀಯರಿಗೂ ತಂತಮ್ಮ ಆಚರಣೆ ನಂಬಿಕೆಗಳಿಗೆ ಮುಕ್ತ ಅವಕಾಶ ನಮ್ಮಲ್ಲಿದೆ. ಆದರೂ ಎಲ್ಲೋ ತಾಳ ತಪ್ಪಿದಂತೆ ಈ ದೇಶದಲ್ಲಿ ಕೋಮುಗಲಭೆಗಳಿಂದಾಗಿ ಸಾಕಷ್ಟು ಹಾನಿಯಾಗುತ್ತಿದೆ. ಜಾತ್ಯತೀತ ಸಮಾಜದ ಸುಂದರ ಕಲ್ಪನೆಯಿದ್ದೂ ಅದೇಕೆ ಯಶಸ್ವಿಯಾಗಿಲ್ಲ? ಹಾಗಾದರೆ ನಾವು ಕಂಡ ಧರ್ಮನಿರಪೇಕ್ಷತೆಯ ದೃಷ್ಟಿಕೋನಗಳೇನು ? ಅವುಗಳ ನಿಜವಾದ ಲಕ್ಷಣಗಳೇನು ? ವಿದ್ಯಾಸಂಸ್ಥೆಗಳು, ಪ್ರಚಾರ ಮಾಧ್ಯಮಗಳು ಈ ಬಗ್ಗೆ ಜನರಿಗೆ ನೀಡಿರುವ ತಿಳುವಳಿಕೆ ಎಂಥದು ? ಇಂಥ ವಿಚಾರಗಳನ್ನು ಡಾ॥ ಅಸ್ಗರ್ ಅಲಿ ಅವರು ಇಸ್ಲಾಂ ಪರಿಕಲ್ಪನೆಯ ನೆಲೆಯಲ್ಲಿ ಒಂದು ಚಿಂತನೆಯೊಂದಿಗೆ ವಿಶ್ಲೇಷಣೆ ಮಾಡಿದ್ದಾರೆ.

**ಮಹಿಳೆ ಮತ್ತು ಸಮೂಹ ಮಾಧ್ಯಮಗಳು**
(ಲೇ. ಸಂಗ್ರಹ)
ಡಾ॥ ಕೆ. ಸರೋಜಾ
**ಪುಟ : ೧೩೨** **ಬೆಲೆ : ರೂ. ೭೫**
**ಪ್ರಸಾರಾಂಗ,** ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

ಸಮೂಹ ಮಾಧ್ಯಮಗಳ ಮೂಲಕ ಸ್ತ್ರೀಪರ ಕಾಳಜಿಗಳನ್ನು ಹೇಗೆ ಪ್ರಚುರಪಡಿಸಬಹುದೆಂಬ ಅಂಶ ಈ ಲೇಖನಗಳಲ್ಲಿ ವ್ಯಕ್ತವಾಗಿದೆ. ಪತ್ರಿಕೆ, ದೂರದರ್ಶನಗಳಂಥ ಪ್ರಭಾವಶಾಲಿ ಮಾಧ್ಯಮಗಳು ಮಹಿಳೆಯ ಸರ್ವತೋಮುಖ ಅಭಿವೃದ್ಧಿಗೆ ಬೇಕಾದ ಪ್ರಚಾರವನ್ನು ನೀಡುತ್ತಿಲ್ಲವೆಂಬುದೇ ಇಲ್ಲಿನ ಬಲವಾದ ಆರೋಪ. ಮಹಿಳೆಯರ ಬಗ್ಗೆ ಮಾಧ್ಯಮಗಳಲ್ಲಿ ಪ್ರತಿಫಲನಗೊಳ್ಳುವ ವಿಷಯಗಳು ಕೆಲವೊಮ್ಮೆ ಆಕೆಗೆ ಪ್ರತಿಕೂಲವಾಗಿ ಪರಿಣಮಿಸುವುದೂ ಇದೆ. ಜಾಹಿರಾತುಗಳಂತೂ ಅಸಹ್ಯಕರ ರೀತಿಯಲ್ಲಿ ವ್ಯಾಪಾರಿ ಮನೋಭಾವನೆ ಹೊಂದಿರುತ್ತವೆ. ಅನೇಕ ಮಾಧ್ಯಮಗಳ ಕಾರ್ಯಕ್ರಮ ಲೇಖನಗಳನ್ನು ಅವಲೋಕಿಸಿ, ವಿಷಯ ಸಂಗ್ರಹಿಸಿ ಈ ಅಭಿಪ್ರಾಯಕ್ಕೆ ಬರಲಾಗಿದೆ. ಸ್ತ್ರೀಯರ ನೈಜ ಕಾಳಜಿಯ ಬಗ್ಗೆ ಆಲೋಚಿಸುವ, ಗುರುತಿಸುವ ಕೊರತೆಯೊಂದನ್ನು ಸರಿಪಡಿಸಲು ಸಲಹೆಗಳು ಇಲ್ಲಿ ಸಾಕಷ್ಟು ಇವೆ. ಮಹಿಳಾ ಅಧ್ಯಯನಕ್ಕೆ ಒಂದು ಆಕರ ಗ್ರಂಥ.



**ಅಪಾರ್ಥಿನಿ**
ಅಮೃತ ಸೋಮೇಶ್ವರ
**ಪುಟ : ೫೬** **ಬೆಲೆ : ರೂ. ೩೦**
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿಮಿಟೆಡ್,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

ಅಪಾರ್ಥ - ಅಪಹಾಸ್ಯಗಳೆಂಬ ಎರಡು ಗಾಲಿಗಳ ಮೇಲೆ ಸವಾರಿ ಹೊರಟಿರುವ ಪದಪುಂಜ ವಿನ್ಯಾಸಗಳು. ತಿಳಿಹಾಸ್ಯಭರಿತ ವಿಚಿತ್ರಾರ್ಥಗಳಿಂದ ತುಂಬಿಕೊಂಡ ಈ ಪದಗಳ ಅರ್ಥವನ್ನು ಯಥಾರ್ಥವಾದವುಗಳಲ್ಲವೆಂದು ಯಾರೂ ಧೈರ್ಯವಾಗಿ ಹೇಳುವಂತಿಲ್ಲ. ನಾ. ಕಸ್ತೂರಿ ಅವರ ''ಅನರ್ಥಕೋಶ'', ಬೀಚಿಯವರ ''ತಿಮ್ಮಿಕ್ಷನರಿ'', ಡಾ॥ ಶಿವಪ್ಪ ಅವರ ''ನುಡಿಕಿಡಿ'' ಇವುಗಳನ್ನು ನೆನಪಿಸುವ ಈ ಅಪಾರ್ಥಿನಿ ತುಂಬ ಗಂಭೀರೆ. ಪಾರ್ಥನಿಯಂ ಗೆಳತಿಯಿರಬಹುದೆಂದು ತಪ್ಪು ತಿಳಿಯಬೇಡಿ. ಶಬ್ದಗಳ ಬಾಣಗಳನ್ನು ನಮ್ಮತ್ತ ಎಸೆದು ಹೌದು ಎನ್ನಿಸುವ ಅರ್ಥ ಹೇಳಿದಾಗ ನಾವು ಬಾಯಿ ಮುಚ್ಚಬೇಕಾಗುತ್ತದೆ. ಶಬ್ದಕೋಶಗಳ ಮಧ್ಯೆ ಒಂದು ವಿಶೇಷಾರ್ಥವನ್ನು ಹೊರಡಿಸುವ ಪದಕೋಶ. ಈ ಪದಕ್ಕೆ ಹೀಗೆಲ್ಲ ಅರ್ಥ ಉಂಟುಮಾಡಬಹುದೇ ಎಂದು ವಿನೋದ ಪ್ರವೃತ್ತಿಯವರಿಗೆ ಮೆಚ್ಚುಗೆಯಾಗುವಂತೆ ಅತಿ ಜಾಗ್ರತೆಯಿಂದ ಸಂಗ್ರಹಿಸಿದ ಡಿಕ್ ಶನರೀ!



**ಕಾಳಾಮುಖ ದರ್ಶನ**
(ಅಧ್ಯಯನ ಲೇಖನಗಳು)
ಎಸ್. ಎಸ್. ಹಿರೇಮಠ
**ಪುಟ : ೧೬೦** **ಬೆಲೆ : ರೂ. ೪೫**
**ಸಮತಾ ಪ್ರಕಾಶನ,** ಹರಪನಹಳ್ಳಿ, ದಾವಣಗೆರೆ ಜಿಲ್ಲೆ



ಅಪಾರ ಓದಿನ ಫಲದಿಂದ ಸಾಕಷ್ಟು ಅನುಭವವನ್ನು ಗಳಿಸಿಕೊಂಡ ಶ್ರೀ ಎಸ್. ಎಸ್. ಹಿರೇಮಠ ಅವರು ಇದೀಗ ನಮ್ಮ ಮುಂದೆ ಕಾಳಾಮುಖ ದರ್ಶನವನ್ನು ಎಳೆ ಎಳೆಯಾಗಿ ಹರಡಿದ್ದಾರೆ. ಸಾಂಖ್ಯ ಪಾಶುಪತಗಳನ್ನು ಈಗಾಗಲೇ ಹೊಸ ದೃಷ್ಟಿಕೋನದಿಂದ ಪರಿಚಯಿಸಿದಂತೆ ಇಲ್ಲಿಯೂ ಅನೇಕ ಶಾಸನಗಳು ಮತ್ತು ಆಕರ ಗ್ರಂಥಗಳ ನೆರವಿನಿಂದ ಶೈವತತ್ವದ ಶಾಖೆಯೊಂದನ್ನು ಗುರುತಿಸುತ್ತ ತಮ್ಮ ವಿಚಾರವನ್ನು ಮಂಡಿಸಿದ್ದಾರೆ. ಕರ್ನಾಟಕ ದರ್ಶನ ಮಾಲೆಯಲ್ಲಿನ ಮೂರನೆಯ ಕೃತಿಯಾದ ಇದು ಎಲ್ಲ ಜನರಿಂದ ಮನ್ನಣೆ ಪಡೆಯುವಲ್ಲಿ ಸಂಶಯವೇನೂ ಇಲ್ಲ. ನಮ್ಮ ಜನಪದ ಸಂಬಂಧೀ ಆಚರಣೆಗಳು ಮತ್ತು ಸಂಸ್ಕೃತಿಯ ಬಗ್ಗೆ ಆಳವಾಗಿ ತಿಳಿದುಕೊಳ್ಳಬಯಸುವ ಪ್ರತಿಯೊಬ್ಬರಿಗೂ ಈ ಸರಣಿ ಪುಸ್ತಕಗಳಲ್ಲಿ ಧಾರಾಳವಾದ ಸಾಮಗ್ರಿ ಇದೆ. ವೈದಿಕ, ವೈದಿಕೇತರ ಮತ ಧರ್ಮ ದರ್ಶನಗಳ ಬಗ್ಗೆ ಒಂದು ವ್ಯಾಖ್ಯಾನ.




**ವಾರಾಣಸಿ** (ಕಾದಂಬರಿ)
ಎಂ. ಟಿ. ವಾಸುದೇವನ್ ನಾಯರ್
ಅನು : ಕೆ. ಎಸ್. ಕರುಣಾಕರನ್
**ಪುಟ : ೨೦೮** **ಬೆಲೆ : ರೂ. ೭೫**
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿಮಿಟೆಡ್,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

ಮಲಯಾಳ ಸಾಹಿತ್ಯದಲ್ಲಿ ಜ್ಞಾನಪೀಠ ಪುರಸ್ಕೃತ ಲೇಖಕ ಎಂ. ಟಿ. ವಾಸುದೇವನ್ ನಾಯರ್ ಅವರ ಇತ್ತೀಚಿನ ಕಾದಂಬರಿಯ ಅನುವಾದ. ಕೃತಿಯಲ್ಲಿ ಈ ಲೋಕದ ಜನರ ಬದುಕಿನ ವಿವರಗಳು ದಟ್ಟವಾಗಿ ಮೂಡಿಬಂದಂತೆಯೇ ಹಿಂದೂ ಧಾರ್ಮಿಕ ನಂಬುಗೆಗಳಲ್ಲೊಂದಾದ ಸಾವಿನಾಚೆಯ ಆತ್ಮದ ಅಸ್ತಿತ್ವ, ಆ ಬಗ್ಗೆ ಪುಣ್ಯಕ್ಷೇತ್ರಗಳಲ್ಲಿ ನಡೆಯುವ ಸಂಸ್ಕಾರದ ವಿವರಗಳಿಂದ ಪರಸ್ಪರ ವೈರುಧ್ಯದ ಎರಡು ಧ್ರುವಗಳನ್ನು ಚಿತ್ರಿಸಿದ್ದಾರೆ. ಸಾವಿನವರೆಗಿನ ಮೋಜಿನ ಜೀವನವೇ ಒಂದು ರೀತಿಯಾದರೆ ಅಪರಕ್ರಿಯಾ ಕರ್ಮಕಾಂಡದ ಮೋಕ್ಷ - ಪುನರ್ಜನ್ಮಗಳ ಸುತ್ತ ಕುಣಿಯುತ್ತಿರುವ ಕಾಶಿ-ಗಯಾ-ವಾರಾಣಸಿಯಂತಹ ಸುಲಿಗೆಕೋರ ಕ್ಷೇತ್ರಗಳ ನಿಜಸ್ವರೂಪ ತೋರುವ ಬಗೆಯೇ ಇನ್ನೊಂದು ರೀತಿ. ಒಂದೊಂದು ಕೋನದಿಂದ ಕಂಡಾಗ ಒಂದೊಂದು ರೀತಿಯಲ್ಲಿ ಅನಾವರಣಗೊಳ್ಳುವ ವಾರಾಣಸಿಯ ವೈವಿಧ್ಯಮಯ ನೋಟಗಳಲ್ಲಿ ಆಸ್ತಿಕರ-ನಾಸ್ತಿಕರ ನಡುವಿನ ನಂಬಿಕೆಯ ಘರ್ಷಣೆಯಿದೆ.

**ದಾದಾಗಿರಿಯ ದಿನಗಳು** (ಬದುಕಿನ ದಾಖಲೆಗಳು)
ಶ್ರೀಧರ್
**ಪುಟ : ೬೯೨** **ಬೆಲೆ : ರೂ. ೧೫೦**
**ಅಗ್ನಿ ಪ್ರಕಾಶನ,** ನಂ. ೩ ''ಎ'', ೯ನೇ ''ಬಿ'' ಮೈನ್ ರೋಡ್, ಪ್ರಶಾಂತಿ ನಗರ, ಬೆಂಗಳೂರು - ೫೬೦ ೦೭೮




ಇದು ಅಗ್ನಿ ಪತ್ರಿಕೆಯ ಶ್ರೀಧರ್ ತಾನು ಒಂದು ಕಾಲದಲ್ಲಿ ಸಂಚರಿಸಿ ಹೊರಬಂದ ಪಾತಕಗಳ ಲೋಕದ, ರೌಡಿಗಳ ಸಾಮ್ರಾಜ್ಯದ ಪರಿಚಯ ನೀಡುವ ಪುಸ್ತಕ. ಎಪ್ಪತ್ತು - ಎಂಬತ್ತರ ದಶಕಗಳಲ್ಲಿ ಬೆಂಗಳೂರು ನಗರ ಕಂಡ ಭೀಕರ ಕೊಲೆಗಡುಕರ ದಿನಚರಿಯ ಕ್ಷಣಕ್ಷಣಗಳ ಬಣ್ಣನೆ. ತಾನು ಕಾಲಿಟ್ಟ ನೆಲ ಕೆಸರಿನ ಘಟ್ಟವೆಂದು ಬೇಗನೆ ಅರಿತುಕೊಂಡ ಶ್ರೀಧರ್ ಅಲ್ಲಿಂದ ಕಳಚಿಕೊಂಡು ಬರವಣಿಗೆಯ ಹಾದಿ ಹಿಡಿದು ಶಿಷ್ಟರು ಹಾಗೂ ದುಷ್ಟರ ನಡುವಿನ ವ್ಯತ್ಯಾಸ ಬಹಳ ಸೂಕ್ಷ್ಮವಾಗಿರುವುದನ್ನು ಮನಗಾಣಿಸಿದ್ದಾರೆ. ಯಾರನ್ನೋ ಸುಪ್ರೀತಗೊಳಿಸಲು ಯಾರನ್ನೋ ಯಮಲೋಕಕ್ಕಟ್ಟುವ ಈ ಪಾತಕಿಗಳ ದುಷ್ಕೃತ್ಯಗಳಲ್ಲಿ ಸಮಾಜದಲ್ಲಿ ಗಣ್ಯರೆನಿಸಿದವರ ಪಾತ್ರವೇನು ? ಈ ಮಚ್ಚು ಹಿಡಿದ ರೌಡಿಗಳು ಯಾರ ಕೈಯೊಳಗಿನ ಆಯುಧಗಳು ? ಒಟ್ಟಿನಲ್ಲಿ ಸಮಾಜ ಹದಗೆಡುತ್ತಾ ಹೋದಂತೆ ಇಂಥ ಕ್ರೂರ ಸಮಾಜವೊಂದರ ನಿರ್ಮಾಣವಾಗುತ್ತದೆ.

**ಇಂದಿರಾಕುಮಾರಿ**

# ಗಡಿಭಾಗದ ಸಮಸ್ಯೆಗಳು ಮತ್ತು ಪರಿಹಾರ

ಡಾ॥ ಅನಿಲ ಕಮತಿ

ನಾವು ನಮ್ಮ ವಿದ್ಯಾರ್ಥಿಗಳನ್ನ ''ಕರ್ನಾಟಕ ರಾಜ್ಯದ ಗಡಿಗಳು ಎಲ್ಲಿವೆ ?'' ಎಂದು ಕೇಳಿದರೆ ಅವರಿಂದ ಥಟ್ಟನೆ ಬರುವ ಉತ್ತರ 'ನಿಪ್ಪಾಣಿಯಿಂದ ಆಚೆಗೆ ೨೦ಕಿ.ಮೀ. ಅಂತರದಲ್ಲಿ ದೂಧಗಂಗೆಯ ತಟದಲ್ಲಿದೆ, ಬೆಂಗಳೂರಿನಿಂದಾಚೆ ೫೦ಮೈಲಿ ದೂರದ ಹೊಸೂರಿನ ಪಕ್ಕದಲ್ಲಿದೆ, ಬಳ್ಳಾರಿ ಯಿಂದ ಇಂತಿಷ್ಟು, ಮಂಗಳೂರಿನಿಂದ ಇಷ್ಟಿಷ್ಟು ಅಂತರದಲ್ಲಿದೆ', ಎಂದು ಹೇಳುತ್ತಾರೆ. ಆದರೆ ಜೀವಮಾನದ ಎರಡು ವರ್ಷಗಳನ್ನು ಹೊರತುಪಡಿಸಿ, ಇನ್ನುಳಿದ ವಸಂತಗಳನ್ನು ಗಡಿಭಾಗದಲ್ಲೇ ಕಳೆದ ನನಗೆ – 'ನಮ್ಮದು ಗಡಿಗಳೇ ಇಲ್ಲದ ನಾಡು, ಕರ್ನಾಟಕಕ್ಕೆ ಸೀಮೆಗಳೇ ಇಲ್ಲ' ಎಂಬ ಆತ್ಮವಿಶ್ವಾಸ.

ಇತಿಹಾಸದ ಪುಟಗಳನ್ನ ತಿರುವಿಹಾಕುವಾಗ ನಮಗೆ ಒಂದು ಅಚ್ಚರಿಯ ಸಂಗತಿ ಎದುರಾಗಿರುತ್ತದೆ : ''ವಿಜಯನಗರದ ಅರಸು ಕೃಷ್ಣದೇವರಾಯನ ಕಾಲದಲ್ಲಿ ಮುತ್ತು ರತ್ನಗಳನ್ನ ಪೇಟೆಬೀದಿಯಲ್ಲಿ ರಾಶಿರಾಶಿಯಾಗಿ ಪೇರಿಸಿದ್ದು ದವಸ ಧಾನ್ಯಗಳಂತೆ ಇವುಗಳನ್ನ ಅಳೆದಳೆದು ಮಾರುತ್ತಿದ್ದರು. ಈ ರಾಜ್ಯದಲ್ಲಿಯ ಮನೆಗಳಿಗೆ ಬಾಗಿಲುಗಳೇ ಇರಲಿಲ್ಲ'' ಎಂಬ ಅಚ್ಚರಿಯ ಸಂಗತಿ ಅರಿವಾಗುತ್ತದೆ.

ಹಾಗಾದರೆ 'ಬಾಗಿಲುಗಳೇ ಇಲ್ಲದ ಮನೆಗಳಂತೆ, ಈ ಗಡಿಗಳೇ ಇಲ್ಲದ ನಾಡು' ಎಂಬುದೂ ಅಭಿಮಾನಪಡುವ ಸಂಗತಿಯೋ ಅಥವಾ ನಾಚಿಕೆಯಿಂದ ತಲೆತಗ್ಗಿಸುವಂಥ ವಿಷಯವೋ ಎಂಬುದನ್ನು ಪರಾಮರ್ಶಿಸೋಣ.

ವಾಸ್ತವವಾಗಿ ನಿಪ್ಪಾಣಿಯ ಆಚೆ ೨೦ಕಿ.ಮೀ.ಗಳಂತರದಲ್ಲಿ ನಮ್ಮ ಗಡಿಯಿದ್ದರೂ, ನಿಪ್ಪಾಣಿಯ ಈಚೆ ಕರ್ನಾಟಕದ ಅಂತರಂಗದೊಳಗೆ ನೂರು ಕಿ.ಮೀ.ವರೆಗೂ ನೆರೆರಾಜ್ಯದ ಭಾಷೆ, ಸಂಸ್ಕೃತಿಯ ಛಾಪು ನಿಚ್ಚಳವಾಗಿದೆ. ಇಡೀ ಬಳ್ಳಾರಿ ಜಿಲ್ಲೆ ತೆಲುಗುಮಯವಾಗಿದೆ. ಬೆಂಗಳೂರಿನಲ್ಲಿ ಕನ್ನಡವೆಂದರೆ ಎನ್ನಡ ? ಎಂಬ ಉತ್ತರ ಕೇಳಿಬರುತ್ತದೆ. ಇದು ನಮ್ಮ ರಾಜ್ಯದ ರಾಜಕೀಯ ಗಡಿಗಳಿಗೂ, ಸಾಂಸ್ಕೃತಿಕ ಗಡಿಗಳಿಗೂ ಇರುವ ವ್ಯತ್ಯಾಸ. ಸುತ್ತಲಿನಿಂದ ನೆರೆರಾಜ್ಯದ ಸಂಸ್ಕೃತಿಗಳೂ, ಮೇಲಿನಿಂದ ಹಿಂದಿ ಹೇರಿಕೆಯೂ ಅವ್ಯಾಹತವಾಗಿ ಧಾಳಿ ನಡೆಸಿದ್ದರೂ ಕನ್ನಡಿಗರ ನಿದ್ದೆಗೆ ಮಾತ್ರ ಭಂಗ ಬಂದಿಲ್ಲ.

ಇಂಥದೊಂದು ಬೌದ್ಧಿಕ ದಾರಿದ್ರ್ಯ ನಮ್ಮನ್ನಾವರಿಸಿಕೊಂಡಿರುವುದರಿಂದಲೇ ಕನ್ನಡದ ಅಸ್ತಿತ್ವದ ವಿಷಯ ಎದುರಾದಾಗಲೆಲ್ಲ ಎದೆಯಲ್ಲಿ ಒಂದು ಕ್ಷಣ ಅವಲಕ್ಕಿ ಕುಟ್ಟಿದಂತಾಗುತ್ತದೆ. ಅದರಲ್ಲೂ ಗಡಿ ಕನ್ನಡಿಗರು ದಶಕದಶಕಗಳಿಂದ ನಮ್ಮವರ ಅನಾಸ್ಥೆ, ಅನ್ಯರ ದುರಾಕ್ರಮಣದಿಂದ ಸದಾ ಬೇಯುತ್ತಿರುವ ದಗ್ಧ ಕನ್ನಡಿಗರು.

ಗಡಿಕನ್ನಡಿಗರ ಸಮಸ್ಯೆಗಳ ಪಟ್ಟಿ ಎಷ್ಟೊಂದು ದೀರ್ಘವಾಗಿದೆ ಎಂದರೆ ಅವುಗಳನ್ನೆಲ್ಲ ಸವಿವರವಾಗಿ ವಿವರಿಸುತ್ತ ಹೋದರೆ ಬೇರೊಂದು ಇಂಥ ಸಂಚಿಕೆಯೇ ಆದೀತು.

ಗಡಿ ಕನ್ನಡಿಗರು ಇಂದು ಎದುರಿಸುತ್ತಿರುವ ಪ್ರಮುಖ ಸಮಸ್ಯೆ ಎಂದರೆ ಉದ್ಯೋಗಾವಕಾಶಗಳದ್ದು. ಇದು ಇನ್ನುಳಿದ ಕೆಲ ಸಮಸ್ಯೆಗಳಿಗೆ ತಾಯಿ ಬೇರೂ ಹೌದು.

ಕರ್ನಾಟಕ ರಾಜ್ಯ ರಚನಾನಂತರದಿಂದ ಇಂದಿನವರೆಗೂ ಕರ್ನಾಟಕದ ಯಾವುದೇ ಗಡಿಯಲ್ಲಿ ವಿಪುಲ ಉದ್ಯೋಗಾವಕಾಶಗಳನ್ನು ನೀಡಬಲ್ಲಂಥ ಉದ್ದಿಮೆಗಳು ಹುಟ್ಟಿಕೊಂಡಿಲ್ಲ. ಇತರ ರಾಜ್ಯಗಳವರು ನಮ್ಮ ಗಡಿಗೆ ಬೇಲಿ ಎಳೆದಂತೆ ಎಳೆದು ಔದ್ಯೋಗಿಕ ವಸಾಹತುಗಳನ್ನೇ ಅಭಿವೃದ್ಧಿಪಡಿಸಿದ್ದಾರೆ. ದಿನಬೆಳಗಾದರೆ ಸಾವಿರಾರು ಜನರಿಗೆ ಉದ್ಯೋಗ ಒದಗಿಸುವ ಈ ಉದ್ದಿಮೆಗಳು ನಮ್ಮ ಜನರ ಬಾಯಲ್ಲಿ ನೀರೂರಿಸುವುದು ಸಹಜ.

ಇಲ್ಲಿ ಒಂದು ಪ್ರಸಂಗ ನೆನಪಿಗೆ ಬರುತ್ತದೆ. ಕರ್ನಾಟಕ-ಮಹಾರಾಷ್ಟ್ರದ ಗಡಿ ಹಳ್ಳಿಯೊಂದರಲ್ಲಿ ನಿವೃತ್ತ ಕನ್ನಡ ಶಾಲೆಯ ಶಿಕ್ಷಕರೊಬ್ಬರು ನನಗೆ ನಿಕಟ ಪರಿಚಯದವರು. ತಮ್ಮ ಸೇವಾವಧಿಯುದ್ದಕ್ಕೂ ಕನ್ನಡಶಾಲೆಯ ಅಭಿವೃದ್ಧಿಗೆ, ಕನ್ನಡ ಶಾಲೆಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಿಸಲು ಅವಿರತ ದುಡಿದ ಇವರು ಮೊನ್ನೆ ದಾರಿಯಲ್ಲಿ ಭೆಟ್ಟಿಯಾದಾಗ ತಮ್ಮ ಮೊಮ್ಮಗನನ್ನು ಮರಾಠಿ ಶಾಲೆಗೆ ಬಿಡಲು ಹೊರಟಿದ್ದರು. ಇದನ್ನು ಕೇಳಿದಾಕ್ಷಣ ನಖಶಿಖಾಂತ ಉರಿದೆದ್ದ ನನ್ನ ಮನ ಆಶ್ಚರ್ಯದಲ್ಲಿ ಮುಳುಗೆದ್ದಿತು. ಅವರ ಜೀವನದ ಇದುವರೆಗಿನ ಸಾಧನೆಯನ್ನು ನೆನಪಿಗೆ ತಂದುಕೊಂಡು 'ಇದ್ಯಾಕೆ ಹೀಗೆ ?' ಎಂದು ಕೇಳಿದಾಗ ಅವರು ಹೇಳಿದ್ದಿಷ್ಟೇ – 'ನಮ್ಮ ಗೇಣು ಹೊಟ್ಟೆಗೆ ತುತ್ತು ಅನ್ನ, ಮಾನಮುಚ್ಚಲು ಗೇಣು ಬಟ್ಟೆಗಳನ್ನು ಯಾವುದು ಕೊಡುವುದೋ ಅದು ದೇಶ-ಭಾಷೆ ಯಾವುದೇ ಆಗಿದ್ದರೂ ನಮಗೆ ದೇವರ ಸಮಾನ' ಎಂದು ಹೇಳಿ ಮ್ಲಾನವದನರಾಗಿ ಹೋಗಿಬಿಟ್ಟರು.

ಇವರ ಮಾತಿನ ಮರ್ಮ ತಿಳಿಯಬೇಕಾದರೆ ನಾವೆಲ್ಲ ಒಂದೆರಡು ಘಂಟೆ ಈ ಪ್ರದೇಶದಲ್ಲೆಲ್ಲ ಸುತ್ತು ಹಾಕಬೇಕು. ದೋರಗಾಂವದಿಂದ ನಾಲ್ಕು ಕಿ.ಮೀ. ಉತ್ತರಕ್ಕೆ ಪ್ರಾರಂಭವಾಗುವ ಮಹಾರಾಷ್ಟ್ರದ ಗಡಿಗೆ ಗೆರೆ ಎಳೆದಂತೆ ಹತ್ತಾರು ಉದ್ದಿಮೆಗಳನ್ನು ಮಹಾರಾಷ್ಟ್ರ ಸ್ಥಾಪಿಸಿದೆ. ಈ ಕಾರ್ಖಾನೆಗಳಲ್ಲಿ ದಿವಾನನಿಂದ ಜವಾನನವರೆಗೂ ಮರಾಠಿಯದೇ ಪಾರುಪತ್ಯ. ದಸ್ತಕತ್ತಿನಿಂದ ದಸ್ತಾವೇಜಿನವರೆಗೂ ಮರಾಠಿ ಭಾಷೆಯದೇ ಅಕ್ಷರ, ಮರಾಠಿಯದೇ ಅಂಕಿ-ಸಂಖ್ಯೆಗಳು. ಇಲ್ಲಿಯ ಉತ್ತಮ ನೌಕರಿಗಳೆಲ್ಲ ಅಲ್ಲಿಯ ಮಣ್ಣಿನ ಮಕ್ಕಳು ಮರಾಠಿಗರಿಗಾದರೆ, ದಿನಗೂಲಿ ನೌಕರಿಯ ಕೂಲಿಕಾರರೆಲ್ಲ ಕನ್ನಡಿಗರು – ಅದೂ ಉತ್ತಮ ಮರಾಠಿ ಬಲ್ಲ ಕನ್ನಡಿಗರು. ವಸ್ತುಸ್ಥಿತಿ ಹೀಗಿರಬೇಕಾದರೆ, ಅಭಿಮಾನಕ್ಕೆ ಜೋತುಬಿದ್ದು ಮಗನಿಗೆ ಕನ್ನಡ ಕಲಿಸಿ ನೌಕರಿ ಸಿಗದೇ ಆತನನ್ನು ಸಾಕುವ ಹೊಣೆಯೂ ಈ ಹಣ್ಣುಜೀವಕ್ಕೇ ಇರುವಾಗ ಮೊಮ್ಮಗನಾದರೂ ಕಲಿತು ನೌಕರಿ ಹಿಡಿಯಲಿ ಅಂತಾ ಯೋಚಿಸುವುದು ತಪ್ಪೇ ? ಇಂಥ ಉದ್ಯೋಗಾವಕಾಶಗಳ ಕಾರಣಕ್ಕಾಗಿಯೇ ಗಡಿಭಾಗದಲ್ಲಿ ಪ್ರತಿವರುಷ ಸಾವಿರಾರು ಕುಟುಂಬಗಳು ಈ ರೀತಿ 'ಭಾಷಾಂತರ'ಕ್ಕೊಳಗಾಗುತ್ತಲಿವೆ.

ಕನ್ನಡ ಮಾಧ್ಯಮ ಶಿಕ್ಷಣದ್ದಂತೂ ಮುಗಿಯದ ಕಥೆ. ಕುರಿದೊಡ್ಡಿಯನ್ನು ನೆನಪಿಗೆ ತರುವ ಕನ್ನಡ ಶಾಲೆಗಳು, ಕಾಂಕ್ರೀಟ್ ಕಟ್ಟಡದಲ್ಲಿರುವ ಮರಾಠಿ-ಉರ್ದುಶಾಲೆಗಳು. ನಾಲ್ಕು ಕ್ಲಾಸುಗಳಿಗೆ ಒಬ್ಬ ಮೇಷ್ಟ್ರು ಕನ್ನಡ ಶಾಲೆಗಳಲ್ಲಾದರೆ, ನಾಲ್ಕು ಜನ ವಿದ್ಯಾರ್ಥಿಗಳಿಗೆ ಒಬ್ಬ ಮೇಷ್ಟ್ರು ಮರಾಠಿ ಶಾಲೆಗಳಲ್ಲಿ, ಕನ್ನಡದ ಶಾಲೆಗಳೇ ಇಲ್ಲದ ಅನೇಕ ಊರುಗಳು ಇನ್ನೂ ಈ ಪ್ರದೇಶದಲ್ಲಿದ್ದರೆ, ಮತ್ತೆ ಹೊಸ ಹೊಸ ಮರಾಠಿ ಶಾಲೆಗಳಿಗೆ, ಕೇವಲ ಮರಾಠಿ ಮಾಧ್ಯಮದ (ಇಲ್ಲಿ ಕನ್ನಡಕ್ಕೆ ಪ್ರವೇಶವಿಲ್ಲ) ಪ್ರೌಢಶಾಲೆಗಳನ್ನು ಮಂತ್ರಿ ಮಹೋದಯರು ಪ್ರಾರಂಭಿಸುತ್ತಲೇ ಇದ್ದಾರೆ.

ನೀರಾವರಿಯ ವಿಷಯಕ್ಕೆ ಬಂದರೆ ಅಲ್ಲಿಗೂ ಇಲ್ಲಿಗೂ ಅಜಗಜಾಂತರ. ಮಳೆಗಾಲ ಮುಗಿದ ಒಂದೆರಡು ತಿಂಗಳಲ್ಲೇ ಬತ್ತಿಹೋಗುವ ಕೃಷ್ಣೆ, ಭೀಮೆಯರದು ವ್ಯಥೆಯ ಕಥೆ. ರಾಜ್ಯಪುನರ್ರಚನೆಯ ಪ್ರಾರಂಭದ ದಿನಗಳಲ್ಲಿ ಮಹಾರಾಷ್ಟ್ರ ಕೊಯನಾ ಅಣೆಕಟ್ಟನ್ನು ಕಟ್ಟುವ ದಿನಗಳಲ್ಲಿ ನೀರಿನಲ್ಲಿ, ವಿದ್ಯುತ್ತಿನಲ್ಲಿ ಕರ್ನಾಟಕಕ್ಕೆ ಪಾಲು ಕೊಡುವುದಾಗಿ ಪ್ರಸ್ತಾಪಿಸಿ, ಇದಕ್ಕೆ ಪ್ರತಿಯಾಗಿ ಕೇವಲ ಎರಡೂವರೆ ಕೋಟಿ ರೂಪಾಯಿ ನೀಡುವಂತೆ ಕೇಳಿಕೊಂಡಿತ್ತಂತೆ. ಈ ಪ್ರಸ್ತಾಪವನ್ನು ಕರ್ನಾಟಕ ಸರಕಾರ ಸಾರಾಸಗಟಾಗಿ ತಳ್ಳಿಹಾಕಿದಾಗ ನಿರ್ವಾಹವಿಲ್ಲದೇ ಮಹಾರಾಷ್ಟ್ರ ಅಪಾರ ನೀರನ್ನು ವಿದ್ಯುತ್ ಉತ್ಪಾದನೆಗೆ ಬಳಸಿಕೊಂಡು ಸಮುದ್ರಕ್ಕೆ ನೇರವಾಗಿ ಬಿಟ್ಟುಬಿಟ್ಟಿತು. ಹೀಗಾಗಿ ಕೃಷ್ಣೆ ಬತ್ತಿದಾಗಲೆಲ್ಲ ಮಹಾರಾಷ್ಟ್ರದ ಭಾಗದ ಹಳ್ಳಿಗೆ ತಲುಪುವಷ್ಟು ಮಾತ್ರ ನದಿಯ ಪಾತ್ರಕ್ಕೆ ನೀರು ಬಿಟ್ಟುಕೊಡುವ ಮಹಾರಾಷ್ಟ್ರ, ಕರ್ನಾಟಕಕ್ಕೆ ಕುಡಿಯುವ ನೀರಿಗಾಗಿಯೂ ಕಣ್ಣೀರು ಹರಿಯುವಂತೆ ಮಾಡುತ್ತದೆ. ಭೀಮೆಯ ವಿಷಯಕ್ಕೂ ಕಾಲ ಮಿಂಚಿದಾಗ ಎಚ್ಚೆತ್ತು

ಗಡಿಭಾಗದ ಸಮಸ್ಯೆಗಳು ಒಂದೆರಡಲ್ಲ. ಕನ್ನಡ ಮಾಧ್ಯಮ ಶಿಕ್ಷಣದ್ದಂತೂ ಮುಗಿಯದ ಕಥೆ. ಕುರಿದೊಡ್ಡಿಯನ್ನು ನೆನಪಿಗೆ ತರುವ ಕನ್ನಡ ಶಾಲೆಗಳು, ಕಾಂಕ್ರೀಟ್ ಕಟ್ಟಡದಲ್ಲಿರುವ ಮರಾಠಿ - ಉರ್ದುಶಾಲೆಗಳು. ನಾಲ್ಕು ಕ್ಲಾಸುಗಳಿಗೆ ಒಬ್ಬ ಮೇಷ್ಟ್ರು ಕನ್ನಡ ಶಾಲೆಗಳಲ್ಲಾದರೆ, ನಾಲ್ಕು ಜನ ವಿದ್ಯಾರ್ಥಿಗಳಿಗೆ ಒಬ್ಬ ಮೇಷ್ಟ್ರು ಮರಾಠಿ ಶಾಲೆಗಳಲ್ಲಿ, ಕನ್ನಡದ ಶಾಲೆಗಳೇ ಇಲ್ಲದ ಅನೇಕ ಊರುಗಳು ಇನ್ನೂ ಈ ಪ್ರದೇಶದಲ್ಲಿದ್ದರೆ, ಮತ್ತೆ ಹೊಸ ಹೊಸ ಮರಾಠಿ ಶಾಲೆಗಳಿಗೆ, ಕೇವಲ ಮರಾಠಿ ಮಾಧ್ಯಮದ (ಇಲ್ಲಿ ಕನ್ನಡಕ್ಕೆ ಪ್ರವೇಶವಿಲ್ಲ) ಪ್ರೌಢಶಾಲೆಗಳನ್ನು ಮಂತ್ರಿ ಮಹೋದಯರು ಪ್ರಾರಂಭಿಸುತ್ತಲೇ ಇದ್ದಾರೆ.

ಕೊಂಡ ಕರ್ನಾಟಕ ದಿನಬೆಳಗಾದರೆ ಮಹಾರಾಷ್ಟ್ರದೆದುರು ಮಂಡಿಯೂರಿ ಅಂಗಲಾಚುತ್ತಿದೆ.

ವಿದ್ಯುತ್ತಿನ ವಿಷಯಕ್ಕೆ ಬಂದರೆ ಅತ್ತ ಝುಗಝುಗ, ಇತ್ತ ಭಗಭಗ. ಅದೆಷ್ಟೋ ಕಡೆ ಕರ್ನಾಟಕ ಮಹಾರಾಷ್ಟ್ರದ ಮಧ್ಯೆಯ ಸೀಮೆಗಳು ನದಿಗಳೇ ಆಗಿರುವುದರಿಂದ ಅತ್ತ ದಿನದ ಇಪ್ಪತ್ನಾಲ್ಕು ಗಂಟೆ ಪಂಪ್‌ಸೆಟ್ಟುಗಳು ನೀರು ಎಳೆದು ಹಾಕುತ್ತಿದ್ದರೆ, ಇತ್ತ ದಿನಕ್ಕೆ ಆರು ಘಂಟೆ ಮಾತ್ರ ವಿದ್ಯುತ್ ಸರಬರಾಜಿರುವುದರಿಂದ ಅತ್ತಲಿನ ಹೊಲಗದ್ದೆಗಳು ಹಚ್ಚ ಹಸುರಾಗಿ ನಳನಳಿಸುತ್ತಿದ್ದರೆ, ಇತ್ತಲಿನ ಹೊಲಗಳಲ್ಲಿ ಅರ್ಧ ಒಣಗಿದ ಬೆಳೆಗಳು, ಕುಟುಕು ಜೀವ ಹಿಡಿದು ನಿಂತಿರುತ್ತವೆ.

ಹಿಂದೆ ಇತಿಹಾಸದಲ್ಲಿ, 'ಭಾರತದಲ್ಲಿ ಬೆಳೆದ ಹತ್ತಿ ಬ್ರಿಟನ್ನಿಗೆ ಹೋಗಿ ಅಲ್ಲಿಯ ಮ್ಯಾಂಚೆಸ್ಟರಿನಲ್ಲಿ ಬಟ್ಟೆ ತಯಾರಾಗಿ ಮತ್ತೆ ಭಾರತಕ್ಕೆ ಆಯಾತವಾಗುತ್ತದೆ' ಎಂಬುದನ್ನು ಓದಿ ನಾವೆಲ್ಲ ಹಳಹಳಿಸುತ್ತಿದ್ದೆವು. ಇಂದಿಗೂ ಪರಿಸ್ಥಿತಿಯಲ್ಲಿ ಹೆಚ್ಚಿನ ಬದಲಾವಣೆಯಾಗಿಲ್ಲ. ಇಂದು ಹತ್ತಿ ಬೆಳೆಯುವ ಪ್ರದೇಶವೆಲ್ಲ ಗೋಕಾಕ, ಬೈಲಹೊಂಗಲ, ಸವದತ್ತಿ ತಾಲೂಕುಗಳಲ್ಲಿ ಮತ್ತು ಧಾರವಾಡ ಜಿಲ್ಲೆಗಳಲ್ಲಿದ್ದರೆ, ಈ ಪ್ರದೇಶದಲ್ಲಿ ಯಾವೊಂದು ನೂಲಿನ ಗಿರಣಿಗಳೂ ಸರಿಯಾಗಿ ಕಾರ್ಯ ನಿರ್ವಹಿಸುತ್ತಿಲ್ಲ. ಮಹಾರಾಷ್ಟ್ರದ ಮ್ಯಾಂಚೆಸ್ಟರ್ ಎಂದೇ ಖ್ಯಾತಿ ಪಡೆದಿರುವ ಇಚಲಕರಂಜಿಯ ಸುತ್ತ ಹದಿನಾಲ್ಕು ನೂಲಿನ ಗಿರಣಿಗಳೂ, ಮನೆಮನೆಗಳಲ್ಲಿ ವಿದ್ಯುತ್ ಮಗ್ಗಗಳೂ ಕಾರ್ಯ ನಿರ್ವಹಿಸುತ್ತಿವೆ. ಅಂದು ಇಂಗ್ಲೆಂಡಿಗೆ ಹೋಗುತ್ತಿದ್ದ ಹತ್ತಿ ಇಂದು ಕರ್ನಾಟಕದಿಂದ ಮಹಾರಾಷ್ಟ್ರಕ್ಕೆ ಹೋಗಿ, ಬಟ್ಟೆಯಾಗಿ ಪರಿವರ್ತನೆಗೊಂಡು ಮತ್ತೆ ನಮ್ಮವರ ಮಾನಮುಚ್ಚಲು ಕರ್ನಾಟಕಕ್ಕೆ ಬರುತ್ತದೆ. ಇದರ ಪರಿಣಾಮವಾಗಿ ರಬಕವಿ-ಬನಹಟ್ಟಿಯ ನೇಕಾರರೆಲ್ಲ ಇಚಲಕರಂಜಿಯ ಧಣಿಗಳ ಮುಂದೆ ಕೆಲಸಕ್ಕಾಗಿ ಅಂಗಲಾಚುತ್ತಿದ್ದಾರೆ.

ಇಲ್ಲಿಯ ರಸ್ತೆಗಳ ಪಾಡು ಆ ದೇವರಿಗೇ ಪ್ರೀತಿ. ಅಲ್ಲಿ ಬಹುತೇಕ ರಸ್ತೆಗಳು ಉತ್ಕೃಷ್ಟವಾಗಿವೆ. ರಸ್ತೆಗಳ ವಿಷಯಕ್ಕೆ ಹಿರಿಯರೊಬ್ಬರು ಹೇಳುತ್ತಿದ್ದ ಒಂದು ಮಾತು ಒಂದು ಪುಟದ ವರ್ಣನೆಗೆ ಸಮವೆಂಬಂತಿರುವುದರಿಂದ ಅದನ್ನಿಲ್ಲಿ ಪ್ರಸ್ತಾಪಿಸುತ್ತಿದ್ದೇನೆ. ''ಮಹಾರಾಷ್ಟ್ರದಲ್ಲಿ ಕಾರಿನಲ್ಲಿ ಹೊರಟರೂ ವಿಮಾನದಲ್ಲಿ ಹೊರಟಂತಿರುತ್ತದೆ. ಕರ್ನಾಟಕದಲ್ಲಿ ವಿಮಾನದಲ್ಲಿ ಹೊರಟರೂ ಧಡಿಕೆ ಹತ್ತುತ್ತದೆ.'' ಇದು ಸ್ವಲ್ಪ ಉತ್ಪ್ರೇಕ್ಷೆಯ ಮಾತಾದರೂ ವಾಸ್ತವಕ್ಕೆ ದಿಕ್ಸೂಚಿಯಾಗಿದೆ.

ನಮ್ಮ ಗಡಿಯುದ್ದಕ್ಕೂ ಕೃಷಿ ಉತ್ಪನ್ನ ಮಾರುಕಟ್ಟೆಗಳು (APMC) ಹಾಳು ಸುರಿಯುತ್ತಿವೆ. ನೆರೆರಾಜ್ಯದ ತಾಲೂಕು- ಜಿಲ್ಲಾ ಸ್ಥಳಗಳಲ್ಲಿಯ APMCಗಳು ಹಗಲು ರಾತ್ರಿ ಎನ್ನದೇ ಕಾರ್ಯ ನಿರ್ವಹಿಸುತ್ತಿವೆ. ಇದಕ್ಕೆ ಮೂಲಕಾರಣ ಕರಾಕರಣೆಯಲ್ಲಿರುವ ವ್ಯತ್ಯಾಸ. ನಮ್ಮ ರೈತರು ತಮ್ಮ ಉತ್ಪನ್ನಗಳನ್ನು ಅಲ್ಲಿಗೆ ಹೋಗಿ ಮಾರಿಬರುತ್ತಾರಾದರೆ, ನಮ್ಮ ಚಿಲ್ಲರೆ ವ್ಯಾಪಾರಿಗಳು ಮತ್ತೆ ಅಲ್ಲಿಗೇ ಹೋಗಿ ಇವುಗಳನ್ನು ಕೊಂಡುತರುತ್ತಾರೆ.

ರಸ್ತೆ, ಸಾರಿಗೆ, ವಿದ್ಯುತ್ತು, ನೀರು ಪೂರೈಕೆ, ಆಸ್ಪತ್ರೆ, ಶೌಚಾಲಯ ಇಂಥ ಎಲ್ಲ ಮೂಲಭೂತ ಸೌಕರ್ಯಗಳಿಂದಲೂ ವಂಚಿತವಾಗುತ್ತಿವೆ ನಮ್ಮ ಗಡಿಯ ಹಳ್ಳಿಗಳು ಮತ್ತು ಪಟ್ಟಣಗಳು.

ನಾನು ಇದುವರೆಗೂ ಸ್ಥೂಲವಾಗಿ ಚರ್ಚಿಸಿದ್ದು ಕರ್ನಾಟಕ-ಮಹಾರಾಷ್ಟ್ರದ ಉತ್ತರದ ಗಡಿಯ ಚಿತ್ರಣವಾದರೂ, ಕರ್ನಾಟಕದ ಐದೂ ಗಡಿಗಳಲ್ಲಿ ಈ ಚಿತ್ರ ಭಿನ್ನವಾಗೇನೂ ಇಲ್ಲ.

ಗಡಿಪ್ರದೇಶದ ಹಳ್ಳಿ-ಪಟ್ಟಣಗಳಿಗೆ ಮೂಲಭೂತ ಸೌಕರ್ಯಗಳನ್ನು ಆದ್ಯತೆ ಮೇಲೆ ಒದಗಿಸಬೇಕಾಗಿರುವುದು ಇಂದಿನ ತೀರ ಅಗತ್ಯಗಳಲ್ಲೊಂದು.

ನೀರು ಪೂರೈಕೆ, ವಿದ್ಯುತ್ ಪೂರೈಕೆ, ಒಳಚರಂಡಿಗಳನ್ನೆಲ್ಲ ಹೊಂದಿರುವ ಔದ್ಯೋಗಿಕ ವಸಾಹತುಗಳನ್ನು ಗಡಿಭಾಗದಲ್ಲಿ ನಿರ್ಮಿಸಿ ಕರ ರಿಯಾಯಿತಿ, ವಿದ್ಯುತ್ ಪೂರೈಕೆಯಲ್ಲಿ ರಿಯಾಯಿತಿ ಮುಂತಾದ ಪ್ರೋತ್ಸಾಹಕ ಕ್ರಮಗಳಿಂದ ಇಲ್ಲಿ ಉದ್ಯೋಗಾವಕಾಶಗಳನ್ನು ಹೆಚ್ಚಿಸಬಹುದು. ಐದೂ ಗಡಿಗಳಲ್ಲಿ ಒಂದೆರಡು ಬೃಹತ್ ಪ್ರಮಾಣದ ಉದ್ದಿಮೆಗಳನ್ನು ಸರಕಾರಿ ಮಾಲಿಕತ್ವದಲ್ಲೆ ಸ್ಥಾಪಿಸುವುದೂ ಕಷ್ಟದ ಕೆಲಸವಲ್ಲ. ಇಂಥ ಕೈಗಾರಿಕಾ ವಲಯದ ಅಭಿವೃದ್ಧಿಯೊಂದೇ ಅನೇಕ ಸಮಸ್ಯೆಗಳಿಗೆ ಸಮಾಧಾನ ನೀಡಬಲ್ಲದು.

ಹೊಸ ಹೊಸ ವಿದ್ಯುತ್ ಸ್ಥಾವರಗಳ ನಿರ್ಮಾಣ, ಎಲ್.ಪಿ.ಜಿ. ಗ್ಯಾಸ್‌ನಂಥ ಇಂಧನದಿಂದ ವಿದ್ಯುತ್ ತಯಾರಿಕೆ, ನ್ಯಾಷನಲ್ ಗ್ರಿಡ್‌ನಿಂದ ಹೆಚ್ಚಿನ ವಿದ್ಯುತ್ ಪಡೆಯಲು ಒತ್ತಡ ತಂತ್ರಗಳು ಇವುಗಳ ಜತೆಗೆ ಗಡಿಭಾಗದಲ್ಲಿ ಲೋಡ್ ಶೆಡ್ಡಿಂಗ್‌ನಿಂದ ಕೊಂಚ ರಿಯಾಯಿತಿ ಉತ್ತಮಫಲ ನೀಡಬಲ್ಲವು.

ಕರಾಕರಣೆಯಲ್ಲಿಯ ವ್ಯತ್ಯಾಸವನ್ನು ತಕ್ಷಣಕ್ಕೆ ಹೊಡೆದುಹಾಕಿದರೆ ಮಾತ್ರ ಇಲ್ಲಿಯ ಕೃಷಿಮಾರುಕಟ್ಟೆಗಳಿಗೆ ಭವಿಷ್ಯವಿದೆ.

ಕನ್ನಡದ ಶಾಲೆಗಳಿಗೆ ಹೆಚ್ಚಿನ ಪ್ರಾಧಾನ್ಯತೆ, ಉತ್ತಮ ಗುಣಮಟ್ಟ ಕಾಯ್ದುಕೊಂಡು ಹೋಗಿರುವ ಖಾಸಗಿ ಕನ್ನಡ ಶಾಲೆಗಳಿಗೆ ಆಂಶಿಕ ಅನುದಾನ ಮುಂತಾದವು ಇಲ್ಲಿ ಕನ್ನಡವನ್ನು ಗಟ್ಟಿಗೊಳಿಸಬಲ್ಲವು.

ಒಟ್ಟಿನಲ್ಲಿ ಇಲ್ಲಿಯ ಕನ್ನಡಿಗರಿಗೆ ಒತ್ತಾಸೆಯಾಗಿ ಈ ಸರಕಾರ ನಿಲ್ಲುತ್ತದೆ ಎಂಬ ಭರವಸೆ ಮೂಡುವಂತೆ ವರ್ತಿಸಬೇಕಾಗಿರುವುದು ಇಂದಿನ ಅಗತ್ಯ. ಇಲ್ಲವಾದರೆ ಇಂದು ಸಾಂಸ್ಕೃತಿಕ ಗಡಿಗಳು ಶಿಥಿಲವಾಗಿವೆ. ಮುಂದೆ ರಾಜಕೀಯ ಗಡಿಗಳು ಕುಸಿಯಬಹುದು.

*(ಬೆಂಗಳೂರಿನಲ್ಲಿ ಜರುಗಿದ ರಾಜ್ಯಮಟ್ಟದ ಕನ್ನಡ ಬಳಗದ ಸಮಾರಂಭದಲ್ಲಿ ಮಂಡಿಸಿದ ಉಪನ್ಯಾಸ.)*

**ಡಾ॥ ಅನಿಲ ಕಮತಿ**
ಯಕ್ಸಂಬಾ - ೫೯೧೨೪, ಬೆಳಗಾವಿ ಜಿಲ್ಲೆ



ಬಟ್ಟಲೊಳು ಬೆಳದಿಂಗಳ ಹಿಡಿಯಬಹುದು ಗೆಳತಿ
ನಿನ್ನ ನೆಟ್ಟನೆ ನೋಟದ ವೇಗ ಹಿಡಿಯಬಹುದೇ ?

ಗೆಳತಿ ನಿನ್ನ ಕಲ್ಪನೆಯಲ್ಲೊಂದು ಮೈಲಿಗಲ್ಲೇ ಇಲ್ಲ
ಆದರೂ ಹೆಜ್ಜೆಹಾಕಿಯೇ ಗುರುತಿಸಬಲ್ಲೆನು ನಾನು.

ನೀನು ಪಯಣಿಸುವ ದೋಣಿಯ ತುಂಬಾ ಸುಖವಿರಬಹುದು
ಆದರೆ ಹುಟ್ಟು ಹಾಕುವ ನಿನ್ನ ಕೈಕೆಳಗೆ ನನ್ನ ದುಃಖದ ಅಲೆಗಳಿವೆ.

ನನ್ನ ಆಸೆಗಳೆಲ್ಲಾ ಶಿಲುಬೆಗೇರಿದರೂ ಸರಿಯೇ
ಏಸುವಿನಂತೆ ನಿನ್ನನ್ನು ಕ್ಷಮಿಸಬೇಕೆಂಬುದನ್ನು ಇನ್ನೂ ನಿರ್ಧರಿಸಿಲ್ಲ.

ಚರಿತ್ರೆ ವೈಭವವಾಗಿದ್ದರೂ ಅಳಿದು ಉಳಿದದ್ದು ಅವಶೇಷಗಳೇ–
ನಿನ್ನ ಚರಿತ್ರೆಯಲ್ಲಿ ನನ್ನ ಅವಶೇಷಕ್ಕಾದರೂ ಒಂದಷ್ಟು ಜಾಗವಿರಲಿ.

ನೀನು ನರ್ತಕಿಯಂತೆ ನಲಿದು ಕುಪ್ಪಳಿಸಬಹುದು ಗೆಳತಿ-
ಕಾಲ್ಗೆಜ್ಜೆಯ ಒಂಟಿದನಿಯಾಗಿಯಾದರೂ ರೋದಿಸುತ್ತೇನೆ.

ಪ್ರೀತಿ, ಪ್ರೇಮವನ್ನು ವಾಣಿಜ್ಯೀಕರಿಸುವ ನಿನ್ನ ಸಂತೆಯಲ್ಲಿ
ನಾನೆಂದೂ ಸರಕಾಗಲಾರೆ, ತಕ್ಕಡಿ ಹಿಡಿಯಲಾರೆ.

ನಿನ್ನಿಂದ ನನಗೆ ಸಾಕಷ್ಟು ವರಗಳು ಸಿದ್ಧಿಯಾಗಿವೆ. ಆದರೂ
ಎಂದೂ ಅಹಲ್ಯೆಯನ್ನಾಗಿ ಮಾಡಲಾರೆ.

ಡಾ॥ ಜಾಜಿ ದೇವೇಂದ್ರಪ್ಪ, ಪಾಂಡುರಂಗ ಕಾಲನಿ, ಹೊಸಪೇಟೆ - ೫೮೩೨೦೧

# ಕೋಲಾರದ ಚಿನ್ನದ ಗಣಿಗಳು: ಒಂದು ಚಾರಿತ್ರಿಕ ಹಿನ್ನೋಟ

**ಕರ್ನಾಟಕಕ್ಕೆ ಚಿನ್ನದ ನಾಡು ಎಂಬ ಹೆಸರು ಬರಲು ಕಾರಣವಾದ ಕೋಲಾರ ಚಿನ್ನದ ಗಣಿಗಳು ಈಗ ಮುಚ್ಚಿಹೋಗಿವೆ. ಭೂಗರ್ಭದಿಂದ ಚಿನ್ನ ತೆಗೆಯುತ್ತಿದ್ದ ಕಾರ್ಮಿಕರು, ಅವರ ಕುಟುಂಬಗಳು ಬದುಕು ಅರಸುತ್ತ ಚದುರಿಹೋಗುತ್ತಿದ್ದಾರೆ. ಮುಚ್ಚಿಹೋಗಿರುವ ಚಿನ್ನದ ಗಣಿಗಳು ಈಗ ಹಳೆಯ ನೆನಪು.**

**ಎಂ. ವೆಂಕಟಸ್ವಾಮಿ**

ಇಂದಿನ ಕೋಲಾರ ಪಟ್ಟಣವನ್ನು ಒಂದು ಕಾಲದಲ್ಲಿ ಕೋಲಾಹಲ, ಕುವಲಾಲ ಮತ್ತು ಕೊಳಲ ಎಂಬ ಹೆಸರುಗಳಿಂದ ಕರೆಯುತ್ತಿದ್ದರೆಂದು ತಿಳಿದುಬರುತ್ತದೆ. 'ಕೋಲಾರ' ಹೆಸರಿನ ಬಗ್ಗೆ ಹಲವು ರೀತಿಯ ಕಥೆಗಳಿವೆ. ಕಾರ್ತವೀರ್ಯಾರ್ಜುನನ ಸೈನ್ಯವನ್ನು ಪರುಶರಾಮ ಛಿದ್ರ ಛಿದ್ರ ಮಾಡುತ್ತಿದ್ದಾಗ ಅವರ ಕೋಲಾಹಲ ಬೆಟ್ಟಗುಡ್ಡಗಳಿಗೆ ಅಪ್ಪಳಿಸಿ ಈ ಹೆಸರು ಬಂದಿದೆ ಎನ್ನುತ್ತಾರೆ.

ಕೋಲಾರ ಪಟ್ಟಣ ಮತ್ತು ಸುತ್ತಮುತ್ತಲಿನ ಪ್ರದೇಶವು ಗಂಗರು, ಹೊಯ್ಸಳರು, ಚೋಳರು, ನಂತರದಲ್ಲಿ ಹೈದರಾಲಿ, ಟಿಪ್ಪು ಮತ್ತು ಬ್ರಿಟಿಷರ ಆಳ್ವಿಕೆಗೂ ಒಳಪಟ್ಟಿತ್ತೆಂಬುದಕ್ಕೆ ಸಾಕಷ್ಟು ಸಾಕ್ಷ್ಯಾಧಾರಗಳಿವೆ.

ಕರ್ನಾಟಕ ರಾಜಧಾನಿ ಬೆಂಗಳೂರಿನಿಂದ ೭೦ ಕಿ.ಮೀ. ದೂರ ಸಾಗಿದರೆ ಇಂದಿನ ಕೋಲಾರ ಜಿಲ್ಲಾ ಕೇಂದ್ರ ಮತ್ತು ಕೋಲಾರ ಪಟ್ಟಣ ಇದೆ. ಇಲ್ಲಿಂದ ದಕ್ಷಿಣಕ್ಕೆ ೩೦ ಕಿ.ಮೀ. ದೂರ ಸಾಗಿದರೆ ಕೋಲಾರ ಚಿನ್ನದ ಗಣಿ (ಕೋಚಿಗ) ಪ್ರದೇಶಗಳು ಇವೆ. ಯುರೋಪಿಯನ್ನರು ಚಿನ್ನವನ್ನು ಹುಡುಕಿಕೊಂಡು ಈ ಪ್ರದೇಶಕ್ಕೆ ಬಂದ ಮೇಲೆಯೇ ಕೋಲಾರ್ ಗೋಲ್ಡ್ ಫೀಲ್ಡ್ಸ್ (ಕೆಜಿಎಫ್) ಎಂಬ ಹೆಸರು ಬಂದಿತು. ತೀರ ಇತ್ತೀಚೆಗೆ ಅರವತ್ತರ ದಶಕದಲ್ಲಿ ಈ ಪ್ರದೇಶದಲ್ಲಿ ಬಿಇಎಮ್‌ಎಲ್ ಕಾರ್ಖಾನೆ ಸ್ಥಾಪನೆಯಾಗಿ ಕನ್ನಡಿಗರ ಸಂಖ್ಯೆ ಹೆಚ್ಚಾದ ಮೇಲೆ ಕೋಚಿಗ ಎಂದು ಕರೆಯಲಾಯಿತು.

ಕ್ರಿ.ಶ. ೧೮೮೦ರ ನಂತರ ಚಿನ್ನದ ಗಣಿ ಉದ್ದಿಮೆ ಬೆಳೆಯುತ್ತ ಹೋದಂತೆ ಕೋಚಿಗ ಪ್ರದೇಶದಲ್ಲಿ ಇಂದಿನ ರಾಬರ್ಟ್‌ಸನ್ ಪೇಟೆ, ಆ್ಯಂಡ್ರಸನ್ ಪೇಟೆ ಮತ್ತು ಉರಿಗಾಂ ಬಡಾವಣೆಗಳು ಬೆಳೆಯುತ್ತಾ ಹೋದವು. ೧೩ನೇ ಶತಮಾನದ ಮಧ್ಯದಲ್ಲಿ ಇಂದಿನ ಉರಿಗಾಂ ಇರುವ ಸ್ಥಳದಲ್ಲಿ ಹೊಯ್ಸಳ ರಾಜ ರಾಮನಾಥನು ತಮಿಳಿನಲ್ಲಿ ಕೆತ್ತಿಸಿರುವ ಒಂದು ಶಿಲಾಶಾಸನದಲ್ಲಿ ಈ ಪ್ರದೇಶವನ್ನು 'ಉರಿಗಾಂ' ಎಂದು ಕರೆಯಲಾಗಿತ್ತು ಎಂದು ತಿಳಿದುಬರುತ್ತದೆ. ಕ್ರಿ.ಶ. ೧೮೭೫ರಲ್ಲಿ ಅದೇ ಸ್ಥಳದಲ್ಲಿ ಉರಿಗಾಂ ಗಣಿಗಳನ್ನು ತೋಡಲಾಯಿತು.

ಕೋಚಿಗ, ಆಂಧ್ರಪ್ರದೇಶ ಮತ್ತು ತಮಿಳುನಾಡಿನ ಗಡಿ ಪ್ರದೇಶದಲ್ಲಿದ್ದು, ಚಿನ್ನದ ಗಣಿಗಳು ಚಲಾವಣೆಯಲ್ಲಿದ್ದ ಕಾಲದಲ್ಲಿ ಈ ನಗರ 'ಲಿಟ್ಲ್ ಇಂಗ್ಲೆಂಡ್' ಎಂದೇ ಪ್ರಪಂಚ ಪ್ರಖ್ಯಾತಿ ಪಡೆದಿತ್ತು. ಈ ನಗರದ ಸುತ್ತಮುತ್ತಲ ಹಳ್ಳಿಗಳಲ್ಲಿ ತೆಲುಗು ಭಾಷೆ ಮಾತನಾಡುವವರೆ ಇಂದಿಗೂ ಹೆಚ್ಚಾಗಿದ್ದು ಗಣಿಗಳು ಪ್ರಾರಂಭವಾದಾಗ ಸ್ಥಳೀಯರು ಗಣಿಗಳಲ್ಲಿ ಕೆಲಸ ಮಾಡಲು ಹಿಂದು ಮುಂದು ನೋಡಿದಾಗ ತಮಿಳುನಾಡಿನ ಉತ್ತರ ಆರ್ಕಾಟ್, ದಕ್ಷಿಣ ಆರ್ಕಾಟ್, ಧರ್ಮಪುರಿ, ಕೃಷ್ಣಗಿರಿ, ಮಧುರೆ ಮತ್ತಿತರ ಜಿಲ್ಲೆಗಳಿಂದ ವಲಸೆ ಬಂದ ಅಸಂಖ್ಯ ತಮಿಳರು ಗಣಿಗಳಲ್ಲಿ ಕೆಲಸಕ್ಕೆ ಸೇರಿಕೊಂಡರು.

ಈ ಪ್ರದೇಶದಲ್ಲಿ ೬೦ನೇ ದಶಕದಲ್ಲಿ ಬಿಇಎಮ್‌ಎಲ್ ಕಾರ್ಖಾನೆ ಪ್ರಾರಂಭವಾದಾಗ ಮೊದಲಿಗೆ ಸ್ಥಳೀಯ ತಮಿಳು ಯುವಕರಿಗೆ ಭಾಗ್ಯದ ಬಾಗಿಲು ತೆರೆಯಿತು. ಮುಂದಿನ ದಿನಗಳಲ್ಲಿ ಮಲಯಾಳಿಗಳು ಮತ್ತು ಕನ್ನಡಿಗರ ಸಂಖ್ಯೆಯೂ ಹೆಚ್ಚಾಗಿ ಕಾರ್ಖಾನೆಯ ಪಕ್ಕದಲ್ಲಿಯೆ ಬಿಇಎಮ್‌ಎಲ್ ನಗರ ಸ್ಥಾಪನೆಗೊಂಡಿತು. ಆದರೆ ಕೋಚಿಗ ಕಾರ್ಮಿಕರು ಮಾತ್ರ ಗಣಿಗಳು ಮುಚ್ಚುವವರೆಗೂ ಕ್ಯಾಂಪ್‌ಗಳಲ್ಲಿಯೆ ವಾಸಿಸುತ್ತಿದ್ದರು. ಕ್ಯಾಂಪ್‌ಗಳಲ್ಲಿ ನೂರಕ್ಕೆ ಶೇಕಡ ೯೦ ಮಂದಿ ತಮಿಳರಿದ್ದು, ಉಳಿದ ಶೇಕಡ ೧೦ ಮಂದಿಯಲ್ಲಿ ಆಂಧ್ರದ ಮಾದಿಗ ಜನಾಂಗದವರು, ಮುಸ್ಲಿಮರು ಮತ್ತು ತೀರ ಬೆರಳೆಣಿಕೆಯಲ್ಲಿ ಪಂಜಾಬಿಗಳಿದ್ದರು.

ಕೋಚಿ ಗಣಿಗಳು ಪ್ರಾರಂಭವಾದ ೯೦ ವರ್ಷಗಳ ನಂತರ ಗಣಿ ಕಾರ್ಮಿಕರು ವಾಸಿಸುತ್ತಿದ್ದ ಪ್ರದೇಶಗಳ ಬಗ್ಗೆ ಗಮನ ಕೊಡಲಾಯಿತು ಎಂಬುದಾಗಿ ತಿಳಿದುಬರುತ್ತದೆ. ಮುಖ್ಯವಾಗಿ ಕಾರ್ಮಿಕರು ವಾಸಿಸುತ್ತಿದ್ದ ಬಿದಿರುದಟ್ಟಿ ಗುಡಿಸಲುಗಳು ಮತ್ತು ಜಿಂಕ್‌ಷೀಟು ಮನೆಗಳಿದ್ದ ಪ್ರದೇಶಗಳನ್ನು ಕೊಂಪೆ ಅಥವಾ ಕ್ಯಾಂಪ್ ಎಂದೇ ಕರೆಯುತ್ತಿದ್ದರು. ತೀರ ಇತ್ತೀಚೆಗೆ ಕ್ರಿ.ಶ. ೧೯೭೩ರ ನಂತರ ಈ ಕ್ಯಾಂಪ್ ಮನೆಗಳಿಗೆ ಕೆಲವು ಸಾರ್ವಜನಿಕ ಸವಲತ್ತುಗಳನ್ನು ನೀಡಲಾಯಿತು. ಅದರಲ್ಲೂ ಸಾರ್ವಜನಿಕ ಕೊಳಾಯಿಗಳನ್ನು ಬಿಟ್ಟರೆ ಈ ಕೊಂಪೆಗಳಿಗೆ ವಿದ್ಯುತ್‌ನ್ನು ನೀಡಿದ್ದು ಚಿನ್ನದ ಗಣಿಗಳು ಶತವರ್ಷಗಳನ್ನು ಆಚರಿಸಿಕೊಂಡ ಮೇಲೆಯೆ ಎಂಬುದು ತೀರ ಖೇದದ ವಿಷಯವಾಗಿದೆ.

ಗಣಿಗಳು ಮುಚ್ಚಿದ ಮೇಲೆ ತಮಿಳರಿದ್ದ ಕ್ಯಾಂಪುಗಳು ಪೂರ್ಣ ಛಿದ್ರವಾಗಿಹೋದರೆ ಆ್ಯಂಡ್ರಸನ್‌ಪೇಟೆ ಶಿಥಿಲಗೊಂಡ ಹಳ್ಳಿಕೊಂಪೆಯಂತೆ ಬಣಗುಡುತ್ತಿದೆ. ರಾಬರ್ಟ್‌ಸನ್ ಪೇಟೆ ಇಂದಿಗೂ ಕರ್ನಾಟಕದ ಒಂದು



ಒಳ್ಳೆಯ ನಗರವಾಗಿ ಉಳಿದುಕೊಂಡಿದೆ. ಇಲ್ಲಿನ ಮುನಿಸಿಪಲ್ ಮಾರ್ಕೆಟ್ ಕರ್ನಾಟಕದಲ್ಲಿಯೆ ಇಂದಿಗೂ ಒಂದು ಸುಸಜ್ಜಿತ ಮಾರ್ಕೆಟ್ ಎನ್ನಬಹುದು. ಕೋಲಾರ ಕ್ರಿ.ಶ. ೧೯೬೧ರಲ್ಲಿಯೆ ಕರ್ನಾಟಕದ ನಾಲ್ಕನೇ ದೊಡ್ಡ ನಗರವಾಗಿತ್ತು.

ಭೂಮಿಯ ಮೇಲೆ ಮೊದಲಿಗೆ ಖನಿಜಗಳನ್ನು ಹುಡುಕಲು ಪ್ರಾರಂಭಿಸಿದಾಗ ಮನುಷ್ಯನ ಕಣ್ಣುಗಳಿಗೆ ಮೊದಲು ಬಿದ್ದ ಪ್ರದೇಶಗಳಲ್ಲಿ ಕೋಲಾರ ಸೇರಿದೆ. ಸುಮಾರು ೪೦೦೦ ವರ್ಷಗಳ ಹಿಂದೆ ಈಜಿಪ್ಟ್ ಮತ್ತು ಮೆಡಿಟರೇನಿಯನ್ ಪ್ರದೇಶಗಳಿಂದ ಹೊರಟ ಜನರು ಪ್ರಪಂಚದ ಮೂಲೆಮೂಲೆಗಳಲ್ಲಿ ಖನಿಜಗಳನ್ನು ಹುಡುಕಲು ಪ್ರಾರಂಭಿಸಿದರು. ಅವರು ನಡೆದಾಡಿದ ಪ್ರದೇಶಗಳಲ್ಲೆಲ್ಲ 'ಮೆಗಾಲಿಥ್ಸ್' ಎಂಬ ಪ್ರಾಚೀನ ಶಿಲೆಗಳನ್ನು ಸ್ಥಾಪಿಸಲಾಗಿದೆ. ಈ ಶಿಲೆಗಳು ಕೋಲಾರ ಪ್ರದೇಶದಲ್ಲೂ ಕಂಡುಬಂದಿವೆ.

ನಿಜಾಮರ ಕಾಲದ ಅಧಿಕಾರಿ ಮುನ್ನ್ ಹೇಳುವಹಾಗೆ ಇವರೆಲ್ಲ ದಕ್ಷಿಣ ಭಾರತದವರೆ. ಭಾರತದಾದ್ಯಂತ ಅಶೋಕ ಚಕ್ರವರ್ತಿ ಸ್ಥಾಪಿಸಿದ ೨೩ ಶಿಲಾಶಾಸನಗಳಿದ್ದು ಅವುಗಳಲ್ಲಿ ೧೧ ಶಾಸನಗಳು ಕರ್ನಾಟಕ ಮತ್ತು ಆಂಧ್ರದಲ್ಲಿವೆ. ಚಿನ್ನದ ಬಳಕೆಯನ್ನು ಕುರಿತಂತೆ ವೀಲರ್ ಹೊಸ ದೃಷ್ಟಿಕೋನವನ್ನೇ ತಳೆದನು. ಚಿನ್ನದ ಗಣಿಯ ಪ್ರಾಚೀನತೆಯನ್ನು ಪ್ರಾಚ್ಯ ಶೋಧಕರು ಸಿಂಧೂ ನದಿ ನಾಗರಿಕತೆಯವರೆಗೂ ವಿಸ್ತರಿಸುತ್ತಾರೆ. ಸಿಂಧೂ ನಾಗರಿಕತೆ ಬಳಸಿದ ಬಹುಪಾಲು ಚಿನ್ನ ತಿಳಿವರ್ಣದಿಂದ ಕೂಡಿದ್ದು, ಹೆಚ್ಚು ಬೆಳ್ಳಿಯ ಅಂಶವನ್ನು ಹೊಂದಿದೆ. ಈ ಚಿನ್ನ ಕೋಲಾರ ಮತ್ತು ಹಟ್ಟಿ ಚಿನ್ನಕ್ಕೆ ತಾಳೆಯಾಗುತ್ತದೆ ಎನ್ನುವುದೇ ಇಲ್ಲಿನ ವಿಶೇಷ. ಈ ಎರಡು ಚಿನ್ನದ ಗಣಿಗಳನ್ನು ಬಿಟ್ಟರೆ ಆ ಕಾಲಕ್ಕೆ ಭಾರತದಲ್ಲಿ ಯಾವ ಚಿನ್ನದ ಗಣಿಗಳೂ ಕಂಡುಬರುವುದಿಲ್ಲ. ಮೆಕ್ಕಲು ಮಣ್ಣಿನಲ್ಲಿ ತೆಗೆದ ಚಿನ್ನ ಕೋಲಾರ ಮತ್ತು ಹಟ್ಟಿ ಚಿನ್ನಕ್ಕಿಂತ ಭಿನ್ನವಾದುದು. ಪ್ರೊ॥ ಆಲ್ಚಿನ್ ಮತ್ತು ಎಸ್. ಆರ್. ರಾವ್ ಅವರು ಇದೇ ವಿಷಯವನ್ನು ಎತ್ತಿಹಿಡಿಯುತ್ತಾರೆ.

ನೌಕೆಯೊಂದನ್ನು ನಿರ್ಮಿಸಲು ದೊರೆ ಸಾಲಮನ್ ಫಿನಿಷಿಯನರಿಗೆ ಅಪ್ಪಣೆ ಮಾಡಿದ. ನೌಕೆಯನ್ನು ನಿರ್ಮಿಸಿದ ಫಿನಿಷಿಯನರು ಕ್ರಿ.ಶ. ೯೪೫ರಲ್ಲಿ ಪ್ರಯೋಗಾರ್ಥ ಆ ನೌಕೆಯಲ್ಲಿ ಓಫಿರ್ ನಾಡಿಗೆ ತಲುಪಿದರು. ಅವರು ನೌಕೆಯೊಂದಿಗೆ ಹಿಂದಿರುಗಿದಾಗ ಹೇರಳ ಚಿನ್ನ, ಆನೆ ದಂತ, ಕಪಿಗಳು ಮತ್ತು ನವಿಲುಗಳನ್ನು ತಂದರು ಎಂದು ಬೈಬಲ್‌ನಲ್ಲಿ ಉಲ್ಲೇಖವಿದೆ. ಹಲವು ಇತಿಹಾಸಕಾರರು ದಕ್ಷಿಣ ಭಾರತಕ್ಕೆ ಸಂಬಂಧಿಸಿದ ವಿವರಣೆ ಇದೆಂದು ವಾದಿಸುತ್ತಾರೆ. ಮ್ಯಾಕ್ಸ್ ಮುಲ್ಲರ್ ಕೂಡ ಇದನ್ನೇ ಎತ್ತಿಹಿಡಿಯುತ್ತಾನೆ.

ಪುರಾತನ ವಸ್ತುಶಾಸ್ತ್ರ ಸಂಶೋಧನೆಗಳಿಂದ ಕೋಲಾರ ಪ್ರದೇಶದಲ್ಲಿ ೪೦೦೦ ವರ್ಷಗಳ ಹಿಂದಿನಿಂದಲೂ ಗಣಿ ಚಟುವಟಿಕೆಗಳು ನಡೆದಿರುವುದಾಗಿ ತಿಳಿಯುತ್ತದೆ. ಕೆಲವು ವಸ್ತುಗಳನ್ನು ಸಿ-೧೪ ವಿಶ್ಲೇಷಣೆಗೆ ಒಳಪಡಿಸಿದಾಗ ಅವು ಕ್ರಿ.ಶ. ೫ನೇ ಶತಮಾನದ ವಸ್ತುಗಳಾಗಿದ್ದವು. ಕೋಲಾರ ವ್ಯಾಪ್ತಿಯಲ್ಲಿರುವ ಚಿಗುರುಗುಂಟ ಹಳೆ ಗಣಿಗಳಲ್ಲಿ ದೊರಕಿದ ಮರದ ಚೂರುಗಳನ್ನು ಕಾರ್ಬನ್ ಡೇಟಿಂಗ್‌ಗೆ ಒಳಪಡಿಸಿದಾಗಲೂ ಅವು ಇಂದಿಗೆ ೨೬೦೦ ವರ್ಷಗಳ ಹಿಂದಿನ ಮರದ ಚೂರುಗಳಾಗಿದ್ದವು ಎಂದು ತಿಳಿದುಬಂದಿದೆ. ಇದೇ ವ್ಯಾಪ್ತಿಯ ಕೋರಮಂಡಲ, ಮೈಸೂರು ಗಣಿಗಳ ಒಳಗೆ ೨೦೦-೩೦೦ ಅಡಿಗಳ ಕೆಳಗೆ ಸುರಂಗಗಳಲ್ಲಿ ಮರದ ದಿಮ್ಮಿಗಳು, ಕಬ್ಬಿಣ ಬಾಣಲಿ, ಕಲ್ಲಿನ ಫೀಟಗಳು, ಕಬ್ಬಿಣ ಕುಟಾಣಿಗಳು, ಕಲ್ಲಿನ ಗುಂಡುಗಳು, ಮಡಿಕೆಗಳು ಇತ್ಯಾದಿ ಪುರಾತನ ವಸ್ತುಗಳು ದೊರಕಿದ್ದವು. ಆಳದ ಸುರಂಗಗಳಲ್ಲಿ ಒಸರುತ್ತಿದ್ದ ನೀರನ್ನು ತೆಗೆಯಲು ಮಡಿಕೆಗಳನ್ನು ಉಪಯೋಗಿಸುತ್ತಿದ್ದರು.

ಮಧ್ಯಯುಗದಲ್ಲಿ ಅಂದರೆ ೧೬ನೇ ಶತಮಾನದಲ್ಲಿ ಕೃಷ್ಣದೇವರಾಯನ ಕಾಲದಲ್ಲಿ, ಅನಂತರ ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಕಾಲದಲ್ಲಿ ಚಿನ್ನಕ್ಕಾಗಿ ಅಗೆದಿರುವ ಸೂಚನೆಗಳು ಈ ಪ್ರದೇಶದಲ್ಲಿ ದೊರಕುತ್ತವೆ.

ಕೋಲಾರ ಪ್ರದೇಶದಲ್ಲಿ ಆಧುನಿಕ ಚಿನ್ನದ ಅನ್ವೇಷಣೆ ಕ್ರಿ.ಶ. ೧೮೦೨ರಿಂದ ಪ್ರಾರಂಭವಾಗುತ್ತದೆ. ಟಿಪ್ಪು ಸುಲ್ತಾನನ ಮರಣದ ನಂತರ ಈಸ್ಟ್ ಇಂಡಿಯಾ ಕಂಪನಿ ಲೆ। ಜಾನ್ ವಾರನ್‌ನನ್ನು ಮೈಸೂರಿನ ಪೂರ್ವ ಗಡಿಯ ಸಮೀಕ್ಷೆ ನಡೆಸಲು ಕೇಳಿಕೊಂಡಿತು. ಸಮೀಕ್ಷೆ ನಡೆಸುವಾಗ ಈ ಪ್ರದೇಶದಲ್ಲಿ ಚಿನ್ನ ದೊರಕುವ ವಿಷಯವನ್ನು ತಿಳಿದುಕೊಂಡ ವಾರೆನ್ ಈ ಪ್ರದೇಶವನ್ನು ಮೈಸೂರಿನ ಗಡಿಯ ಒಳಕ್ಕೆ ಸೇರಿಸಿಬಿಟ್ಟ. ಒಂದು ವೇಳೆ ಅದೇ ಗಡಿಯನ್ನು ಮದ್ರಾಸ್ ಪ್ರೆಸಿಡೆನ್ಸಿ ಒಳಕ್ಕೆ ಹಾಕಿಬಿಟ್ಟಿದ್ದರೆ ಕೋಲಾರ ಪ್ರದೇಶ ಮದ್ರಾಸ್ ಪ್ರಾಂತ್ಯಕ್ಕೆ ಸೇರಿ ಚಿನ್ನದ ಬೀಡು ಎನ್ನುವ ಹೆಸರೆ ಕರ್ನಾಟಕಕ್ಕೆ ಇರುತ್ತಿರಲಿಲ್ಲ.

ಮುಂದಿನ ದಿನಗಳಲ್ಲಿ ಕೋಲಾರ ಪ್ರದೇಶದ ಕೆಲವು ಹಳೆ ಗಣಿಗಳನ್ನು ತೋಡಿದ ವಾರನ್ ೩೦ ಪಗೋಡ ಚಿನ್ನವನ್ನು ಸಂಗ್ರಹಿಸಿದ. ಈ ವಿಷಯ ಬೆಂಗಳೂರಿನಲ್ಲಿ ನೆಲೆಸಿದ್ದ ಐರಿಷ್ ಸೈನಿಕ ಮೈಕಲ್ ಲ್ಯಾವೆಲ್ ಕಿವಿಗೆ ಬಿದ್ದಿತು. ನ್ಯೂಜಿಲೆಂಡಿನ ಅಂತರ್‌ಯುದ್ಧದಲ್ಲಿ ಪಾಲ್ಗೊಂಡಿದ್ದ ಈತ ಚಿನ್ನದ ಶೋಧನೆಯಲ್ಲೂ ಪರಿಣತಿ ಪಡೆದಿದ್ದು, ಕೋಲಾರ ಪ್ರದೇಶದ ಕಡೆಗೆ ದೌಡಾಯಿಸಿದ. ಕೋಲಾರ ಪ್ರದೇಶದಲ್ಲಿ ಸುತ್ತಾಡಿದ ಅವನು ಆಗಿನ ಮೈಸೂರಿನ ಸರಕಾರಕ್ಕೆ ಪರವಾನಗಿ ಪಡೆಯಲು ಅರ್ಜಿ ಸಲ್ಲಿಸಿದ. ವಿಚಿತ್ರವೆಂದರೆ ಚಿನ್ನದ ವಿಷಯ ಮರೆಮಾಚಿ ಕಲ್ಲಿದ್ದಲಿಗಾಗಿ ಬೇಡಿಕೆ ಇಟ್ಟ!

ಲ್ಯಾವೆಲ್ ಗುಟ್ಟು ತಿಳಿದ ಸರಕಾರ ಕಲ್ಲಿದ್ದಲು ಬಿಟ್ಟು ಬೇರೆ ಯಾವುದೇ ಖನಿಜಗಳನ್ನು ತೆಗೆಯಬಾರದೆಂದು ಶರತ್ತು ಹಾಕಿತು. ದೀರ್ಘ ಪತ್ರ ವ್ಯವಹಾರದ ನಂತರ ಕ್ರಿ.ಶ. ೧೮೭೫ರಲ್ಲಿ ಚಿನ್ನ ತೆಗೆಯಲು ಆತನಿಗೆ ಸರಕಾರ ಪರವಾನಗಿ ನೀಡಿತು. ಎರಡು ಚದರ ಮೈಲಿ ಮೀರದಂತೆ ಒಮ್ಮೆಗೆ ಹತ್ತು ತುಂಡುಗಳ ಜಮೀನನ್ನು ಅವನು ಮೂರು ವರ್ಷಗಳಿಗಾಗಿ ಗುತ್ತಿಗೆಗೆ ಪಡೆದಿದ್ದ. ಅವನು ತನ್ನಲ್ಲಿದ್ದ ಹಣವನ್ನೆಲ್ಲ ಕಳೆದುಕೊಂಡ ಮೇಲೆ ಕ್ರಿ.ಶ. ೧೮೭೬ರಲ್ಲಿ ಗಣಿ ಹಕ್ಕನ್ನು ಮದ್ರಾಸಿನ ಒಂದು ಕಂಪನಿಗೆ ನೀಡಿ ಕೈ ತೊಳೆದುಕೊಂಡ.

ಕ್ರಿ.ಶ. ೧೮೮೦ರಲ್ಲಿ ಮೈಸೂರು ಗಣಿ ಕಂಪನಿ ೧,೩೫,೦೦೦ ಪೌಂಡ್ ಮತ್ತು ನಂದಿದುರ್ಗ ೧,೦೦,೦೦೦ ಪೌಂಡ್ ಬಂಡವಾಳದೊಂದಿಗೆ ತಲೆಯೆತ್ತಿದವು. ಇವುಗಳ ಕಾರ್ಯಾಚರಣೆ ನಡೆಯುತ್ತಿದ್ದುದು ಇಂಗ್ಲೆಂಡಿನಲ್ಲಿ. ಅದೇ ಕಾಲಕ್ಕೆ ಇನ್ನಿತರ ೧೧ ಕಂಪನಿಗಳು ಈ ಪ್ರದೇಶದಲ್ಲಿ ಗಣಿ ಮಾಡಲು ಗುತ್ತಿಗೆ ಪಡೆದವು. ಎಲ್ಲಾ ಕಂಪನಿಗಳು ಸೇರಿ ಒಟ್ಟು ೧೨,೦೦,೦೦೦ ಪೌಂಡ್ ಬಂಡವಾಳವನ್ನು ತೊಡಗಿಸಿದವು. ಕ್ರಿ.ಶ. ೧೮೮೦ರ ಡಿಸೆಂಬರ್ ತಿಂಗಳಲ್ಲಿ ಉರಿಗಾಂ ಕಂಪನಿ ಇಪ್ಪತ್ತು ಟನ್ನು ಕಲ್ಲು ಅರೆದು, ನಲವತ್ತು ಔನ್ಸ್ ಚಿನ್ನವನ್ನು ಪಡೆದು ಕರ್ನಾಟಕದಲ್ಲಿ ಚಿನ್ನದ ಉದ್ಯಮಕ್ಕೆ ನಾಂದಿ ಹಾಡಿತು.

ಕ್ರಿ.ಶ. ೧೮೮೦ರಲ್ಲಿ ಪ್ರಾರಂಭವಾದ ಆಧುನಿಕ ಕೋಲಾರ ೧೨೧ ವರ್ಷಗಳು ನಿರಂತರವಾಗಿ ನಡೆದು ಕ್ರಿ.ಶ. ೨೦೦೧ರಲ್ಲಿ ಪೂರ್ಣವಾಗಿ ಸ್ಥಗಿತಗೊಂಡವು. ಸುರಂಗಗಳಿಂದ ಮೇಲಕ್ಕೆ ಬಂದ ಒಟ್ಟು ಅದುರು ೫೦ ಮಿಲಿಯ ಟನ್ನುಗಳಾದರೆ ಈ ಅದುರಿನಿಂದ ಸಂಸ್ಕರಿಸಿದ ಚಿನ್ನ ೮೦೦ ಟನ್ನುಗಳು. ಪ್ರಸ್ತುತ ಚಿನ್ನದ ಬೆಲೆ ೧ ಗ್ರಾಂಗೆ ೬೦೦ ರೂಪಾಯಿಗಳಾದರೆ ೧ ಕೆಜಿ ಚಿನ್ನಕ್ಕೆ ೬ ಲಕ್ಷ ರೂಪಾಯಿಗಳು. ಒಂದು ಟನ್ನು ಚಿನ್ನಕ್ಕೆ ೬೦ ಕೋಟಿ ರೂಪಾಯಿಗಳಾದರೆ ೮೦೦ ಟನ್ನು ಚಿನ್ನಕ್ಕೆ ೪,೮೦,೦೦೦,೦೦೦,೦೦೦ ಕೋಟಿ ರೂಪಾಯಿಗಳು. ಇಷ್ಟೊಂದು ಚಿನ್ನ ದೇಶದ ಅಭಿವೃದ್ಧಿಯಲ್ಲಿ ಎಷ್ಟು ದೊಡ್ಡ ಮಹತ್ವವನ್ನು ವಹಿಸಿರಬಹುದು ಎನ್ನುವುದು ಊಹಾತೀತ. ಇದರ ಜೊತೆಗೆ ಹಿಂದಿನ ಕಾಲದಲ್ಲಿ ತೆಗೆದಿರಬಹುದಾದ ಚಿನ್ನದ ಬಗ್ಗೆ ಯಾವುದೇ ನಿಖರವಾದ ಮಾಹಿತಿಗಳು ದೊರಕುವುದಿಲ್ಲ.

ಕೋಲಾರ ಪ್ರಾರಂಭವಾದ ಕೆಲವೇ ವರ್ಷಗಳಲ್ಲಿ ನೆಲಕಚ್ಚುವ ಪರಿಸ್ಥಿತಿ ಎದುರಾಯಿತು. ಕ್ರಿ.ಶ. ೧೮೮೩ರಲ್ಲಿ ಲಂಡನ್‌ನ ಕೆನಾಟ್ ಹೋಟೆಲ್‌ನಲ್ಲಿ ಜರುಗಿದ ಷೇರುದಾರರ ಸಭೆಯಲ್ಲಿ ಮೈಸೂರು ಚಿನ್ನದ ಗಣಿ ಕಂಪನಿಯನ್ನು ಮುಚ್ಚುವ ತೀರ್ಮಾನ ತೆಗೆದುಕೊಳ್ಳಲು ನಿರ್ಣಯವನ್ನು ಮಂಡಿಸುವ ಹಂತ ತಲುಪಿತ್ತು. ಆಗ ಉಳಿದಿದ್ದ ಬಂಡವಾಳ ಕೇವಲ ೧೩,೦೦೦ ಪೌಂಡ್‌ಗಳು. ಚಿನ್ನದ ಗಣಿಗಳ ಮುಖ್ಯಸ್ಥ ಜಾನ್ ಟೈಲರ್ ಎಲ್ಲಾ ಷೇರುದಾರರನ್ನು ಕಾಡಿ ಬೇಡಿ ಬಂಡವಾಳವನ್ನು ಉಳಿಸಿಕೊಂಡ. ಅನಂತರ ಕ್ಯಾ। ಪ್ಲೇಮರ್ ಎಂಬ ಗಣಿ ತಜ್ಞನನ್ನು ಕೋಲಾರ ಪ್ರದೇಶಕ್ಕೆ ಕರೆತರಲಾಯಿತು. ಆತ ಪುರಾತನ ಗಣಿಯೊಂದರ ಕೆಳಗೆ ಕೊರೆದಾಗ ಪುರಾತನ ಜನರು ಕೊರೆದುಬಿಟ್ಟಿದ್ದ ಸಿಲ್ಕು ಚಿನ್ನ ಸಿಕ್ಕಿ ಗಣಿಯ ಇತಿಹಾಸವೆ ಬದಲಾಗಿ ಹೋಯಿತು. ಕ್ರಿ.ಶ. ೧೮೮೫ರ ಹೊತ್ತಿಗೆ ೨೪ ಸಾವಿರ ಪೌಂಡ್ ಮೌಲ್ಯದ ೬,೦೦೦ ಔನ್ಸ್

## ವರುಣ ಭೇದ ನೀತಿ

ಒಂದೆ
ಮುಗಿಲಿಂದ ಸುರಿದ ಮಳೆಯಿಂದ-
ರವಷ್ಟು ಹೊಳೆ ಕೊಳಗಳಿಗೆ,
ಹರಿವಷ್ಟು ನದಿ-ಸರೋವರಗಳಿಗೆ,
ಸೊಕ್ಕಿ ಉಕ್ಕುವಷ್ಟು
ಮಹಾಸಾಗರಗಳ ಪಾಲಿಗೆ!



ಅಲಕ ತೀರ್ಥಹಳ್ಳಿ
ಅಲಕ, ನಂ. ೮೨, ತ್ಯಾಗರಾಜ ರಸ್ತೆ, ಸೀಬಿನಕೆರೆ ಅಂಚೆ, ತೀರ್ಥಹಳ್ಳಿ - ೫೭೭ ೪೩೨

(೧ ಔನ್ಸ್‌ಗೆ ೨೮.೩೪ ಗ್ರಾಂ) ಚಿನ್ನವನ್ನು ಈ ಗಣಿಗಳಿಂದ ಉತ್ಪಾದಿಸಲಾಯಿತು. ಕ್ರಿ.ಶ. ೧೯೦೨ರಲ್ಲಿ ಜಾನ್ ಟೈಲರ್ ನಿವೃತ್ತಿಯಾದಾಗ ಆತನಿಗೆ ೫೦ ಔನ್ಸ್ ತೂಕದ ಚಿನ್ನದ ಬಟ್ಟಲನ್ನು ನೆನಪಿನ ಕಾಣಿಕೆಯಾಗಿ ಸಂಸ್ಥೆಯಿಂದ ನೀಡಲಾಯಿತು.

ಕೋಚಿ ಗಣಿಗಳು ೧೨೧ ವರ್ಷಗಳ ಆಧುನಿಕ ಚರಿತ್ರೆಯನ್ನು ಹೊಂದಿವೆ. ಈ ಗಣಿಗಳಲ್ಲಿ ಚಾಂಪಿಯನ್ ಗಣಿಗಳು ಅತ್ಯಂತ ಆಳವಾದ ಗಣಿಗಳಾಗಿದ್ದು ೩,೨೦೦ ಮೀ. ಆಳ ಇಳಿದಿವೆ. ಕೋಚಿ ಗಣಿಗಳ ಎಲ್ಲಾ ಶಾಫ್ಟ್‌ಗಳನ್ನು ಒಟ್ಟುಗೂಡಿಸಿದಾಗ ೬೬ ಕಿ.ಮೀ. ಉದ್ದವಿದ್ದು, ಎಲ್ಲಾ ಸುರಂಗಗಳನ್ನು ಜೋಡಿಸಿದಾಗ ೬೬೬ ಕಿ.ಮೀ. ಉದ್ದವಾಗುತ್ತವೆ. ಸುರಂಗಗಳಿಂದ ಸುರಂಗಗಳಿಗೆ ಹೋಗುವ ಎಲ್ಲ ಒಳದಾರಿಗಳನ್ನು ಒಟ್ಟುಗೂಡಿಸಿದಾಗ ಅವುಗಳ ಉದ್ದ ೨೦೦ ಕಿ.ಮೀ.ಗಳಾಗುತ್ತವೆ. ಕೋಚಿಗ ಚರಿತ್ರೆಯಲ್ಲಿ ಸುಮಾರು ೭,೦೦೦ ಕಾರ್ಮಿಕರು ಅಸುನೀಗಿರುವುದಾಗಿ ತಿಳಿದುಬರುತ್ತದೆ. ಸುಮಾರು ೧೬,೦೦೦ ಕಾರ್ಮಿಕರು ಅಪಘಾತಗಳಲ್ಲಿ ತೀವ್ರವಾಗಿ ಗಾಯಗೊಂಡು ಅಂಗವಿಕಲರಾಗಿದ್ದಾರೆ.

ಕ್ರಿ.ಶ. ೧೯೩೧ ಮೇ ೨೪ರಂದು ನಂದಿದುರ್ಗ ಗಣಿಯಲ್ಲಿ ಒಂದು ದೊಡ್ಡ ಬೆಂಕಿಯ ಅಪಘಾತ ಸಂಭವಿಸಿ ಅದು ಒಂದು ತಿಂಗಳ ಕಾಲ ಉರಿಯುತ್ತಲೇ ಇತ್ತು. ಈ ಅನಾಹುತದಲ್ಲಿ ೫೨ ಕಾರ್ಮಿಕರು ಅಸು ನೀಗಿದರು. ಗಿಫರ್ಡ್ ಶಾಫ್ಟ್‌ನ ೬೪ನೇ ಲೆವಲ್‌ನಲ್ಲಿ ಕಾಣಿಸಿಕೊಂಡ ಬೆಂಕಿಯನ್ನು ಹತ್ತು ಗಂಟೆಗಳ ಒಳಗೆ ನಂದಿಸಿದರೂ ೯ ಕಾರ್ಮಿಕರು ಪ್ರಾಣ ಕಳೆದುಕೊಂಡರು. ಕ್ರಿ.ಶ. ೧೯೪೨ ಮೇ ತಿಂಗಳು ಅದೇ ಗಣಿಯಲ್ಲಿ ಕಾಣಿಸಿಕೊಂಡ ಬೆಂಕಿ ಅದೇ ವರ್ಷ ಡಿಸೆಂಬರ್ ತಿಂಗಳವರೆಗೂ ಉರಿಯುತ್ತಲೆ ಇತ್ತು.

ಕ್ರಿ.ಶ. ೧೮೯೮ರಲ್ಲಿ ಮೊದಲ ಶಿಲಾಸ್ಫೋಟ ಸಂಭವಿಸಿತ್ತು. ಶಿಲಾಸ್ಫೋಟಗಳು ರಿಕ್ಟರ್ ಮಾಪನದಲ್ಲಿ ೪.೫ರಿಂದ ೫ರಷ್ಟು ತೀವ್ರತೆಯಿಂದ ಕೂಡಿರುತಿದ್ದವು. ಗಣಿಗಳಲ್ಲಿ ಸಂಭವಿಸುತ್ತಿದ್ದ ಶಿಲಾಸ್ಫೋಟಗಳು ೬೫೦ ಕಿ.ಮೀ. ದೂರದವರೆಗೂ ಸಿಸ್ಮೋಗ್ರಾಫ್‌ನಲ್ಲಿ ದಾಖಲಾಗುತ್ತಿದ್ದವು. ಈ ಶಿಲಾಸ್ಫೋಟಗಳಿಂದ ಅನೇಕ ಕಾರ್ಮಿಕರು ಪ್ರಾಣ ಕಳೆದುಕೊಂಡಿದ್ದಾರೆ.

ಪ್ರಪಂಚದಲ್ಲಿಯೆ ಹೆಚ್ಚು ಪರಿಣತಿ ಪಡೆದ ಮೈನಿಂಗ್ ಎಂಜಿನಿಯರರು, ಲೋಹತಜ್ಞರು ಮತ್ತು ಹಲವು ರೀತಿಯ ತಂತ್ರಜ್ಞರು ಈ ಗಣಿಗಳಲ್ಲಿ ಕೆಲಸವನ್ನು ನಿರ್ವಹಿಸಿದ ಹೆಗ್ಗಳಿಕೆ ಈ ಚಿನ್ನದ ಗಣಿಗಳಿಗೆ. ಇಲ್ಲಿ ತರಬೇತಿ ಪಡೆದ ಕಾರ್ಮಿಕರು, ಎಂಜಿನಿಯರರು, ತಂತ್ರಜ್ಞರು, ಲೋಹತಜ್ಞರು ದೇಶದಲ್ಲಿ ಅನೇಕ ಗಣಿಗಳು ಮತ್ತು ಕಾರ್ಖಾನೆಗಳು ಪ್ರಾರಂಭವಾಗಲು ಕಾರಣರಾಗಿದ್ದಾರೆ. ಈ ಕಾರಣದಿಂದ ಕೋಚಿಗಣಿಗಳನ್ನು 'ತಾಯಿ ಗಣಿಗಳು' ಎಂದು ಕರೆಯುತ್ತಾರೆ. ಈ ಗಣಿಗಳ ೧೨೧ ವರ್ಷಗಳ ಇತಿಹಾಸದಲ್ಲಿ ಮೊದಲಿನ ಮತ್ತು ಕೊನೆಯ ಕೆಲವು ವರ್ಷಗಳನ್ನು ಬಿಟ್ಟರೆ ಉಳಿದ ಕಾಲದಲ್ಲಿ ಹೆಚ್ಚೆಂದರೆ ೩೫,೦೦೦ ಕಾರ್ಮಿಕರು, ಕಡಿಮೆಯೆಂದರೆ ೧೩,೦೦೦ ಕಾರ್ಮಿಕರು ಕೆಲಸವನ್ನು ನಿರ್ವಹಿಸಿದ್ದಾರೆ.

ಕೋಚಿ ಗಣಿಗಳು ಪ್ರಾರಂಭವಾದಾಗ ಕಾರ್ಮಿಕರಿಗೆ ಕನಿಷ್ಠ ಸವಲತ್ತುಗಳು ಇರಲಿಲ್ಲ. ಕಪ್ಪು ಸುರಂಗಗಳಲ್ಲಿ ಕೆಲಸ ಮಾಡುವಾಗ ಮುಖ್ಯವಾಗಿ ಗಾಳಿ ಮತ್ತು ಬೆಳಕು ಇರಲೇಬೇಕು. ಭೂಮಿಯ ಆಳಕ್ಕೆ ಇಳಿದಷ್ಟೂ ಆಮ್ಲಜನಕ ಕಡಿಮೆಯಾಗುತ್ತ ತಾಪಮಾನ ಏರುತ್ತಾ ಹೋಗುತ್ತದೆ. ಕೆಲಸದ ವೇಳೆಯನ್ನು ಆ ಕಾಲದಲ್ಲಿ ನಿಗದಿಪಡಿಸಿರಲಿಲ್ಲ. ಗುತ್ತಿಗೆದಾರರು ಗುತ್ತಿಗೆ ಆಧಾರದ ಮೇಲೆ ಕೆಲಸ ಮಾಡಿಸುತ್ತಿದ್ದರು. ಪ್ರತಿಯೊಬ್ಬರೂ ಗುಂಪಿನ ಜೊತೆಗೆ ಹೋಗಿ ತಮ್ಮ ಕೆಲಸ ಮುಗಿದ ಮೇಲೆಯೇ ಸುರಂಗಗಳಿಂದ ಮೇಲಕ್ಕೆ ಬರಬೇಕಾಗಿತ್ತು. ಸಾಮಾನ್ಯವಾಗಿ ಸೂರ್ಯ ಮೂಡುವ ಮುನ್ನ ಗಣಿಗಳ ಒಳಕ್ಕೆ ಇಳಿದವರು ಸಾಯಂಕಾಲದ ಹೊತ್ತಿಗೆ ಮೇಲಕ್ಕೆ ಬರುತ್ತಿದ್ದರು. ಆ ಕಾಲಕ್ಕೆ ಕೆಲಸಗಾರರನ್ನು ಕೆಳಗಿಂದ ಮೇಲಕ್ಕೆ, ಮೇಲಿಂದ ಕೆಳಕ್ಕೆ ತರುವ ಯಂತ್ರಗಳು ಸುರಕ್ಷಿತವಾಗಿರಲಿಲ್ಲ. ಕಾರ್ಮಿಕರನ್ನು ಶಿಲಾಸ್ಫೋಟಗಳ ಭೀತಿಯಂತೂ ಯಾವಾಗಲೂ ಕಾಡುತ್ತಲೇ ಇರುತ್ತಿತ್ತು. ಯಾವುದೇ ತರಬೇತಿಯಿಲ್ಲದ ಕಾರ್ಮಿಕರು ಇನ್ನಷ್ಟು ಅಪಾಯಗಳಿಗೆ ಸಿಲುಕಿಕೊಳ್ಳುತ್ತಿದ್ದರು. ಕಾರ್ಮಿಕರ ಕಲ್ಯಾಣ ಅಥವಾ ಗಣಿ ಕಾನೂನುಗಳು ಇಲ್ಲದ ಕಾರಣದಿಂದ ಕಾರ್ಮಿಕರು ಅಪಘಾತಗಳಿಗೊಳಗಾದರೆ ಅಥವಾ ಸತ್ತರೆ ಯಾವುದೇ ಸವಲತ್ತುಗಳು ದೊರಕುತ್ತಿರಲಿಲ್ಲ. ಗುತ್ತಿಗೆದಾರರು ಮತ್ತು ಮೇಲ್ವಿಚಾರಕರು ಕೂಲಿಕಾರರ ಸುರಕ್ಷತೆಗಿಂತ ಕೆಲಸದ ಬಗ್ಗೆಯೆ ಹೆಚ್ಚು ನಿಗಾ ವಹಿಸುತ್ತಿದ್ದರು.

ಮೊದಮೊದಲ ಕಾರ್ಮಿಕರು ಸುರಂಗಗಳಲ್ಲಿ ಎಣ್ಣೆ ದೀಪಗಳನ್ನು ಉರಿಸುತ್ತ ಉಳಿಗಳಿಂದ ಜಂಪರ್ ಹೊಡೆಯುತ್ತ ಕೆಲಸ ಮಾಡುತ್ತಿದ್ದರು. ಬ್ಲಾಸ್ಟಿಂಗ್ ಮಾಡಲು ಗನ್‌ಪುಡಿಯನ್ನು ಉಪಯೋಗಿಸಲಾಗುತ್ತಿತ್ತು. ಮುಂದಿನ ದಿನಗಳಲ್ಲಿ ಕ್ಯಾಂಡಲುಗಳು, ಅನಂತರ ಕಾರ್ಬೈಡ್ ಲ್ಯಾಂಪುಗಳು, ಕೊನೆಯದಾಗಿ ಹೆಲ್ಮೆಟ್‌ಗಳ ಮೇಲೆ ಸಿಕ್ಕಿಸಿಕೊಳ್ಳುವ ಬ್ಯಾಟರಿಗಳು ಬಂದವು. ವಿದ್ಯುತ್ ಇದ್ದರೂ ಶಿಲೆಗಳನ್ನು ಸಿಡಿಸುವ ಸ್ಥಳದವರೆಗೂ ವಿದ್ಯುತ್ತನ್ನು ಜೋಡಿಸಿಕೊಳ್ಳಲಾಗುತ್ತಿರಲಿಲ್ಲ. ಅದು ತೀರ ಅಪಾಯಕಾರಿಯಾಗಿತ್ತು.

ದೇಶದಲ್ಲಿಯೆ ಮೊದಲಬಾರಿಗೆ ಕ್ರಿ.ಶ. ೧೯೦೨ರಲ್ಲಿ ಮೈಸೂರು ಮಹಾರಾಜರು ಕಾವೇರಿ ಕೊಳ್ಳದ ಶಿವನಸಮುದ್ರದಲ್ಲಿ ಜಲ ವಿದ್ಯುತ್ ಸ್ಥಾವರ ನಿರ್ಮಿಸಿ ಕೋಚಿ ಗಣಿಗಳಿಗೆ ವಿದ್ಯುತ್ ಸಂಪರ್ಕವನ್ನು ಕಲ್ಪಿಸಿದರು. ಅಮೆರಿಕಾದ ನಯಾಗರ ಜಲ ವಿದ್ಯುತ್ ಸ್ಥಾವರವನ್ನು ನಿರ್ಮಿಸಿದ ಜನರಲ್ ಎಲೆಕ್ಟ್ರಿಕಲ್ ಕಂಪನಿಯೆ ಶಿವನಸಮುದ್ರದಲ್ಲೂ ಈ ಸ್ಥಾವರವನ್ನು ರೂಪಿಸಿತ್ತು. ಆ ಕಾಲಕ್ಕೆ ೧೪೦ ಕಿ.ಮೀ. ದೂರದಿಂದ ವಿದ್ಯುತ್ ಕಂಬಗಳನ್ನು ನಿಲ್ಲಿಸಿ ವಿದ್ಯುತ್ ಸಂಪರ್ಕ ಕಲ್ಪಿಸಿದ್ದು ಪ್ರಪಂಚದಲ್ಲಿಯೆ ಒಂದು ಅದ್ಭುತ ಕೆಲಸವಾಗಿತ್ತು. ಮೈಸೂರು ರಾಜ್ಯದಲ್ಲಿಯೆ ಪ್ರಥಮ ಬಾರಿಗೆ ಕ್ರಿ.ಶ. ೧೮೬೪ರಲ್ಲಿ ಬೆಂಗಳೂರು - ಮದರಾಸು ನಡುವೆ ಬ್ರಾಡ್‌ಗೇಜ್ ರೈಲು ಮಾರ್ಗವನ್ನು ಹಾಕಲಾಯಿತು. ಕ್ರಿ.ಶ. ೧೮೯೮ರಲ್ಲಿ ಬಂಗಾರಪೇಟೆಯಿಂದ ಕೋಚಿಗ ಪ್ರದೇಶಕ್ಕೆ ೧೬ ಕಿ.ಮೀ. ದೂರದ ಬ್ರಾಡ್‌ಗೇಜ್ ರೈಲು ದಾರಿಯನ್ನು ನಿರ್ಮಿಸಲಾಯಿತು. ಕ್ರಿ.ಶ. ೧೯೧೧ರಲ್ಲಿಯೆ ಕೋಚಿಗ ಜಿಲ್ಲೆಯಲ್ಲಿಯೇ ಹೆಚ್ಚು ಸಾಕ್ಷರತೆಯನ್ನು ಸಾಧಿಸಿತ್ತು. ರಾಜ್ಯದಲ್ಲಿಯೆ ಮೈಸೂರು ಜಿಲ್ಲೆ ನಂತರ ಕ್ರಿ.ಶ. ೧೮೬೯ರಲ್ಲಿ ಕೋಲಾರ ಜಿಲ್ಲೆಯ ಗೆಜೆಟಿಯರನ್ನು ಹೊರತರಲಾಗಿತ್ತು.

ಕ್ರಿ.ಶ. ೧೮೮೪ರ ಸುಮಾರಿಗೆ ಪ್ರಾರಂಭವಾದ ಕೋಚಿ ಗಣಿ ಆಸ್ಪತ್ರೆ ದೇಶದಲ್ಲಿಯೇ ಆ ಕಾಲಕ್ಕೆ ಆಧುನಿಕ ಸವಲತ್ತುಗಳುಳ್ಳ ಸುಸಜ್ಜಿತ ಆಸ್ಪತ್ರೆಯಾಗಿ ಹೆಸರು ಗಳಿಸಿಕೊಂಡಿತ್ತು.

ಒಂದು ಅಂದಾಜಿನಂತೆ ಟನ್ನಿಗೆ ಸರಾಸರಿ ೩ಗ್ರಾಂ ಚಿನ್ನ ದೊರಕುವ ೭.೬೦ ಮಿಲಿಯ ಟನ್ನುಗಳಷ್ಟು ಅದುರು ಚಾಂಪಿಯನ್ ರೀಫ್ ಗಣಿ ಒಂದರಲ್ಲಿಯೆ ಇರುವುದಾಗಿ ತಿಳಿದುಬರುತ್ತದೆ. ಚಾಂಪಿಯನ್ ರೀಫ್ ಜೊತೆಗಿರುವ ಇನ್ನಿತರ ಸಣ್ಣಪುಟ್ಟ ಲೋಡ್‌ಗಳು ಮತ್ತು ಉಳಿದ ೨೫ ಲೋಡ್‌ಗಳಲ್ಲಿಯೂ ಸಣ್ಣ ಪ್ರಮಾಣದಲ್ಲಿ ಚಿನ್ನ ಇರುವುದಾಗಿ ತಿಳಿದುಬರುತ್ತದೆ. ಈ ಎಲ್ಲಾ ಲೋಡ್‌ಗಳಲ್ಲಿ ಹುದುಗಿರುವ ಚಿನ್ನದ ಪ್ರಮಾಣವನ್ನು ಚಿನ್ನದ ಗಣಿಗಳನ್ನು ಮುಚ್ಚುವವರೆಗೂ ಗಣಿ ಆಡಳಿತ ಲೆಕ್ಕ ಹಾಕಲೇ ಇಲ್ಲ. ಇದರ ಜೊತೆಗೆ ಚಿಗುರುಗುಂಟ, ಬಿಸಾನತ್ತಂ ಮತ್ತಿತರ ಗಣಿಗಳಲ್ಲಿ ಚಿನ್ನ ಇರುವುದಾಗಿ ತಿಳಿದುಬರುತ್ತದೆ.

೧೨೧ ವರ್ಷಗಳಲ್ಲಿ ಪುಡಿಮಾಡಿ ಎಸೆದಿರುವ ೫೦ ಮಿಲಿಯ ಟನ್ನುಗಳ ಸೈನಾಡ್ ಮಣ್ಣಿನಲ್ಲಿ ಒಂದು ಟನ್ನಿಗೆ ಸರಾಸರಿ ೧ ಗ್ರಾಂನಿಂದ ೦.೭ಗ್ರಾಂ ಚಿನ್ನ ಉಳಿದಿರುವುದಾಗಿ ಕಂಡುಬರುತ್ತದೆ. ಇದನ್ನು ಮತ್ತೊಮ್ಮೆ ಸಂಸ್ಕರಿಸಿದರೆ ಸರಾಸರಿ ಒಂದು ಟನ್ನು ಮಣ್ಣಿಗೆ ೦.೩ರಿಂದ ೦.೭ ಗ್ರಾಂ ಚಿನ್ನವನ್ನು ಹೊರ ತೆಗೆಯಬಹುದು. ಆದರೆ ಕೋಚಿಗ ಪ್ರದೇಶ ಮತ್ತು ಸುತ್ತಮುತ್ತಲ ಪ್ರದೇಶಗಳು ಈಗಾಗಲೆ ಸೈನಾಡ್ ವಿಷ ಮಣ್ಣಿನಿಂದ ತುಂಬಿಹೋಗಿದ್ದು ಇನ್ನಷ್ಟು ಮಾಲಿನ್ಯಗೊಳ್ಳುತ್ತವೆ. ಮನುಷ್ಯರ ಆರೋಗ್ಯದ ಮೇಲೆ ಭಾರಿ ತೊಂದರೆ ಬೀಳುವುದರ ಜೊತೆಗೆ ಈಗಾಗಲೆ ಬೀಳುಬಿದ್ದಿರುವ ಭೂಮಿ ಇನ್ನಷ್ಟು ಬಂಜರು ಬೀಳುತ್ತದೆ.

ಮೂರು ಕಿ.ಮೀ.ಗಳಿಗಿಂತ ಆಳದ ಶಾಫ್ಟ್‌ಗಳು, ೬೬೬ ಕಿ.ಮೀ.ಗಳು ಉದ್ದದ ಸುರಂಗಗಳು ಈಗಾಗಲೆ ನೀರಿನಿಂದ ತುಂಬಿಹೋಗಿದ್ದು ಈ ನೀರನ್ನು ಕುಡಿಯುವುದಕ್ಕೆ ಮತ್ತು ಕೃಷಿ ಮಾಡುವುದಕ್ಕೆ ಉಪಯೋಗಿಸಿಕೊಳ್ಳುವುದರ ಬಗ್ಗೆ ಒಂದು ಯೋಜನೆಯನ್ನು ಕೋಲಾರ ಜಿಲ್ಲೆಯಲ್ಲಿ ರೂಪಿಸುತ್ತಿರುವುದಾಗಿ ತಿಳಿದುಬರುತ್ತದೆ. ಒಂದು ಅಂದಾಜಿನ ಪ್ರಕಾರ ಎಲ್ಲಾ ಗಣಿಗಳು ನಡೆಯುತ್ತಿದ್ದಾಗ ಎಲ್ಲಾ ಚಿನ್ನದ ಗಣಿಗಳಿಂದ ದಿನಕ್ಕೆ ೯೧,೩೭,೪೬೦ ಲೀಟರುಗಳಷ್ಟು ನೀರನ್ನು ಪಂಪುಗಳಿಂದ ಹೊರಕ್ಕೆ ತೆಗೆಯುತ್ತಿದ್ದುದಾಗಿ ತಿಳಿಯುತ್ತದೆ.

ಎಂ. ವೆಂಕಟಸ್ವಾಮಿ
ದೊಡ್ಡ ಭಜನ ಮಂದಿರ ರಸ್ತೆ, ಸರ್ಜಾಪುರ - ೫೬೨ ೧೨೫
ಬೆಂಗಳೂರು ಜಿಲ್ಲೆ

**'ಕಲಾವಿದರ ಬದುಕು ಸಂಕಷ್ಟಗಳ ಸರಮಾಲೆ'**

ಈ ಥರಾ ಭಾರೀ ಮಾಲೆಗಳ ಬದಲು ನಿಮ್ಮ ಸಂಕಷ್ಟಗಳ ಸರಮಾಲೆನಾದ್ರೂ ಕಡಿಮೆ ಮಾಡಿದ್ರೆ ಚೆನ್ನಾಗಿತ್ತು ಅಲ್ವೇನ್ರೀ?



## ದಂಡೆಯಲ್ಲಿ ನಡೆದು.....

ಸುಮ್ಮನೆ ವಿಸ್ತಾರವಾಗಿ
ಬಿದ್ದುಕೊಂಡಿರುವ ದಂಡೆಯಲ್ಲಿ
ನಡೆದು ಹೋದವರು
ಮತ್ತೆ ಮತ್ತೆ ಬಂದು
ಅಲೆಗಳೊಂದಿಗೆ ತಣ್ಣನೆ ಸಂವಾದ ನಡೆಸಿ
ತಮ್ಮ ಎದೆಯೊಳಗೆ ಬಂಧಿಯಾದವರ
ಚಿತ್ರ ಬಿಡಿಸಿದ್ದಾರೆ.
ಎಷ್ಟೋ ಹೊತ್ತು ಯಾರಿಗೂ ಅರ್ಥವಾಗದ
ಇಷ್ಟವಾಗದ ಮಾತುಗಳನ್ನು
ಚೆಲ್ಲಿದ್ದಾರೆ.
ಅಲ್ಲೇ ಸಣ್ಣ ಬಿಲವೊಂದನ್ನು ತೋಡಿಕೊಂಡ
ಚಿಕ್ಕ ಏಡಿ ಮತ್ತೊಂದನ್ನು
ಕರೆಯುವಂತೆ ಸಂಭಾಷಿಸುತ್ತಿದೆ
ಎಂದುಕೊಂಡವರು
ಇದೇ ದಂಡೆಯಲ್ಲಿ
ಇದೀಗ ದೂರ ನಡೆದಿದ್ದಾರೆ.
ದಂಡೆ ಸುಮ್ಮನೆ ಬಿದ್ದುಕೊಂಡಿರುವುದು
ದೂರ ದಿಗಂತಕ್ಕೆ ಕಾಯ್ದು
ಅಲ್ಲಿಂದ ಬಂದ ಸಂದೇಶದಲೆಗೆ
ಅದು ಹಿತವಾಗಿ ಅಪ್ಪಳಿಸುವುದಕ್ಕೆ
ಇಂಚಿಂಚಾಗಿ ಕರಗುವುದಕ್ಕೆ
ದಂಡೆಯಲ್ಲಿ ನಡೆಯುವಾಗಲೆಲ್ಲ
ದಂಡೆಯ ವಿರಹ
ನನ್ನೆದೆ ದಿಗಂತದಲ್ಲಿ
ಮಡುಗಟ್ಟುತ್ತದೆ.

ಫಾಲ್ಗುಣಗೌಡ ಅಚವೆ
ಕನ್ನಡ ಉಪನ್ಯಾಸಕ
ಅಚವೆ - ೫೮೧ ೩೪೪
ಅಂಕೋಲಾ (ಉ.ಕ.)

## ಪೆನ್ನು

ಎರಡು ಸಲ ತಟ್ಟೆ ಹಿಡಿದುಕೊಂಡು ಹೋದೆ
ಅನ್ನ ಸಿಗಲಿಲ್ಲ; ನನಗೆ ದುಃಖವಾಗಲಿಲ್ಲ
ಎರಡು ಸಲ ಬಟ್ಟಲು ಹಿಡಿದುಕೊಂಡು ಹೋದೆ
ಕಾಫಿ ಸಿಗಲಿಲ್ಲ; ನನಗೆ ದುಃಖವಾಗಲಿಲ್ಲ
ಆದರೆ ನನ್ನ ಪೆನ್ನು ಕಿತ್ತುಕೊಂಡಾಗ ಕಣ್ಣು ತೇವವಾದವು
ಅಂತರಾಳದ ಕುದಿತ ಆವಿಯಾದಂತೆ
ಎದೆ ಒಡೆಯುವ ತಲೆ ಬಿರಿಯುವ
ನನ್ನ ದುಃಖವನ್ನು ತುಂಬಿ ತುಂಬಿ ಸುರಿಯುವ
ಯಾತವಾಗಿದ್ದ ಪೆನ್ನು ಕಳಕೊಂಡಾಗ
ಎಲ್ಲಿ ಹರಿಬಿಡಲಿ ಒಳಗಿನದೆಲ್ಲ
ಹೇಗೆ ತಡೆಹಿಡಿಯಲಿ ಒಳಗಿನದೆಲ್ಲ
ಎಂಬ ಗಾಬರಿ ಚಿಂತೆ ಸುರುವಾಯಿತು
ಭಿಕ್ಷೆಯ ಹಾಗೆ ಬೇಡಿಕೊಂಡೆ ಪೆನ್ನಿಗಾಗಿ
ಕಸಿದವನು ಕರುಣಾಳು ಮರಳಿಸಿದ ಪೆನ್ನನ್ನು
ನನ್ನ ಜೀವದ ಕಣ್ಣನ್ನು ಬಾಯನ್ನು
ನನ್ನ ಕರ್ಮೇಂದ್ರಿಯ ಜ್ಞಾನೇಂದ್ರಿಯಗಳು
ಹೊಮ್ಮಿಸುವ ಪದಸಂಗೀತದ ವೀಣೆಯನ್ನು
ಇಲ್ಲವಾದರೆ
ಕಾರಾಗೃಹ ಮುಳುಗುತ್ತಿತ್ತು ನನ್ನ ಕಣ್ಣೀರಿನಲ್ಲಿ
ಅಕಾಲ ಕವಿತಾಭ್ರೂಣಗಳ
ವಿಕೋಪಿತ ಶರಧಿಯಲ್ಲಿ ಕೊಚ್ಚಿ ಹೋಗುತ್ತಿತ್ತು.

ಬಸವರಾಜ ವಕ್ಕುಂದ
C/o ವಿ. ಬಿ. ಕುಲಕರ್ಣಿ
ಶ್ರೀಕೃಷ್ಣ ಬಿಲ್ಡಿಂಗ್, ಬೆರಕೊತ್ರಿ ಹತ್ತಿರ
ಶಿವಗಿರಿ, ಧಾರವಾಡ - ೫೮೦ ೦೦೭

## ಪವಿತ್ರ ಪ್ರೇಮ

ಅಯ್ಯೋ ಮೂರ್ಖ, ನಿನ್ನನ್ನು ನೀನೇ ನಿನ್ನ
ಹೆಗಲ ಮೇಲೆ ಹೊರಲು ಪ್ರಯತ್ನಿಸುತ್ತಿರುವೆಯಾ !
ಅಯ್ಯೋ ಭಿಕ್ಷು, ನಿನ್ನದೇ ಮನೆ ಬಾಗಿಲಿಗೆ
ಬೇಡಲು ಬಂದಿರುವೆಯಾ ?
ಎಲ್ಲವನ್ನು ಹೊರಬಲ್ಲ ಆತನ ಕೈಗಳಿಗೆ ನಿನ್ನೆಲ್ಲ
ಭಾರಗಳನು ಬಿಡು. ಮತ್ತೆ ವಿಷಾದದಿಂದ
ಹಿಂತಿರುಗಿ ನೋಡಬೇಡ.
ನಿನ್ನ ಆಸೆಯ ಉಸಿರಿನಿಂದ ದೀಪದ ಬೆಳಕು
ಆರಿ ಹೋಗುತಿಹುದು ಕೊಳಕು ಕೈಗಳಿಂದ
ಕಾಣಿಕೆಗಳ ಪಡೆವುದು ಅಪವಿತ್ರ ನೆನಪಿಡು
ಪವಿತ್ರ ಪ್ರೇಮ ನೀಡಿದ್ದನ್ನು ಮಾತ್ರ ಸ್ವೀಕರಿಸು

ಬಂಗಾಳಿಮೂಲ : ರವೀಂದ್ರನಾಥ್ ಟ್ಯಾಗೋರ್
ಕನ್ನಡಕ್ಕೆ : ನವೀನ್ ಹಳೇಮನೆ
ಇಂಗ್ಲಿಷ್ ವಿಭಾಗ, ಬಿಟಿಎಲ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ
ಹೊಸೂರು ರಸ್ತೆ, ಬೆಂಗಳೂರು - ೫೬೦ ೦೯೯




ವಿರಾಜಪೇಟೆಯಲ್ಲಿ ನವಕರ್ನಾಟಕ ಪುಸ್ತಕ ಪ್ರದರ್ಶನ ಯಶಸ್ವಿಯಾಗಿ ನಡೆಯಿತು.
ಶ್ರೀ ಮಲ್ಲೇಸ್ವಾಮಿ, ವಿರಾಜಪೇಟೆ ತಾಲ್ಲೂಕು ವಿದ್ಯಾಧಿಕಾರಿ ಉದ್ಘಾಟಿಸಿದರು.
ಕರ್ನಾಟಕ ಸಂಘದ ಗೌರವ ಕಾರ್ಯದರ್ಶಿ ಶ್ರೀಮತಿ ಪ್ರಭಾ ನಾಣಯ್ಯ ಉಪಸ್ಥಿತರಿದ್ದರು.



# ಪ್ರಸ್ತುತವಿದೆ ಹಿಂದೆಂದಿಗಿಂತಲೂ ಉತ್ತಮವಾದ ಹೊಸ ಸಂತೂರ್

ಇದೀಗ ಹೊಸ ಸಂತೂರ್ ಬಳಸಲು ಇನ್ನಷ್ಟು ಕಾರಣಗಳು

**ನ್ಯಾಚುರಲ್ ಸ್ಕಿನ್ ಸಾಫ್ಟನರ್ಸ್**
ನೀಡುವುದು ಕೋಮಲ
ಹಾಗೂ ನುಣುಪಾದ ತ್ವಚೆ

ಮೈಮರೆಸುವ **ಹೊಸ ಪರಿಮಳ**
ನೀಡುವುದು, ಆಹ್ಲಾದಕರ
ಸ್ನಾನದ ಅನುಭವ

**ಚಂದನ ಮತ್ತು ಅರಿಸಿನದ
ಅಡ್ವಾನ್ಸ್ಡ್ ಎಕ್ಸ್‌ಟ್ರಾಕ್ಟ್ಸ್**
ನೀಡುವುದು
ತಾರುಣ್ಯ ಭರಿತ ತ್ವಚೆ




ಹೊಸ ಸಂತೂರ್

ನಿಮಗೆಂದೇ ವಿಶೇಷವಾಗಿ

FCB+ULKA 42940

**HOSATHU** Kannada Monthly / February 2005 Rs. 10 RNI Regn. No. KARKAN/1999/614 REGD. CPMG / KA / BGE – 7 / 2003-05
Licenced to post without prepayment. Licence No. WPP-14 Posted at Bangalore PSO on the 28th/3rd of every month



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Chief Editor : Dr. G. Ramakrishna